ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಕೆ.ಎಚ್. ರಂಗನಾಥ್

ಎಲ್.ಎನ್. ಮುಕುಂದರಾಜ್




ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

# K.H. RANGANATH

Eminent Parlimentarian Series

Written by
**L.N. Mukundaraj**
Lecturer in Kannada,
Govt. P.U. College, Yalahanka, Ph: 9886946301

**Published** by
Karnataka Legislature Library Committee
Vidhana Soudha, Bangalore-560001.
Page: 286 + xii    Price: 20-00 Rs.



First Edition: 2005 Copies: 2000
**Printed & Designed by**
Government Press, Bangalore.



# ಕೆ.ಎಚ್. ರಂಗನಾಥ್

ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

ಲೇಖಕರು:
**ಎಲ್.ಎನ್. ಮುಕುಂದರಾಜ್**
ಕನ್ನಡ ಉಪನ್ಯಾಸಕರು,
ಸರ್ಕಾರಿ ಪದವಿಪೂರ್ವ ಕಾಲೇಜು, ಯಲಹಂಕ

**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 286 + xii    ಬೆಲೆ: 20/- ರೂ.



ಮೊದಲ ಮುದ್ರಣ: 2005  ಪ್ರತಿಗಳು: 2,000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2004-2005

---

ಅಧ್ಯಕ್ಷರು

ವಿ.ಆರ್. ಸುದರ್ಶನ್

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

ಕೃಷ್ಣ

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

ವಿಶ್ವನಾಥ್ ಪಾಟೀಲ್ ಹೆಬ್ಬಾಳ್

ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು

ಜಿ.ಎಸ್. ಗಡ್ಡದೇವರ ಮಠ

ವಿಧಾನಸಭಾ ಸದಸ್ಯರು

ಆರ್. ಧ್ರುವನಾರಾಯಣ್

ವಿಧಾನಸಭಾ ಸದಸ್ಯರು

ಕಳಕಪ್ಪ ಜಿ. ಬಂಡಿ

ವಿಧಾನಸಭಾ ಸದಸ್ಯರು

ಡಾ|| ವೀರಬಸವಂತರೆಡ್ಡಿ ಮುದ್ನಾಳ್

ವಿಧಾನಸಭಾ ಸದಸ್ಯರು

ಡಾ|| ಚಂದ್ರಶೇಖರ ಬಿ. ಕಂಬಾರ

ವಿಧಾನ ಪರಿಷತ್ ಸದಸ್ಯರು

ಮುಖ್ಯಮಂತ್ರಿ ಚಂದ್ರು

ವಿಧಾನ ಪರಿಷತ್ ಸದಸ್ಯರು

ಉಮಾಶ್ರೀ

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ - ಸಂಪಾದಕ ವರ್ಗ

---

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಟಿ. ರಾಜಣ್ಣ | ಕಾರ್ಯದರ್ಶಿ |
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| ಮಿರ್ಜಾ ಮೆಹ್ದಿ | ಅಧೀನ ಕಾರ್ಯದರ್ಶಿ |
| ಎನ್. ನರಸಿಂಹಮೂರ್ತಿ | ಶಾಖಾಧಿಕಾರಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಜಯಶಂಕರಮೂರ್ತಿ | ಕಾರ್ಯದರ್ಶಿ (ಪ್ರ) |
| ಕೃಷ್ಣೇಗೌಡ | ಸಭಾಪತಿಯವರ ಕಾರ್ಯದರ್ಶಿ |

### ಸಂಪಾದಕರು

ಎಲ್.ಎನ್. ಮುಕುಂದರಾಜ್

ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

10 ನವೆಂಬರ್ 2005

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಎಲ್.ಎನ್. ಮುಕುಂದರಾಜ್ ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಕೆ.ಎಚ್. ರಂಗನಾಥ್ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

ವಿ.ಆರ್. ಸುದರ್ಶನ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೃಷ್ಣ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ನನ್ನ ಮಾತು

20 ಅಕ್ಟೋಬರ್ 2005

ಕರ್ನಾಟಕ ವಿಧಾನಮಂಡಲದ ಗ್ರಂಥಾಲಯ ಸಮಿತಿ ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆಗಾಗಿ ಹಿರಿಯ ನಾಯಕ ಶ್ರೀ ಕೆ.ಎಚ್. ರಂಗನಾಥ್ ಅವರನ್ನು ಕುರಿತು ಪುಸ್ತಕ ಬರೆಸಲು ತೀರ್ಮಾನ ಕೈಗೊಂಡಿತು. ರಂಗನಾಥ್ ಅವರೊಂದಿಗೆ ನಿಕಟ ಸಂಬಂಧವುಳ್ಳ ನಾಡಿನ ಅನೇಕ ಹೆಸರಾಂತ ಲೇಖಕರಿದ್ದರೂ ಅವರಾರಿಗೂ ಈ ಜವಾಬ್ದಾರಿ ವಹಿಸದೆ ನನ್ನ ಹೆಸರನ್ನು ಸೂಚಿಸಿದಾಗ ನಾನು ನಿಜಕ್ಕೂ ಸಂತೋಷಪಟ್ಟೆ.

ರಂಗನಾಥರಂತಹ ಪ್ರಾಮಾಣಿಕ ಮುತ್ಸದ್ದಿಯನ್ನು ಕುರಿತು ಯೋಚಿಸುವುದು ಹಾಗೂ ಬರೆಯುವುದು ಸುಲಭದ ಮಾತಲ್ಲ. ಈ ಹಿಂದೆ ಅವರೆಂದೂ ನನಗೆ ವೈಯಕ್ತಿಕವಾಗಿ ಪರಿಚಿತರಾಗಿರಲಿಲ್ಲ. ರಂಗನಾಥರೊಂದಿಗೆ ಅನೇಕ ವರ್ಷ ಕೆಲಸ ಮಾಡಿದ, ಅವರ ಆಪ್ತ ಕಾರ್ಯದರ್ಶಿಯಾಗಿದ್ದ ಶ್ರೀ ಎನ್. ನರಸಿಂಹಮೂರ್ತಿಯವರು ನನ್ನನ್ನು ರಾಜಾಜಿನಗರದ ರಂಗನಾಥರ ಮನೆಗೆ ಒಂದು ದಿನ ಕರೆದುಕೊಂಡು ಹೋದರು.

ಆ ಹೊತ್ತಿಗಾಗಲೇ ಅವರ ಮನೆಯಲ್ಲಿ ಅವರ ಸ್ನೇಹಿತರು, ಒಡನಾಡಿಗಳು ಅವರ ಊರಿನ ಜನ ಸೇರಿದ್ದರು. ಅವರೊಂದಿಗೆ ರಂಗನಾಥ್ ಹಿರಿಯ ಅಜ್ಜನಂತೆ, ತಂದೆಯಂತೆ, ಅಣ್ಣನಂತೆ, ಸ್ನೇಹಿತನಂತೆ ಮಾತನಾಡುತ್ತಿದ್ದರು. ಅವರ ಮಾತಿನಲ್ಲಿ ಪ್ರೀತಿಯಿತ್ತು. ಸಿಡುಕೂ ನುಸುಳುತ್ತಿತ್ತು. ನನ್ನನ್ನು ನರಸಿಂಹಮೂರ್ತಿ ಪರಿಚಯಿಸಿದರು. ಪುಸ್ತಕ ಬರೆಯುವ ವಿಷಯ ಬಿಟ್ಟು ಉಳಿದೆಲ್ಲವನ್ನೂ ರಂಗನಾಥ್ ಮಾತನಾಡಿದರು. ತಮ್ಮ ಜೀವನದ ಕಥಾಹಂದರವನ್ನು ಬಿಚ್ಚಿಕೊಳ್ಳಲಿಲ್ಲ. ನಾಳೆ ಬನ್ನಿ ಎಂದರು. ನಾನು ಮತ್ತೆ ಅವರು ಹೇಳಿದ ಸಮಯಕ್ಕೆ ಹೋದೆ. ಆಗಲೂ ಅದೇ ಪರಿಸ್ಥಿತಿ. ಇನ್ನೊಮ್ಮೆ ಬನ್ನಿ ಎಂದರು. ಮತ್ತೆ ಹೋದೆ. ಹಿಮಾಲಯದ ಕಂದರಗಳಲ್ಲಿ ಕಾಣೆಯಾಗಿದ್ದ ವೀರಯೋಧ ಚೈತನ್ಯರ ತಂದೆ ತಾಯಿಗಳನ್ನು ಮಾತನಾಡಿಸಲು ಹೋಗಬೇಕು ಇನ್ನೊಮ್ಮೆ ಬನ್ನಿ ಎಂದರು.

ಅವರು ಹೇಳಿದ ಸಮಯಕ್ಕೆ ಮತ್ತೆ ಹೋದೆ. ಅವರು ನನ್ನನ್ನು ತಮ್ಮ ಓದುವ ಕೋಣೆಗೆ ಕರೆದುಕೊಂಡು ಹೋಗಿ ನಿರರ್ಗಳವಾಗಿ ತಮ್ಮ ಬದುಕಿನ ನೆನಪುಗಳನ್ನು ಹೇಳ ತೊಡಗಿದರು. ನಾನು ಬರೆದುಕೊಳ್ಳತೊಡಗಿದೆ. ಮನುಷ್ಯನ ತಾಳ್ಮೆಯನ್ನು ಹಾಗೂ ಕ್ರಿಯಾಶೀಲತೆಯನ್ನು ರಂಗನಾಥರು ಪರೀಕ್ಷಿಸುವ ಬಗೆ ಇದು. ಹಾಗಾಗಿಯೇ ರಂಗನಾಥ್ ಜೀವನದುದ್ದಕ್ಕೂ ಮಾಡಿಕೊಂಡು ಬಂದ ಎಲ್ಲ ಕೆಲಸಗಳೂ ಗಟ್ಟಿಯಾಗಿ ನಿಂತಿದ್ದವು.

ಸಂಸದೀಯ ಪಟು ಪುಸ್ತಕಮಾಲಿಕೆಯ ಪರಿಶೀಲನೆ, ಸಂಪಾದನೆ ಕೆಲಸವನ್ನು ನಿಯೋಜಿಸುವ ಜೊತೆಗೆ ಈ ಪುಸ್ತಕ ರಚಿಸುವ ಹೊಣೆ ಹೊರಿಸಿದ ವಿಧಾನ ಪರಿಷತ್ತಿನ ಗೌರವಾನ್ವಿತ ಸಭಾಪತಿಗಳು ಮಾನ್ಯ ಶ್ರೀ ವಿ.ಆರ್. ಸುದರ್ಶನ್ ಅವರಿಗೆ ಮೊದಲ ಕೃತಜ್ಞತೆ ಸಲ್ಲಿಸಬೇಕು. ಉಪಸಮಿತಿಯ ಅಧ್ಯಕ್ಷರಾದ ಮಾನ್ಯ ಶ್ರೀ ವಿಶ್ವನಾಥ ಪಾಟೀಲ ಹೆಬ್ಬಾಳ್ ಅವರಿಗೂ, ಪ್ರೀತಿಯ ಕವಿ ಹಾಗೂ ಗುರು ಡಾ. ಚಂದ್ರಶೇಖರ ಕಂಬಾರ ಮತ್ತಿತರ ಸಮಿತಿಯ ಎಲ್ಲ ಸನ್ಮಾನ್ಯ ಸದಸ್ಯರಿಗೂ ನಾನು ಋಣಿಯಾಗಿದ್ದೇನೆ.

ಈ ಪುಸ್ತಕ ರಚನೆಗೆ ಒತ್ತಾಸೆಯಾಗಿ ನಿಂತ ಎನ್. ನರಸಿಂಹಮೂರ್ತಿ ಅವರನ್ನು, ಬುದ್ಧ ಪ್ರಜ್ಞೆ ಪುಸ್ತಕದ ಲೇಖನಗಳ ಮರುಬಳಕೆಗೆ ಅವಕಾಶವಿತ್ತ ಎಲ್ಲ ಲೇಖಕರನ್ನೂ, ಸಂಪಾದಕ ಮಿತ್ರರಾದ ನಾಗತಿಹಳ್ಳಿ ರಮೇಶ್ ಅವರನ್ನೂ ಸ್ಮರಿಸಬೇಕು. ಶಾಸಕರಾದ ಕವಿಮಿತ್ರ ಡಾ|| ಎಲ್. ಹನುಮಂತಯ್ಯ, ಪತ್ರಕರ್ತರಾದ ಮನುಪಾಟೀಲ, ಸಂಜಯ್ ದೊರೆ, ಆರ್.ಜಿ. ಹಳ್ಳಿ ನಾಗರಾಜ್ ಹಾಗೂ ಬರವಣಿಗೆಗೆ ಸಹಾಯ ಮಾಡಿದ ಹ.ಕ. ಶ್ರೀನಿವಾಸ್, ಎಲ್.ಜಿ. ಗೀತಾ, ಸೂರ್ಯ, ಸಚಿವಾಲಯದ ಹಿರಿಯ ಅಧಿಕಾರಿಗಳಾದ ಶ್ರೀ ಬಸವರಾಜ್, ಶ್ರೀ ಮಿರ್ಜಾ ಮೆಹ್ದಿ ಹಾಗೂ ಮಿತ್ರರಾದ ಮಂಜುನಾಥ್, ಮುನಿರಾಜ್, ಗೋಪಾಲಕೃಷ್ಣ, ಶಿವಣ್ಣ ಮತ್ತಿತರರಿಗೂ ಕೃತಜ್ಞತೆಗಳು. ಮುದ್ರಿಸಿದ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ, ಡಿ.ಟಿ.ಪಿ. ಶಾಖೆಯ ಜಿ. ದಯಾನಂದ್, ಮುಖ್ಯವಾಗಿ ಈ ಪುಸ್ತಕವನ್ನು ಒಂದೇ ಕೈಯಲ್ಲಿ ಡಿ.ಟಿ.ಪಿ. ಮಾಡಿದ ಸಾಹಸಿ ಬಿ.ಎಂ. ರವಿಕುಮಾರ್ ಮತ್ತಿತರರಿಗೆ ವಂದನೆಗಳು.

ಇಂದು ರಂಗನಾಥರು ಹುಟ್ಟಿದ ದಿನ. ನರಸಿಂಹಮೂರ್ತಿ ಅವರೊಂದಿಗೆ ರಂಗನಾಥರ ಮನೆಗೆ ಹೋಗಿ ಶುಭಾಶಯ ಹೇಳಿ ಹೊರಬಂದೆ. ಅಲ್ಲಿ ನೂರಾರು ಜನ ಸೇರಿ ತಮ್ಮ ಪ್ರೀತಿಯ ನಾಯಕನಿಗೆ ಶುಭ ಕೋರುತ್ತಿದ್ದರು. ಕಾಗೋಡು ಚಳವಳಿ ರೂವಾರಿ, ವಯೋವೃದ್ಧ ಶ್ರೀ ಗಣಪತಿಯಪ್ಪ ಕೂಡ ಬಂದಿದ್ದರು. ಅವರನ್ನು ಕೇಳಿಕೊಂಡ ಕೂಡಲೇ ರಂಗನಾಥರ ಬಗ್ಗೆ ಅಪೂರ್ವವೆನ್ನಿಸುವ ಅಭಿಪ್ರಾಯ ಕೊಟ್ಟರು.

ಗಣಪತಿಯಪ್ಪನವರ ಮಾತಿನಲ್ಲೇ ಹೇಳುವುದಾದರೆ 'ರಂಗನಾಥ್ ನೂರ್ಕಾಲ ಬಾಳಲಿ'. ಇದು ಅಲ್ಲಿದ್ದ ಎಲ್ಲರ ಅಂತರಾಳದ ಆಶಯವಾಗಿತ್ತು.

ಎಲ್.ಎನ್. ಮುಕುಂದರಾಜ್
ಕನ್ನಡ ಉಪನ್ಯಾಸಕರು
ಸರ್ಕಾರಿ ಪದವಿ ಪೂರ್ವ ಕಾಲೇಜು
ಯಲಹಂಕ

# ಪರಿವಿಡಿ



## ಭಾಗ - ೧

## ಭಾಗ - ೨

ಕೃಷಿ ಚಿಂತನೆ



ಸಹಕಾರ ಚಿಂತನೆ



ಅರಣ್ಯ ಪರಿಸರ



ಇತರೆ ವಿಚಾರಗಳು

## ಭಾಗ - ೩

### ಗಣ್ಯರ ದೃಷ್ಟಿಯಲ್ಲಿ



## ಭಾಗ - ೪

ವ್ಯಾಸ ಬೋವಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ,
ಮಂಡೋದರಿ ಕಪ್ಪೆಯ ಮಗಳು
ಕುಲವನರಸದಿರಿಂ ಭೋ! ಕುಲದಿಂದ ಮುನ್ನೇನಾದಿರಿಂ ಭೋ!
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ,
ಕೌಂಡಿನ್ಯನೆಂಬ ಋಷಿ ಮೂರು ಭುವನವನರಿಯೆ
ನಾವಿದ ಕಾಣೆ ಭೋ!
ನಮ್ಮ ಕೂಡಲಸಂಗನ ವಚನವಿಂತೆಂಬುದು
ಶ್ವಪಚೋಪಿಯಾದಡೇನು, ಶಿವಭಕ್ತನೆ ಕುಲಜಂ ಭೋ!



## ಕೆ.ಎಚ್. ರಂಗನಾಥ್

### ಪ್ರಾಮಾಣಿಕ ಬದುಕಿನ ಜೀವಂತ ರೂಪಕ

ನಮ್ಮ ಸಂದರ್ಭದ ಆಧುನಿಕ ಕಾಲದ ರಾಜಕೀಯ ಬದುಕಿನ ಪ್ರಾಮಾಣಿಕತೆಗೆ ಜೀವಂತ ಪ್ರತಿಮೆಯಾಗಿ ನಮ್ಮ ನಡುವೆ ಇರುವ ಹಿರಿಯ ಜೀವ ಶ್ರೀ ಕೆ.ಎಚ್. ರಂಗನಾಥ್. ಎಂಬತ್ತು ವಸಂತಗಳನ್ನು ದಾಟಿದ ಈ ಸ್ವಾತಂತ್ರ್ಯ ಹೋರಾಟಗಾರ, ಸ್ವಾತಂತ್ರ್ಯೋತ್ತರ ಕನ್ನಡನಾಡನ್ನು ನಿರ್ಮಿಸಿದ ನಾಡಶಿಲ್ಪಿಗಳಲ್ಲಿ ಪ್ರಮುಖರು. ದಮನಗೊಂಡ ಶೋಷಿತ ಜನಾಂಗಗಳ ಪರವಾಗಿ ಸದಾಕಾಲ ಹೋರಾಟದ ಧ್ವನಿಯಾಗಿ ಎಚ್ಚರಿಕೆಯಿಂದ ನಿಂತವರು.

# ಕಾವ್ಯಮೋಹಿ ಅಜ್ಜ

ಶೈವಪರಂಪರೆಗೆ ಸೇರಿದ 'ಚಲವಾದಿಗಳು' ಎಂಬ ಅಸ್ಪೃಶ್ಯ ಜನಾಂಗದಲ್ಲಿ ರಂಗನಾಥ್ ಜನ್ಮತಾಳಿದರು. ಚಲವಾದಿಗಳು ಲಿಂಗವಂತ ಸಂಸ್ಕೃತಿಯ ಆಚಾರ ವಿಚಾರಗಳ ಒಂದು ಭಾಗವಾಗಿದ್ದವರು. ಅವರ ತಂದೆ ತಮ್ಮ ಡೈರಿಯೊಂದರಲ್ಲಿ ಬರೆದು ದಾಖಲಿಸಿರುವಂತೆ ರಂಗನಾಥ್ 20 ಅಕ್ಟೋಬರ್ 1926 ರಂದು ಹುಟ್ಟಿದರು. ರಂಗನಾಥ್‌ರ ತಂದೆ ಎಲ್. ಹರಿಹರಪ್ಪನವರು. ತಾಯಿ ಸಿದ್ದಮ್ಮ.

ತಂದೆಯ ತಂದೆ, ಅಂದರೆ ರಂಗನಾಥರ ಅಜ್ಜ ಲಿಂಗಪ್ಪನವರು ಆ ಕಾಲಕ್ಕೆ ಕನ್ನಡ ಭಾಷೆಯನ್ನು ಓದಬಲ್ಲವರಾಗಿದ್ದರು. ಸಾವಿರಾರು ವರ್ಷಗಳಿಂದ ಅಕ್ಷರ ಸರಸ್ವತಿಯ ಅವಕೃಪೆಗೆ ಪಾತ್ರರಾದಂತೆ ಅನಕ್ಷರತೆಯ ಶಾಪದಲ್ಲಿ ನರಳುತ್ತಿದ್ದ ಅಸ್ಪೃಶ್ಯ ಜನಾಂಗದವರಿಗೆ ಓದು ಬರಹ ಕಲಿಯುವ, ಶಾಲೆಗೆ ಪ್ರವೇಶ ಪಡೆಯುವ ಅವಕಾಶಗಳಿಂದ ವಂಚಿತರಾಗಿದ್ದ ಆ ಕಾಲದಲ್ಲಿ ರಂಗನಾಥರ ತಾತ ಲಿಂಗಪ್ಪ ಕನ್ನಡ ಓದನ್ನು ಯಾರಿಂದ ಕಲಿತರು? ಹೇಗೆ ಕಲಿತರು! ಎಂಬುದು ಈಗಲೂ ಆಶ್ಚರ್ಯಕರ ವಿಷಯವಾಗಿದೆ. ಲಿಂಗಪ್ಪನವರು ಸಣ್ಣಪುಟ್ಟ ಕಾಗದ ಪತ್ರಗಳನ್ನು ಓದುವುದು ಮಾತ್ರವಲ್ಲ; ಕನ್ನಡ ಕಾವ್ಯಗಳನ್ನು ಗಂಭೀರವಾಗಿ ಓದಿಕೊಂಡಿದ್ದರು. ಕನ್ನಡ ಪ್ರಾಚೀನ ಕಾವ್ಯಗಳ ಬಗ್ಗೆ ಶ್ರದ್ಧೆ ಹಾಗೂ ಅಪಾರ ತಿಳುವಳಿಕೆ ಹೊಂದಿದ್ದರು.

ರಂಗನಾಥರು ಶಾಲಾಬಾಲಕನಾಗಿದ್ದಾಗ ತಾತ ಲಿಂಗಪ್ಪನವರು ಮೊಮ್ಮಗನಿಗೆ ಕಾವ್ಯ ಪಾಠ ಮಾಡುತ್ತಿದ್ದರಂತೆ. ರಂಗನಾಥರು ಲೋಯರ್ ಸೆಕೆಂಡರಿ ಪರೀಕ್ಷೆಗೆ (ಐದು ರೂಪಾಯಿ ಪರೀಕ್ಷೆ) ಸಿದ್ಧತೆ ನಡೆಸುತ್ತಿದ್ದಾಗ ಪಠ್ಯವಾಗಿದ್ದ ಕನ್ನಡ ಕಾವ್ಯಗಳನ್ನು ಹಾಗೂ 'ಹರಿಹರನ ರಗಳೆ' ಯನ್ನು ತಮ್ಮ ಮೊಮ್ಮಗನಿಗೆ ಹೇಳಿಕೊಡುವ ಗುರುವಾಗಿದ್ದರಂತೆ. ಹರಿಹರನ ರಗಳೆಯ ಜೊತೆಗೆ ಇನ್ನೂ ಅನೇಕ ಮಹತ್ವದ ಕಾವ್ಯಕೃತಿಗಳನ್ನು ನಿರರ್ಗಳವಾಗಿ ಓದಿ ಹೇಳುತ್ತಿದ್ದುದನ್ನು ತಾನು ಕಿವಿಯಾರ ಕೇಳಿ, ಕಣ್ಣಾರೆ ಕಂಡಿದ್ದೇನೆಂದು ರಂಗನಾಥ್ ಈಗಲೂ ಸೋಜಿಗವೆಂಬಂತೆ ನೆನಪು ಮಾಡಿಕೊಳ್ಳುತ್ತಾರೆ.

ಆ ಹರಿಹರ ಕವಿಯ ಕಾವ್ಯದ ಮೇಲಿನ ಪ್ರೀತಿ ಮತ್ತು ಗೌರವದ ಕಾರಣದಿಂದಾಗಿ ತಮ್ಮ ಮಗನಿಗೆ ಅಂದರೆ ರಂಗನಾಥರ ತಂದೆಗೆ ಹರಿಹರಪ್ಪ ಎಂಬ ಹೆಸರಿಟ್ಟಿದ್ದರು. ಈ ಹೆಸರು ಕವಿ ಹರಿಹರನ ಹೆಸರು ಮಾತ್ರವಾಗಿರದೆ, ಲಿಂಗಪ್ಪನವರ ಮೂಲ ನೆಲೆ ಹರಿಹರದ ಆರಾಧ್ಯ ದೈವ ಹರಿಹರೇಶ್ವರನ ಅಂಕಿತವನ್ನೂ ಸೂಚಿಸುತ್ತದೆ.



## ತಂದೆ ಹರಿಹರಪ್ಪ

ರಂಗನಾಥರ ತಂದೆ ಹರಿಹರಪ್ಪನವರು ಮಿಡ್ಲ್‌ಸ್ಕೂಲಿನವರೆಗೆ ಓದಿ 1916ರಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆ ಪಾಸು ಮಾಡುತ್ತಾರೆ. ಮುಂದೆ ವಿದ್ಯಾಭ್ಯಾಸ ಮುಂದುವರೆಸಲು ಸಾಧ್ಯವಾಗದೆ ಒಂದಷ್ಟು ವರ್ಷ ಸುಮ್ಮನೆ ಕುಳಿತರೂ ಓದುವ ಹಂಬಲ ತೀವ್ರಗೊಳ್ಳುವ ಕಾರಣ ಕಾಲೇಜಿಗೆ ಸೇರುತ್ತಾರೆ. ಹರಿಹರಪ್ಪನವರಿಗೂ ಅವರ ಜೊತೆ ಓದುತ್ತಿದ್ದ ಇತರೆ ವಿದ್ಯಾರ್ಥಿಗಳಿಗೂ ವಯಸ್ಸಿನ ಅಪಾರ ಅಂತರ ಹಾಗೂ ಅಸಮಾನತೆಯಿಂದಾಗಿ ಬೇಸರಗೊಂಡು ಕಾಲೇಜು ವಿದ್ಯಾಭ್ಯಾಸವನ್ನು ಅರ್ಧಕ್ಕೆ ನಿಲ್ಲಿಸುತ್ತಾರೆ.

ಶತ ಶತಮಾನಗಳಿಂದ ಹತಭಾಗ್ಯರಾಗಿ ವಿದ್ಯಾಭ್ಯಾಸದ ಅವಕಾಶದಿಂದ ವಂಚಿತರಾಗಿದ್ದ ಅಸ್ಪೃಶ್ಯ ಜನಾಂಗಕ್ಕೆ 1916ರಿಂದ ಶಾಲಾ ಕಾಲೇಜುಗಳಿಗೆ ಪ್ರವೇಶ ಪಡೆಯಲು ಹಾಗೂ ಇಂಗ್ಲೀಷ್ ವಿದ್ಯಾಭ್ಯಾಸ ಮಾಡಲು ಅವಕಾಶ ಕಲ್ಪಿಸಲಾಗುತ್ತದೆ. ಪ್ರಗತಿಪರ ಹಾಗೂ ವೈಚಾರಿಕ ನಿಲುವುಗಳ ಕಂಠೀರವ ನರಸಿಂಹರಾಜ ಒಡೆಯರು ಅಸ್ಪೃಶ್ಯ ಜನಾಂಗದವರ ಇಂಗ್ಲೀಷ್ ಕಲಿಕೆಗೆ ಅವಕಾಶ ಕಲ್ಪಿಸುತ್ತಾರೆ. ಆ ಕಾಲದ ಮತ್ತೊಬ್ಬ ಪ್ರಗತಿಪರ ಚಿಂತಕ ರಾಜ್ಯದ ಶಿಕ್ಷಣ ಇಲಾಖೆಯ ಇನ್‌ಸ್ಪೆಕ್ಟರ್ ಜನರಲ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್ ಆಗಿದ್ದ ದಿವಂಗತ ಡಾ|| ಸಿ.ಆರ್. ರೆಡ್ಡಿ ಅವರ ಒತ್ತಾಯ ಮತ್ತು ಪ್ರೋತ್ಸಾಹದಿಂದಾಗಿ 1916ರಲ್ಲಿ ಸರ್ಕಾರ ಕ್ರಾಂತಿಕಾರಕ ಎನ್ನಬಹುದಾದ ಈ ಆದೇಶವನ್ನು ಜಾರಿಗೆ ತರುತ್ತದೆ.

ಈ ಬಗ್ಗೆ ಕೆ.ಎಚ್. ರಂಗನಾಥ್ ಅವರು 28 ಮಾರ್ಚ್ 1984ರಂದು ವಿಧಾನಸಭೆಯಲ್ಲಿ ಶಿಕ್ಷಣ ಇಲಾಖೆಯ ರೀತಿನೀತಿಗಳನ್ನು ಕುರಿತು ಮಾತನಾಡುವಾಗ ಕೆಳಗಿನಂತೆ ದಾಖಲಿಸುತ್ತಾರೆ. *"ನಮ್ಮ ರಾಜ್ಯದಲ್ಲಿ ಅದರಲ್ಲೂ ಹಳೆಯ ಮೈಸೂರಿನಲ್ಲಿ 1916ನೇ ಇಸವಿಯಲ್ಲಿ ಸಿ.ಆರ್. ರೆಡ್ಡಿಯವರು ಅಂದಿನ ಐ.ಜಿ.ಪಿ.ಆಗಿದ್ದರು. ನಾನು ಏತಕ್ಕೆ ಅವರ ಹೆಸರು ಹೇಳುತ್ತಿದ್ದೇನೆಂದರೆ 1916ಕ್ಕೆ*

*ಮುಂಚೆ ಹಳೆಯ ಮೈಸೂರಿನಲ್ಲಿ ನಿಮ್ನ ವರ್ಗದವರು ಪ್ರೈಮರಿ 4ನೇ ತರಗತಿಯವರೆಗೆ ಓದಿ ಮನೆಗೆ ಹೋಗಬೇಕಾಗಿತ್ತು. ಅಂದಿನ ಯುವರಾಜರಾದ ಕಂಠೀರವ ನರಸಿಂಹರಾಜ ಒಡೆಯರ್ ಅವರ ಸಹಾಯ ಮತ್ತು ಸಹಕಾರದಿಂದ ನಿಮ್ನ ವರ್ಗದವರೂ ಕೂಡ ಇಂಗ್ಲೀಷ್ ಶಾಲೆಗೆ ಸೇರಬಹುದೆಂದು ಸರ್ಕಾರಿ ಆಜ್ಞೆಯಾಯಿತು. ನಮ್ಮ ತಂದೆಯವರು ಇದನ್ನು ಹೇಳುತ್ತಿದ್ದರು. He was the first beneficiary of that Government Order.......'** *

ರಂಗನಾಥರೇ ದಾಖಲಿಸುವಂತೆ ಈ ಸರ್ಕಾರಿ ಆಜ್ಞೆಯ ಮೊದಲ ಫಲಾನುಭವಿ ಅವರ ತಂದೆ ಹರಿಹರಪ್ಪ. ಅವರು 4ನೇ ತರಗತಿಯವರೆಗೆ ಓದಿ ಇಂಗ್ಲೀಷ್ ವಿದ್ಯಾಭ್ಯಾಸದ ಅವಕಾಶವಿಲ್ಲದ ಕಾರಣ ಶಾಲೆ ಬಿಟ್ಟು ಮನೆತನದ ಬಟ್ಟೆ ವ್ಯಾಪಾರದ ಕಸುಬನ್ನು ತಮ್ಮ ಚಿಕ್ಕಪ್ಪನೊಂದಿಗೆ ಮಾಡತೊಡಗುತ್ತಾರೆ.

ಹರಿಹರಪ್ಪನವರ ಜೀವದ ಗೆಳೆಯ, ಬಾಲ್ಯಕಾಲದ ಸಹಪಾಠಿ ಕೆ. ಕೆಂಚಪ್ಪನವರು ಈ ಹೊತ್ತಿಗಾಗಲೇ ತಮ್ಮ ಉನ್ನತ ವಿದ್ಯಾಭ್ಯಾಸವನ್ನು ಮುಂದುವರೆಸಿರುತ್ತಾರೆ. ನಿಮ್ನ ವರ್ಗದವರಿಗೆ ಇಂಗ್ಲೀಷ್ ಕಲಿಯುವ ಅವಕಾಶದ ಸರ್ಕಾರಿ ಆದೇಶ ಹೊರಬಿದ್ದಾಗ ಸಂತಸಗೊಂಡು ತಮ್ಮ ಮಿತ್ರ ಹರಿಹರಪ್ಪನವರನ್ನು ಮತ್ತೆ ವಿದ್ಯಾಭ್ಯಾಸ ಮುಂದುವರೆಸುವಂತೆ ಒತ್ತಾಯಿಸುತ್ತಾರೆ.

ಕೆಂಚಪ್ಪನವರ ಒತ್ತಾಯಕ್ಕೆ ಕಟ್ಟುಬಿದ್ದು ಹರಿಹರಪ್ಪ ತಮ್ಮ ಹದಿನಾರನೇ ವಯಸ್ಸಿನಲ್ಲಿ ಮಾಧ್ಯಮಿಕ ಶಾಲೆಗೆ ಪುನರ್ ಪ್ರವೇಶ ಪಡೆಯುತ್ತಾರೆ. ತನಗಿಂತ ವಯಸ್ಸಿನಲ್ಲಿ ಕಿರಿಯರಾದ ಹುಡುಗರೊಂದಿಗೆ ತಲೆಗೆ ಪೇಟ ಕಟ್ಟಿಕೊಂಡು ಶಾಲೆಯಲ್ಲಿ ಕುಳಿತುಕೊಳ್ಳಬೇಕಾದ ಕಿರಿಕಿರಿ ಹರಿಹರಪ್ಪನವರಿಗೆ ಉಂಟಾಗುತ್ತದೆ. ಮೆಟ್ರಿಕ್ಯುಲೇಷನ್ ಪರೀಕ್ಷೆ ಮುಗಿಸಿ ಕಾಲೇಜು ಮೆಟ್ಟಿಲು ಹತ್ತುವ ಸಂದರ್ಭ ಬಂದಾಗ ಚಿಕ್ಕವಯಸ್ಸಿನ ಸಹಪಾಠಿಗಳೊಂದಿಗೆ ಅವರಿಗಿಂತ ದೊಡ್ಡವನಾದ ತಾನು ಹೇಗೆ ಕಲಿಯಬೇಕೆಂಬ ಸಂಕೋಚ ಭಾವದಿಂದ ಕಾಲೇಜು ವಿದ್ಯಾಭ್ಯಾಸಕ್ಕೆ ಎಳ್ಳುನೀರು ಬಿಟ್ಟು ಮತ್ತೆ ಮನೆಗೆ ಹಿಂದಿರುಗುತ್ತಾರೆ. ಮನೆ ಮಂದಿಗೆ ನೆರವಾಗುವ ಉದ್ದೇಶದಿಂದ ದುಡಿಮೆಯ ದಾರಿ ಹಿಡಿಯುತ್ತಾರೆ. ತಾವು ಓದುವುದನ್ನು ಬಿಟ್ಟರೂ ತಮ್ಮ ಮಿತ್ರ ಕೆಂಚಪ್ಪನವರ ಮುಂದಿನ ವಿದ್ಯಾಭ್ಯಾಸಕ್ಕೆ ತಮ್ಮ ಸಹಾಯ ಹಸ್ತ ಚಾಚುತ್ತಾರೆ.

ರಂಗನಾಥರ ತಂದೆ ಹರಿಹರಪ್ಪನವರು ಹುಟ್ಟಿದ್ದು 1900ರಲ್ಲಿ. ಕೆಂಚಪ್ಪ ಅವರಿಗಿಂತ ಒಂದೆರಡು ವರ್ಷ ಚಿಕ್ಕವರು. ಹರಿಹರಪ್ಪ ಅಸ್ಪೃಶ್ಯ

* ವಿಧಾನ ಸಭೆಯ ನಡವಳಿಕೆ, 28 ಮಾರ್ಚ್ 1984, ಪುಟ 565.

ಜನಾಂಗದವರಾದರೆ, ಕೆಂಚಪ್ಪ ವ್ಯವಸಾಯ ಮಾಡುವ ಶೂದ್ರ ಸಮುದಾಯದ ಕುಂಚಿಟಿಗ ಜನಾಂಗದವರು. ಜಾತಿಯಲ್ಲಿ ಇಬ್ಬರಿಗೂ ಅಜಗಜಾಂತರ. ಅದು ಬ್ರಿಟಿಷರು ಹಾಗೂ ಮಹಾರಾಜರ ಆಡಳಿತದ ಕಾಲಘಟ್ಟ. ಜಾತಿ ಮತ ಮೌಢ್ಯ ಅನಕ್ಷರತೆ ಹಾಗೂ ಬಡತನಗಳ ಅಸಮಾನತೆಯ ಬೇಗೆಯಲ್ಲಿ ಜನ ಕುದಿಯುತ್ತಿದ್ದ ಕಾಲ. ಈ ಎಲ್ಲ ಎಲ್ಲೆಕಟ್ಟುಗಳನ್ನು ಮೀರಿ ಈ ಇಬ್ಬರೂ ಜೀವದ ಗೆಳೆಯರಾಗಿದ್ದದ್ದು ಒಂದು ಮಹತ್ವದ ವಿಚಾರ. ಪ್ರಗತಿಪರ ಆಲೋಚನೆಗಳನ್ನು ಈ ಇಬ್ಬರು ಗೆಳೆಯರೂ ಮೈಗೂಡಿಸಿಕೊಂಡಿದ್ದರು. ಅನೇಕ ಸಾರ್ವಜನಿಕ ಕೆಲಸಗಳಲ್ಲಿ ಇಬ್ಬರೂ ತೊಡಗಿಸಿಕೊಂಡಿದ್ದರು. ವೈಚಾರಿಕ ಚಿಂತನೆ, ಆಧುನಿಕ ಮನೋಭಾವ, ಹೊಸ ದೃಷ್ಟಿಕೋನಗಳಿಂದ ಸಾರ್ವಜನಿಕ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರು.

ಕೆಂಚಪ್ಪನವರಂತಹ ಹಲವಾರು ಮಿತ್ರರನ್ನು ರಂಗನಾಥರ ತಂದೆ ಹರಿಹರಪ್ಪನವರು ಆ ಕಾಲದಲ್ಲಿ ಪಡೆದಿದ್ದರು. ಅವರೆಲ್ಲ ವಿವಿಧ ಜಾತಿ ಮತ ವರ್ಗಗಳಿಗೆ ಸೇರಿದವರಾಗಿದ್ದರು. ಭಾವಸಾರ ಕ್ಷತ್ರಿಯ ಜನಾಂಗಕ್ಕೆ ಸೇರಿದ ಶ್ರೀಮಂತ ಕುಟುಂಬದ ಗಣಪತರಾವ್ ತೇಲ್ಕರ್ ಎಂಬ ಮತ್ತೊಬ್ಬ ಮಿತ್ರನ ನಂಟು ಹರಿಹರಪ್ಪನವರಿಗೆ ಇತ್ತು. ಶಿವಮೊಗ್ಗ ನಗರ ವಾಸಿಯಾಗಿದ್ದ ಶೂದ್ರ ಸಮುದಾಯಕ್ಕೆ ಸೇರಿದ ಮತ್ತೊಬ್ಬ ಗೆಳೆಯ ಸಿದ್ದೋಜಿರಾವ್ ಎಂಬುವವರು ಹರಿಹರಪ್ಪ ಅವರಿಗೆ ಆತ್ಮೀಯರಾಗಿದ್ದರು.

ಜಾತಿಮತಗಳ ಗೋಜಲಿಗೆ ಸಿಲುಕದೆ ಅಸ್ಪೃಶ್ಯತೆಯನ್ನು ಖಂಡಿಸುವ, ವರ್ಗ ವರ್ಗಗಳ ತಾರತಮ್ಯಕ್ಕೆ ಅಂಟಿಕೊಳ್ಳದೆ ಮೇಲುಕೀಳಿನ ಭಾವವನ್ನು ತೊಡೆಯುವ, ಪ್ರತಿಗಾಮಿತನದ ಮೌಢ್ಯಗಳನ್ನು ಧಿಕ್ಕರಿಸುವ ವಿನೂತನ ಪ್ರಗತಿಪರ ವಿಚಾರಗಳಿಗೆ ಈ ಎಲ್ಲ ಗೆಳೆಯರು ವೈಚಾರಿಕ ಪ್ರತಿಕ್ರಿಯೆ ತೋರುವ ಸಮೂಹವಾಗಿ ಬಾಳುತ್ತಿದ್ದುದ್ದನ್ನು ರಂಗನಾಥರು ಬಾಲ್ಯದಲ್ಲಿಯೇ ಕಂಡಿದ್ದರು. ಅವರ ಅರಳುವ ಎಳೆಯಕಣ್ಣುಗಳು ಹೀರಿಕೊಂಡಿದ್ದು ಉರಿಯುವ ಸೂರ್ಯತೇಜದ ವೈಚಾರಿಕ ದೀಪ್ತಿಗಳನ್ನು. ಅವರು ಈ ವಾತಾವರಣದ ಇಂತಹ ಪ್ರಗತಿಪರ ವಿಚಾರಗಳಿಗೆ ತಮ್ಮನ್ನು ತಾವು ಮುಕ್ತವಾಗಿ ತೆರೆದುಕೊಂಡಿದ್ದರು. ರಂಗನಾಥರ ಮುಂದಿನ ಪ್ರಗತಿಪರ ಜೀವನ ವಿಧಾನಕ್ಕೆ ತಂದೆಯ ಈ ಮಿತ್ರರ ತಂಡ ಅಪಾರ ಪ್ರಭಾವ ಬೀರಿತ್ತು. ಒಂದರ್ಥದಲ್ಲಿ ವೈಚಾರಿಕ ಮನೋಭಾವದ ಪ್ರಭಾವ ಎಂಬುದು ರಂಗನಾಥರಿಗೆ ತಮ್ಮ ಮನೆಯಲ್ಲೇ ಮೂಡಿದ ದಿವ್ಯ ಬೆಳಕಿನಂತಿತ್ತು.

## ತಂದೆಯ ಮೂಲಕ ಅಂಬೇಡ್ಕರ್

ಕೆಂಚಪ್ಪನವರು ಎಂ.ಎ, ಎಲ್.ಎಲ್.ಬಿ. ಪದವಿ ಗಳಿಸುವ ಉದ್ದೇಶದಿಂದ ಬೊಂಬಾಯಿಯ ಫರ್ಗ್ಯುಸನ್ ಕಾಲೇಜಿನಲ್ಲಿ ಕಾನೂನು ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿದ್ದರು. ಗೆಳೆಯನನ್ನು ಭೇಟಿ ಮಾಡಲು ಹರಿಹರಪ್ಪ ಆಗಾಗ ಪೂನಾ ಹಾಗೂ ಬೊಂಬಾಯಿಗೆ ಹೋಗಿಬರುವ ಹವ್ಯಾಸ ಇಟ್ಟುಕೊಂಡಿದ್ದರು.

1928-29ರ ಸಂದರ್ಭ. ಈ ಕಾಲಮಾನದಲ್ಲಿ ಡಾ|| ಬಾಬಾ ಸಾಹೇಬ್ ಅಂಬೇಡ್ಕರ್ ಇಡೀ ಮಹಾರಾಷ್ಟ್ರವನ್ನು ತಮ್ಮ ಚಳವಳಿ ಹಾಗೂ ಚಿಂತನೆಗಳ ಮೂಲಕ ಪ್ರಭಾವಿಸುತ್ತಿದ್ದರು. ಮಹಾರಾಷ್ಟ್ರದ ಮಣ್ಣಿನಲ್ಲಿ ಮೂಡಿದ ಆ ಹೊಸ ಪ್ರಭಾವಲಯ ಇಡೀ ದೇಶಕ್ಕೆ ವಿಸ್ತರಣೆಯಾಗುತ್ತಿತ್ತು. ಕೆಂಚಪ್ಪನವರ ಕಾರಣದಿಂದ ಮಹಾರಾಷ್ಟ್ರಕ್ಕೆ ಭೇಟಿಕೊಡುತ್ತಿದ್ದ ಹರಿಹರಪ್ಪನವರೂ ಕೂಡ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ವೈಚಾರಿಕ ಆಕರ್ಷಣೆಗೆ ಒಳಗಾಗುತ್ತಾರೆ.

ಈ ಕಾಲಸಂದರ್ಭದ ಮತ್ತೊಂದು ಮಹತ್ವದ ಬೆಳವಣಿಗೆ ಜಸ್ಟೀಸ್ ಪಕ್ಷ. ಮದರಾಸಿನಲ್ಲಿ ಚಿಗುರೊಡೆದ ಈ ಜಸ್ಟೀಸ್ ಪಕ್ಷದ ಪ್ರಭಾವ ಮಹಾರಾಷ್ಟ್ರಕ್ಕೂ ವ್ಯಾಪಿಸುತ್ತಿತ್ತು. ಮೊದಮೊದಲಿಗೆ ಜಸ್ಟೀಸ್ ಪಕ್ಷದ ಮೇಲೆ ಹಿಡಿತ ಹೊಂದಿದ್ದ ಮೇಲ್ವರ್ಗದವರು ಕ್ರಮೇಣ ಹಿಂದೆ ಸರಿಯುತ್ತಾರೆ. ಇಡೀ ಪಕ್ಷವೇ ಬ್ರಾಹ್ಮಣ ವಿರೋಧಿ ಚಳವಳಿಯ ಕೇಂದ್ರ ನೆಲೆಯಾಗಿ ಮಾರ್ಪಡುತ್ತದೆ.

ಇಂತಹ ಚಳುವಳಿಗಳಿಗೆ ಈಗಾಗಲೇ ಸ್ವಭಾವತಃ ತೆರೆದುಕೊಂಡಿದ್ದ ಮಹಾರಾಷ್ಟ್ರದಲ್ಲಿ ಜಸ್ಟೀಸ್ ಪಕ್ಷದ ಪ್ರಭಾವ ಗಟ್ಟಿಗೊಳ್ಳತೊಡಗುತ್ತದೆ. ಸಹಜವಾಗಿ ಇದು ಹರಿಹರಪ್ಪ ಮಿತ್ರಕೂಟವನ್ನು ಆಕರ್ಷಿಸುತ್ತದೆ. ಅದು ಅಲ್ಲಿಂದ ಹರಿಹರಪ್ಪನವರ ಮನೆಯನ್ನೂ ತಲುಪುತ್ತದೆ. ಬೆರಗುಗಣ್ಣಿನ ಬಾಲಕ ರಂಗನಾಥ್, ತಾವು ಇದ್ದಲ್ಲಿಯೇ ಹೊಸ ಜಗತ್ತಿನ ಕನಸುಗಳನ್ನು ಮುಂದಿನ ಕಾಣ್ಕೆಗಳನ್ನು ಹಾಗೂ ಹೆಜ್ಜೆಗಳನ್ನು ಗ್ರಹಿಸುತ್ತಾರೆ. ಮುಂದಿನ ತಮ್ಮ ಬೆಳವಣಿಗೆಗೆ ಪೋಷಕಾಂಶಗಳನ್ನು ಪಡೆಯುತ್ತಾರೆ.



## ಕುಂಚಿಟಿಗರ ಹಾಸ್ಟೆಲ್!

ಲೋಯರ್ ಸೆಕೆಂಡರಿ ಪರೀಕ್ಷೆಯನ್ನು ಜಗಳೂರಿನಲ್ಲಿ ಓದಿ ಪಾಸು ಮಾಡಿದ ರಂಗನಾಥ್ ಅವರು ಹೈಯರ್ ಸೆಕೆಂಡರಿ ಪ್ರೌಢಶಾಲೆ ವಿದ್ಯಾಭ್ಯಾಸಕ್ಕಾಗಿ ಚಿತ್ರದುರ್ಗಕ್ಕೆ ಬರುತ್ತಾರೆ. ಬೊಂಬಾಯಿಯಲ್ಲಿ ಕಾನೂನು ಕಲಿತ ಕೆಂಚಪ್ಪನವರು ಆ ಹೊತ್ತಿಗೆ ಚಿತ್ರದುರ್ಗಕ್ಕೆ ಬಂದು ವಕೀಲರಾಗಿ ತಮ್ಮ ವೃತ್ತಿ ಜೀವನ ಪ್ರಾರಂಭಿಸಿರುತ್ತಾರೆ. ಶೂದ್ರ ಸಮುದಾಯದ ಶೈಕ್ಷಣಿಕ ಏಳಿಗೆಯ ಬಗ್ಗೆ ಗಂಭೀರ ಆಲೋಚನೆಗಳಿದ್ದ ಕೆಂಚಪ್ಪನವರು ಇದೇ ಕಾರಣಕ್ಕಾಗಿ ಚಿತ್ರದುರ್ಗದಲ್ಲಿ 'ಕುಂಚಿಟಿಗರ ವಿದ್ಯಾರ್ಥಿ ನಿಲಯ' ಪ್ರಾರಂಭಿಸುತ್ತಾರೆ.

ಅದು ಹೆಸರಿಗೆ ಮಾತ್ರ ಕುಂಚಿಟಿಗರ ಹಾಸ್ಟೆಲ್! ಆದರೆ ಅಲ್ಲಿ ಎಲ್ಲ ಜಾತಿಯ, ಎಲ್ಲ ಮತದ ವಿದ್ಯಾರ್ಥಿಗಳಿಗೂ ಪ್ರವೇಶಾವಕಾಶ ಕಲ್ಪಿಸಿದ್ದರು. ಒಬ್ಬ ಮುಸಲ್ಮಾನ್ ವಿದ್ಯಾರ್ಥಿಯೂ ಇದ್ದರು. ವಿವಿಧ ಜಾತಿ ಜನಾಂಗಗಳ, ವರ್ಣ ವರ್ಗಗಳ ಹುಡುಗರು ಯಾವುದೇ ತಾರತಮ್ಯ ಭೇದ ಭಾವವಿಲ್ಲದೆ ಒಂದೇಕಡೆ ಊಟ ಮಾಡುವ, ಒಂದೇಕಡೆ ಮಲಗುವ ಅವಕಾಶ ಪಡೆದಿದ್ದರು.

ಈ ಮಕ್ಕಳಿಗೆ ಸ್ವತಃ ಕೆಂಚಪ್ಪನವರ ಪತ್ನಿ ಶ್ರೀಮತಿ ದೇವಮ್ಮನವರೇ ಮೇಲ್ವಿಚಾರಕರಾಗಿ ಕೆಲಸ ಮಾಡುತ್ತಿದ್ದರಂತೆ. ಈಗಾಗಲೇ ತಿಳಿದಂತೆ ರಂಗನಾಥರ ತಂದೆ ಹರಿಹರಪ್ಪನವರಿಗೂ, ಹಾಸ್ಟೆಲ್ ಸ್ಥಾಪಕ ಕೆಂಚಪ್ಪನವರಿಗೂ ಗಾಢ ಸ್ನೇಹ ಇದ್ದುದರಿಂದ ರಂಗನಾಥ್ ಆ ವಿದ್ಯಾರ್ಥಿ ನಿಲಯಕ್ಕೆ ಬಹಳ ಸುಲಭವಾಗಿ ಪ್ರವೇಶ ಪಡೆಯುತ್ತಾರೆ.

# ಹೊಸ ಪರಿಸರದ ಹೊಸ ಪ್ರೇರಣೆ

1939-40ರ ಆ ಕಾಲಘಟ್ಟ ಸ್ವಾತಂತ್ರ್ಯ ಚಳುವಳಿ ತೀವ್ರಗೊಳ್ಳುತ್ತಿದ್ದ ಕಾಲಘಟ್ಟವಾಗಿತ್ತು. ಇಡೀ ದೇಶ ಚಳುವಳಿಮಯವಾಗಿತ್ತು. ಎಲ್ಲೆಡೆ ಸ್ವಾತಂತ್ರ್ಯ ಚಳುವಳಿಯ ಜ್ವಾಲೆಗಳು ಭುಗಿಲೇಳುತ್ತಿದ್ದ ಕಾಲವಾಗಿತ್ತು. ಮಹಾತ್ಮಾ ಗಾಂಧಿ ನೇತೃತ್ವದಲ್ಲಿ ಕಾಂಗ್ರೆಸ್ ಬ್ರಿಟಿಷರ ವಿರುದ್ಧ ಅನೇಕ ಸತ್ಯಾಗ್ರಹಗಳನ್ನು ನಿರಂತರ ರೂಪಿಸುತ್ತಿತ್ತು. ಕಾಂಗ್ರೆಸ್ಸಿನ ಈ ಹೋರಾಟದ ತೀವ್ರತೆಯಿಂದ ಹೊರಗುಳಿದ ವಿಚಾರಶೀಲ ಸ್ವಾತಂತ್ರ್ಯಪ್ರೇಮಿ ಎನ್ನಿಸಿಕೊಂಡ ದೇಶವಾಸಿಯೇ ಇರಲಿಲ್ಲ. ಎಲ್ಲರಲ್ಲೂ ದೇಶಪ್ರೇಮ ಜಾಗೃತಗೊಂಡಿತ್ತು. ರೈತರು ಕಾರ್ಮಿಕರು, ವಿದ್ಯಾರ್ಥಿಗಳು...... ಹೀಗೆ ಎಲ್ಲ ವರ್ಗದ ಯುವಜನತೆ ಸ್ವಾತಂತ್ರ್ಯದ ಹಂಬಲಕ್ಕೆ ದೀಕ್ಷಾಬದ್ಧವಾಗಿತ್ತು.

ಮೈಸೂರು ಪ್ರಾಂತ್ಯದಲ್ಲಿ ಗಾಂಧಿ ಚಳುವಳಿ ಹಾಗೂ ಕಾಂಗ್ರೆಸ್ ಹೋರಾಟಗಳು ಇದೇ ಸಂದರ್ಭದಲ್ಲಿ ರೂಪುಗೊಳ್ಳತೊಡಗಿದವು. ಕಾಂಗ್ರೆಸ್ ಪಕ್ಷದ ಸಂಘಟನೆ ಪ್ರಬಲಗೊಂಡು ಸ್ವಾತಂತ್ರ್ಯ ಚಳವಳಿ ದಿನೇ ದಿನೇ ಅಭಿವೃದ್ಧಿಗೊಳ್ಳುತ್ತಿತ್ತು. ಮೈಸೂರು ಕಾಂಗ್ರೆಸ್ಸಿನ ಬೆಳವಣಿಗೆಗೆ ಅನೇಕರು ಪರಿಶ್ರಮ ಪಡುತ್ತಿದ್ದರು. ರಂಗರಾವ್, ಹುಲ್ಲೂರು ಶೀನಿವಾಸ ಜೋಯಿಸ್ ಮುಂತಾದವರು ಕಾಂಗ್ರೆಸ್ ಸಂಘಟನೆಯ ನೇತೃತ್ವ ವಹಿಸಿದ್ದರು.

ಚಿತ್ರದುರ್ಗ ಜಿಲ್ಲೆಯೂ ಈ ಸಂಘಟನೆಗೆ ಹಾಗೂ ಚಳವಳಿಗೆ ಹೊರತಾಗುಳಿಯದೆ ತೀವ್ರವಾಗಿ ಸ್ಪಂದಿಸತೊಡಗಿತು. ಜಿಲ್ಲೆಯ ಪ್ರಭಾವಿ ಮುಂದಾಳುಗಳಾಗಿದ್ದ ಎಸ್. ನಿಜಲಿಂಗಪ್ಪ, ಕೆ. ಕೆಂಚಪ್ಪ, ಎ. ಭೀಮಪ್ಪ ನಾಯಕ, ಎಂ. ಗೋವಿಂದರೆಡ್ಡಿ ಮುಂತಾದವರು ಕಾಂಗ್ರೆಸ್ ಸಂಘಟನೆಗೆ ಬಲವಾದ ಅಡಿಗಲ್ಲುಗಳಾದರು. ಅದರ ಸ್ಥಾಪಕ ಸದಸ್ಯರಾಗಿ ಸೇವೆ ಸಲ್ಲಿಸತೊಡಗಿದರು.

ರಂಗರಾಯರ ತಮ್ಮ ವಾಸುದೇವರಾವ್ ಸೇವಾದಳದ ಡಾ|| ಎನ್.ಎಸ್. ಹರ್ಡೀಕರ್ ಅವರ ಶಿಷ್ಯರಾಗಿ ಸಕ್ರಿಯ ರಾಜಕಾರಣದ ಜೊತೆಗೆ ರಚನಾತ್ಮಕ ಕಾರ್ಯಕ್ರಮಗಳಲ್ಲೂ ಭಾಗವಹಿಸುತ್ತಿದ್ದರು. ಖಾದಿ ನೇಯ್ಗೆಯ ಹಾಗೂ ಮಾರಾಟದ ಮಳಿಗೆಗಳನ್ನು ತೆರೆದರು. ಜನರ ನಡುವೆ ಖಾದಿ ಪ್ರಚಾರದ ಕೈಂಕರ್ಯ ಕೈಗೊಂಡರು. ಅವರ ಇಡೀ ಮನೆತನ ಈ ಮಹೋನ್ನತ ದೇಶಕಾರ್ಯಕ್ಕಾಗಿ ತನ್ನನ್ನು ಅರ್ಪಿಸಿಕೊಂಡಿತ್ತು.



## ಕಾಂಗ್ರೆಸ್ ಚಳವಳಿಗೆ ರಂಗನಾಥ್

ಚಿತ್ರದುರ್ಗ ಜಿಲ್ಲೆಯ ಕಾಂಗ್ರೆಸ್ ನಾಯಕರ ಹೋರಾಟ ಹಾಗೂ ಖಾದಿ ಪ್ರಚಾರಗಳಿಂದಾಗಿ ರಂಗನಾಥ್ ಅವರಿಗೆ ಹೊಸ ಪ್ರಭಾವ, ಹೊಸ ಪ್ರೇರಣೆಗಳು ಉಂಟಾದವು. ತನ್ನ ಸುತ್ತಲಿನ ಪರಿಸರದ ಈ ಪ್ರೇರಣೆ ಪ್ರಭಾವಗಳಿಗೆ ಸಹಜವಾಗಿ ಒಲಿದ ರಂಗನಾಥ್ ಅವರು 1940-41ರ ಕಾಂಗ್ರೆಸ್ ಚಳುವಳಿಯಲ್ಲಿ ಕ್ರಿಯಾಶೀಲವಾಗಿ ಭಾಗವಹಿಸುತ್ತಾರೆ.

ವಿದ್ಯಾರ್ಥಿಯಾಗಿ ಚಳವಳಿಗೆ ಧುಮುಕಿದ ಕಾರಣದಿಂದ ಆಳುವ ಸರ್ಕಾರ ಅವರ ವಿದ್ಯಾರ್ಥಿ ವೇತನವನ್ನು ತಡೆಹಿಡಿದು ಮುಟ್ಟುಗೋಲು ಹಾಕಿಕೊಳ್ಳುತ್ತದೆ. ದೇಶ ಬಿಡುಗಡೆಯ ಪ್ರಬಲ ಹೋರಾಟಕ್ಕೆ ಹುಮ್ಮಸ್ಸಿನಿಂದ, ಹೊಸ ಹುರುಪಿನಿಂದ ದೀಕ್ಷಾಬದ್ಧರಾದ ರಂಗನಾಥರು ಸರ್ಕಾರದ ಈ ಬೆದರಿಕೆಯ ಕ್ರಮಕ್ಕೆ ಅಂಜದೆ ಅಳುಕದೆ ಮುಂದಿನ ದಿನಗಳ ಬಗ್ಗೆ, ತನ್ನ ಭವಿತವ್ಯದ ಬಗ್ಗೆ ಎದೆಗುಂದದೆ, 1942ರಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುತ್ತಾರೆ. 1942ರ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಭಾಗವಹಿಸಿ ಸೆರೆವಾಸವನ್ನೂ ಅನುಭವಿಸುತ್ತಾರೆ.

ರಂಗನಾಥರ ಪ್ರಭುತ್ವ ವಿರೋಧಿ ನಿಲುವುಗಳನ್ನು ಸರಕಾರ ಸಹಿಸಿಕೊಳ್ಳುವುದಿಲ್ಲ. ಅವರ ಹೋರಾಟಗಳನ್ನು ಹಾಗೂ ಹೋರಾಟದ ಮನೋಭಾವವನ್ನು ಹತ್ತಿಕ್ಕಲು ಹುಮ್ಮಸ್ಸನ್ನು ಬತ್ತಿಸಲು ಸೆರೆವಾಸದ ಶಿಕ್ಷೆ ವಿಧಿಸುತ್ತದೆ. ಪ್ರಾರಂಭದಲ್ಲಿ ಅವರನ್ನು ಚಿತ್ರದುರ್ಗದ ಜಿಲ್ಲಾ ಲಾಕಪ್ಪಿನಲ್ಲಿ ಕೊಳೆಹಾಕಲಾಗುತ್ತದೆ. ಸ್ವಲ್ಪ ಕಾಲದ ನಂತರ ಅವರನ್ನು ಚಿತ್ರದುರ್ಗದಿಂದ ತೆರವು ಮಾಡಿಸಿ ಬೆಂಗಳೂರಿನ ಕೇಂದ್ರ ಕಾರಾಗೃಹಕ್ಕೆ ಸ್ಥಳಾಂತರ ಮಾಡುತ್ತದೆ.

ಬೆಂಗಳೂರಿನ ಸೆಂಟ್ರಲ್ ಜೈಲಿನಲ್ಲಿ ಈ ಹೊತ್ತಿಗಾಗಲೇ ಕೆ.ಟಿ. ಭಾಷ್ಯಂ, ಹೆಚ್.ಸಿ. ದಾಸಪ್ಪ, ಟಿ. ಸಿದ್ದಲಿಂಗಯ್ಯ, ಟಿ. ಸುಬ್ರಹ್ಮಣ್ಯ, ಹೆಚ್.ಕೆ. ವೀರಣ್ಣಗೌಡ ಮತ್ತಿತರ ಹಿರಿಯ ಕಾಂಗ್ರೆಸ್ ಮುಖಂಡರು ಸೆರೆವಾಸ ಅನುಭವಿಸುತ್ತಿದ್ದರು. ಅದೇ ಸಮಯದಲ್ಲಿ ಅಲ್ಲಿಗೆ ಸ್ಥಳಾಂತರಗೊಂಡ ಯುವಕ ರಂಗನಾಥ್ ಅವರಿಗೆ ಇವರೆಲ್ಲರ ಸ್ನೇಹ ಪರಿಚಯ ಹಾಗೂ ಒಡನಾಟಗಳು ಲಭ್ಯವಾಗುತ್ತದೆ. ಈ ಒಡನಾಟದಿಂದಾಗಿ ರಂಗನಾಥರು ದೇಶಭಕ್ತಿ ಹಾಗೂ ಸ್ವಾತಂತ್ರ್ಯ ಪ್ರೇಮದ ಜೊತೆಗೆ ಪುಸ್ತಕ ಓದುವ ಹೊಸ ಹವ್ಯಾಸವನ್ನು ಚಿಗುರಿಸಿಕೊಳ್ಳುತ್ತಾರೆ.

ಮಹಾತ್ಮಾ ಗಾಂಧಿಯವರ 'ಯಂಗ್ ಇಂಡಿಯಾ', ಜವಹರಲಾಲ್ ನೆಹರೂ ಅವರು ತಮ್ಮ ಮಗಳಿಗೆ ಬರೆದ ಪತ್ರಸಂಪುಟ, 'ಡಿಸ್ಕವರಿ ಆಫ್ ಇಂಡಿಯಾ' ಮುಂತಾದ ಗ್ರಂಥಗಳ ಗಂಭೀರ ಅಧ್ಯಯನಕ್ಕೆ ಕಾರಾಗೃಹ ವಾಸ ಅನುವು ಮಾಡಿಕೊಡುತ್ತದೆ. ಈ ಅಧ್ಯಯನಗಳಿಂದಾಗಿ ರಂಗನಾಥ್ ಮತ್ತಷ್ಟು ಸೂಕ್ಷ್ಮ ಚಿಂತನೆಗಳನ್ನು ಮೈಗೂಡಿಸಿಕೊಳ್ಳುತ್ತಾರೆ. ಅಲ್ಲದೆ ಸ್ವಾತಂತ್ರ್ಯ ಹೋರಾಟದ ಸೂಕ್ಷ್ಮಗಳನ್ನು ತಮ್ಮ ಅರಿವಿನ ಅಂತರಾಳಕ್ಕೆ ತಂದುಕೊಳ್ಳಲು ರಂಗನಾಥ್ ಅವರಿಗೆ ಪುಸ್ತಕಗಳ ಅಧ್ಯಯನದಿಂದ ಸಹಾಯವಾಗುತ್ತದೆ. ಸ್ವಾತಂತ್ರ್ಯ ಚಳವಳಿಗೆ ಇನ್ನಷ್ಟು ತೀವ್ರವಾಗಿ ಧುಮುಕುವ ಹಂಬಲ ರಂಗನಾಥರಲ್ಲಿ ಮೂಡುತ್ತದೆ. ದೇಶದಲ್ಲಿ ಬೀಸುತ್ತಿದ್ದ ರಾಷ್ಟ್ರೀಯ ವಿಚಾರಧಾರೆ ಹಾಗೂ ಕಾಂಗ್ರೆಸ್ ಧ್ಯೇಯ ಧೋರಣೆಗಳು ಯುವಕ ರಂಗನಾಥ್ ಅವರ ಮೇಲೆ ಪ್ರಬಲ ಪ್ರೇರಣೆಯನ್ನುಂಟು ಮಾಡಿ ಅವರ ಹೋರಾಟದ ಮನಸ್ಸಿಗೆ ಇಮ್ಮಡಿ ಹುಮ್ಮಸ್ಸನ್ನು ತುಂಬುತ್ತವೆ. ಜೈಲುವಾಸ ಕೇವಲ ಜೈಲುವಾಸವಾಗದೆ ಜ್ಞಾನದ, ಹೋರಾಟದ ಕ್ರಿಯಾ ಕಮ್ಮಟವಾಗುತ್ತದೆ.



## ತಂದೆಯ ತಾತ್ವಿಕ ಚಿಂತನೆಗಳು

ದೇಶಪ್ರೇಮ, ಸಾಮಾಜಿಕ ಕಳಕಳಿ, ಸ್ವಾತಂತ್ರ್ಯ ಹೋರಾಟ ಮತ್ತು ಪ್ರಗತಿಪರ ವಿಚಾರಗಳಿಗೆ ಬಾಲ್ಯದಿಂದಲೂ ರಂಗನಾಥ್ ಅವರಿಗೆ ಮನೆಯೆ ಮೊದಲ ಪಾಠಶಾಲೆಯಾಗಿರುವುದನ್ನು ಬಲ್ಲೆವು. ತಂದೆ ಹರಿಹರಪ್ಪನವರು ಕಾಂಗ್ರೆಸ್ ಧ್ಯೇಯಧೋರಣೆ ಹಾಗೂ ಚಳವಳಿಗಳ ಬಗ್ಗೆ ಒಂದು ರೀತಿಯ ಮನೋಸಂಬಂಧವುಳ್ಳವರಾಗಿರುತ್ತಾರೆ. ಕಾಂಗ್ರೆಸ್ ಚಳವಳಿ ಹಾಗೂ ಸ್ವಾತಂತ್ರ್ಯ ಹೋರಾಟಗಳಿಗಿಂತ ಮುಖ್ಯವಾಗಿ ಆಗಬೇಕಾಗಿದ್ದ ಸಾಮಾಜಿಕ ಪ್ರಗತಿಗೆ ಸಂಬಂಧಿಸಿದ ಆಲೋಚನೆಗಳನ್ನು ದಟ್ಟವಾಗಿ ಹೊಂದಿರುತ್ತಾರೆ. ಅಸ್ಪೃಶ್ಯತಾ ನಿವಾರಣೆ, ಜಾತಿ ನಿರ್ಬಂಧಗಳ ವಿರೋಧ ಹಾಗೂ ಸರ್ವಸಮಾನ ಸಮಾಜ ನಿರ್ಮಾಣದ ಕನಸುಗಳನ್ನು ಮೈಗೂಡಿಸಿಕೊಂಡಿರುತ್ತಾರೆ. ಈ ರೀತಿಯ ಕನಸುಗಳ ಕೇಂದ್ರವಾಗಿದ್ದ ಸಮಾಜವಾದಿ ಪಕ್ಷದ ಸಿದ್ಧಾಂತಗಳ ಪ್ರಭಾವಕ್ಕೆ ಹರಿಹರಪ್ಪ ಒಳಗಾಗುತ್ತಾರೆ.

ತಂದೆಯವರ ಈ ತಾತ್ವಿಕ ನಿಲುವುಗಳು, ಚಿಂತನೆಗಳು ಹಾಗೂ ಅವರು ನಡೆಸುತ್ತಿದ್ದ ಚರ್ಚೆ-ಪ್ರಸ್ತಾಪಗಳ ಗಾಢ ಪರಿಣಾಮ ಪುತ್ರ ರಂಗನಾಥ್ ಅವರ ಮನಸ್ಸಿನ ಆಳಕ್ಕೆ ಇಳಿಯುತ್ತದೆ. ಈ ಹಿನ್ನೆಲೆಯಲ್ಲಿ ಬೆಳೆದ ರಂಗನಾಥ್ ಅವರು ಸ್ವಾತಂತ್ರ್ಯಾನಂತರ 1948ರಲ್ಲಿ ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದ ಸಮಾಜವಾದಿ ಪಕ್ಷದ ಸದಸ್ಯತ್ವ ಪಡೆಯುತ್ತಾರೆ. ಸಮಾಜವಾದಿ ಪಕ್ಷದ ಸೈದ್ಧಾಂತಿಕ ನಿಲುವುಗಳಿಗೆ ಬದ್ಧತೆ ತೋರಿಸುತ್ತಾರೆ. ಇದೇ ಪಕ್ಷದ ಅಭ್ಯರ್ಥಿಯಾಗಿ 1962ರಿಂದ ಎರಡು ಬಾರಿ ಮೂಡಿಗೆರೆ ಶಾಸನಸಭಾ ಕ್ಷೇತ್ರದಲ್ಲಿ ಚುನಾವಣೆಗೆ ಸ್ಪರ್ಧಿಸುತ್ತಾರೆ. ಹೊಸ ಹುಮ್ಮಸ್ಸಿನ ನಾಯಕನನ್ನು ರಂಗನಾಥರಲ್ಲಿ ಕಂಡ ಮೂಡಿಗೆರೆ ಕ್ಷೇತ್ರದ ಜನತೆ ರಂಗನಾಥ್ ಅವರನ್ನು ಗೆಲ್ಲಿಸಿ ಕರ್ನಾಟಕ ವಿಧಾನಸಭೆಗೆ ತಮ್ಮ ಪ್ರತಿನಿಧಿಯಾಗಿ ಕಳುಹಿಸುತ್ತದೆ.

ಬಾಲ್ಯದಿಂದಲೂ ರಂಗನಾಥ್ ತಮ್ಮ ಪೂರ್ವಿಕರ ಪರಿಪಕ್ವ ಆಲೋಚನೆಗಳ ಸೆಳೆತಕ್ಕೆ ಒಳಗಾದವರು. ತಾತ ಹಾಗೂ ತಂದೆಯವರ ನೇರ ಪ್ರಭಾವಲಯದಲ್ಲಿ ಬೆಳೆದವರು. ಎಲ್ಲರಿಗೂ ಸಮಾನ ಅವಕಾಶದ ಸರ್ವ ಸಮಾಜ ಸಮಾನತೆ ಮತ್ತು ಜಾತಿ ನಿರ್ಮೂಲನ ಹೋರಾಟಗಳನ್ನು ಅವರಿಂದಲೇ ಮೈಗೂಡಿಸಿಕೊಂಡವರು. ಸಾಮಾಜಿಕ ಅನಿಷ್ಟಗಳಾದ ಅಸ್ಪೃಶ್ಯತೆ ಹಾಗೂ ಮದ್ಯಪಾನ ವಿರುದ್ಧದ ಹೋರಾಟ, ಬಾಲ್ಯವಿವಾಹ ಪದ್ಧತಿಗೆ ವಿರೋಧ, ವಿಧವಾ ವಿವಾಹಕ್ಕೆ ಪ್ರೋತ್ಸಾಹ ಮುಂತಾದ ಆ ಕಾಲದ ಕ್ರಾಂತಿಕಾರಕ ಚಿಂತನೆಗಳು ಅವರ ಪಿತೃಗಳಿಂದ ರಕ್ತಗತವಾಗಿ ಮೂಡಿ ಬರುತ್ತದೆ. ಅಸ್ತಿತ್ವದಲ್ಲಿ ಇರುವ ಜಾತಿಗಳನ್ನು ಅಳಿಸುವುದು ಮಾತ್ರವಲ್ಲ, ಬೇರೆ ಬೇರೆ ಮತಧರ್ಮಗಳೂ ತಮ್ಮ ಅಸ್ತಿತ್ವ ಕಳೆದುಕೊಳ್ಳಬೇಕೆಂಬುದು ಅವರ ಮನದಾಳದ ನೈಜ ಆಶಯವಾಗಿ ಮೂಡಿಬರುತ್ತದೆ. ಮೇಲು ಕೀಳು ಎನ್ನದೆ ಎಲ್ಲ ಜಾತಿಗಳ, ಎಲ್ಲ ವರ್ಣಗಳ, ಎಲ್ಲ ಮತಧರ್ಮಗಳ ಜನತೆ ಪ್ರೀತಿ-ವಿಶ್ವಾಸಗಳ ಜಗತ್ತಿನಲ್ಲಿ ಒಂದಾಗಿ ಬಾಳಬೇಕೆಂಬುದು ರಂಗನಾಥರ ತಂದೆ ಹರಿಹರಪ್ಪನವರ ಸಿದ್ಧಾಂತವಾಗಿತ್ತು. ಅದೇ ಅವರ ನಂಬಿಕೆಯ ಜಗತ್ತೂ ಆಗಿತ್ತು.

## ಕಾಂಗ್ರೆಸ್ ಧ್ಯೇಯ್ಯಗಳಿಗೆ ಹತ್ತಿರ

ತಂದೆ ಹರಿಹರಪ್ಪನವರ ಸೈದ್ಧಾಂತಿಕ ನಂಬಿಕೆಯ ನೆಲೆಯಲ್ಲಿ ದೇಶದ ಭವಿಷ್ಯದ ಬಗ್ಗೆ ಕನಸು ಕಾಣುತ್ತಿದ್ದ ರಂಗನಾಥ್ ಅವರು ದೇಶದ ಸ್ವಾತಂತ್ರ್ಯ ಗಳಿಕೆಗೆ ಮಹಾತ್ಮಾ ಗಾಂಧಿ ನೇತೃತ್ವದಲ್ಲಿ ಹೋರಾಟ ಮಾಡಿದ ಕಾಂಗ್ರೆಸ್ ಪಕ್ಷದ ಸಿದ್ಧಾಂತಗಳತ್ತ ಗಮನ ಹರಿಸಿದರು. ಒಂದರ್ಥದಲ್ಲಿ ಕಾಂಗ್ರೆಸ್ ಪಕ್ಷದ ಧ್ಯೇಯಧೋರಣೆಗಳು ತಮ್ಮ ತಂದೆಯಲ್ಲಿ ವ್ಯಕ್ತಗೊಂಡ ಧ್ಯೇಯಧೋರಣೆಗಳಿಗೆ ಸಮೀಪವಾಗಿದ್ದದ್ದನ್ನು ರಂಗನಾಥ್ ಅರಿತಿದ್ದರು.

ಭೂ ಸುಧಾರಣೆ ಹಾಗೂ ಸಾಮಾಜಿಕ ಅನಿಷ್ಟಗಳ ವಿರುದ್ಧದ ಹೋರಾಟಕ್ಕೆ ಕಾಂಗ್ರೆಸ್ ಚಾಲನೆ ಕೊಟ್ಟಿತ್ತು. ಈ ಹೋರಾಟಗಳು ದೃಢವಾಗಿ ಸಂಘಟನೆಯ ಸ್ವರೂಪವನ್ನು 1948ರಲ್ಲಿ ಪಡೆದುಕೊಂಡವು. ಅದು ಕಾಗೋಡು ಸತ್ಯಾಗ್ರಹದ ಸಂದರ್ಭ. ನಮ್ಮ ರಾಜ್ಯದ ಮಲೆನಾಡು ಪ್ರಾಂತ್ಯದಲ್ಲಿ ಭುಗಿಲೆದ್ದ ರೈತ ಚಳವಳಿಯ ಕಾಲ. ಈ ಚಳವಳಿ ಇಡೀ ಜಗತ್ತಿನ ಗಮನ ಸೆಳೆಯುತ್ತದೆ. ಗೇಣಿದಾರರ ಈ ಹೋರಾಟದಿಂದಾಗಿ ರೈತರಲ್ಲಿ ಆರ್ಥಿಕ ಸಮಾನತೆಯ ಪ್ರಜ್ಞೆಯೊಂದು ಮೂಡುತ್ತದೆ. ಪ್ರಜಾಪ್ರಭುತ್ವದ ಆಶಯಗಳು ರೈತ ಸಮುದಾಯದಲ್ಲಿ ಈ ಚಳವಳಿಯ ಪರಿಣಾಮದಿಂದ ಗಟ್ಟಿಯಾಗಿ ಕಟ್ಟಿಕೊಳ್ಳುತ್ತವೆ. ಅನೇಕ ರಾಷ್ಟ್ರೀಯ ನಾಯಕರು, ಸಮಾಜವಾದಿ ಚಿಂತಕರು ಈ ಚಳವಳಿಯ ಕೇಂದ್ರಕ್ಕೆ ಬಂದು ಅದರ ನಾಯಕತ್ವ ವಹಿಸಿಕೊಳ್ಳುತ್ತಾರೆ.

ರಂಗನಾಥರು ಈ ಕಾಗೋಡು ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಆ ಕಾಲದ ಸಮಾಜವಾದಿ ಚಿಂತನೆಯ ಮುಂಚೂಣಿ ನಾಯಕರಾಗಿದ್ದ ಜಯಪ್ರಕಾಶ ನಾರಾಯಣ, ರಾಮಮನೋಹರ ಲೋಹಿಯಾ, ಅಶೋಕ ಮೆಹ್ತಾ ಮುಂತಾದ ರಾಷ್ಟ್ರ ನಾಯಕರ ಚಿಂತನೆಗಳು, ಬರವಣಿಗೆಗಳು ರಂಗನಾಥರ ಮೇಲೆ ಗಾಢ ಪ್ರಭಾವ ಬೀರುತ್ತವೆ. ಸಮಾಜವಾದಿ ಆಚಾರ್ಯ ನರೇಂದ್ರದೇವ ಅವರ ಒಡನಾಟ ದಕ್ಕುತ್ತದೆ. ಇವರೆಲ್ಲರ ಚಿಂತನಾಲಹರಿಯ ಪೂರ್ವ ಪೀಠಿಕೆಯ ಗಟ್ಟಿ ನೆಲೆ ಒದಗಿದ ಕಾರಣ ರಂಗನಾಥರಿಗೆ ರಾಜಕೀಯ ಪ್ರವೇಶ ಸರಳವಾಗುತ್ತದೆ.

## ಕೆಂಚಪ್ಪನವರಿಂದ ನೈತಿಕ ಬಲ

ಇಂಟರ್ ಮೀಡಿಯೇಟ್ ವಿದ್ಯಾಭ್ಯಾಸ ಮಾಡುತ್ತಿದ್ದ ಸಂದರ್ಭದಲ್ಲಿ ರಂಗನಾಥ್ ಅವರ ತಂದೆ ಹರಿಹರಪ್ಪನವರು ಕಾಲವಶವಾಗುತ್ತಾರೆ. ಅಧ್ಯಯನ ಅಭ್ಯಾಸಗಳಿಗೆ ಆಧಾರವಾಗಿ ಧ್ಯೇಯ, ಧೋರಣೆಗಳ ರೂವಾರಿಯಾಗಿ ರಂಗನಾಥರ ವ್ಯಕ್ತಿತ್ವವನ್ನು ವಿಶಿಷ್ಟ ಪ್ರತಿಮೆಯೆಂಬಂತೆ ಕಡೆದು ರೂಪಿಸುತ್ತಿದ್ದ ತಂದೆಯ ಅಕಾಲಿಕ ನಿಧನದಿಂದಾಗಿ ರಂಗನಾಥ್ ಅವರಿಗೆ ಸಂಕಷ್ಟ ಕೋಟಲೆಗಳಿಗೆ ಎದುರಾಗಬೇಕಾದ ಅಸಹಾಯಕ ಪರಿಸ್ಥಿತಿ ಒದಗಿಬರುತ್ತದೆ.

ತಂದೆಯ ಸಾವಿನ ಸಂದರ್ಭದ ಅನಾಥ ಸ್ಥಿತಿಯಲ್ಲಿ ಮುಳುಗುವ, ದಿಕ್ಕು ತಪ್ಪಿ ಅಲೆಯುವ ಪರಿಸ್ಥಿತಿ ಒದಗುತ್ತದೆ. ತಬ್ಬಲಿತನದ ಈ ಬಾಧಕ ದಿನಗಳಲ್ಲಿ ರಂಗನಾಥರ ನೆರವಿಗೆ ಧಾವಿಸಿ ಬಂದವರು ಹರಿಹರಪ್ಪನವರ ಆತ್ಮೀಯ ಮಿತ್ರ ಕೆ. ಕೆಂಚಪ್ಪನವರು. ಆಶ್ರಯ ನೆರವು ನೀಡಿದ ಅವರು ರಂಗನಾಥರಿಗೆ ಮಾನಸಿಕ ಧೈರ್ಯ ತುಂಬುತ್ತಾರೆ.

ಆರ್ಥಿಕ ಆಶ್ರಯಕ್ಕಿಂತ ಮಿಗಿಲಾದ ನೈತಿಕ ಬಲವನ್ನು ಕೆಂಚಪ್ಪನವರು ತನ್ನಲ್ಲಿ ತುಂಬಿದರು ಎಂದು ರಂಗನಾಥ್ ಅವರನ್ನು ಈಗಲೂ ನೆನಪಿಸಿಕೊಳ್ಳುತ್ತಾರೆ. ಈಗಾಗಲೇ ಹೇಳಿದಂತೆ ಇಂಟರ್ ಮೀಡಿಯೇಟ್ ವಿದ್ಯಾಭ್ಯಾಸ ಮಾಡುವ ಕಾಲದಲ್ಲಿಯೆ ರಂಗನಾಥರ ತಂದೆ ಹರಿಹರಪ್ಪ ಕಾಲವಶರಾಗುತ್ತಾರೆ. ಜೀವನ ಸಮುದ್ರಯಾನದಲ್ಲಿ ದಿಕ್ಕು ತಪ್ಪಿ ಅಲೆಯುತ್ತಿದ್ದ ಮುಳುಗುವ ಸ್ಥಿತಿ ಬಂದ ಸಂದರ್ಭದಲ್ಲಿ ರಂಗನಾಥರಿಗೆ ಕೆಂಚಪ್ಪನವರ ಈ ಅಂತಃಕರಣದ ಆಶ್ರಯ ಹೊಸ ಬೆಳಕಿನಂತೆ, ಹೊಸ ಹಾದಿಯಂತೆ, ಹೊಸ ನಾವೆಯಂತೆ ಹೊಸ ಬದುಕಿನಂತೆ ಕಂಡುಬರುತ್ತದೆ.



## ಕಾನೂನು ಅಧ್ಯಯನ

ಕೆಂಚಪ್ಪನವರ ಮಾರ್ಗದರ್ಶನದಂತೆ ರಂಗನಾಥರು ಬಿಎಸ್‌ಸಿ ಆನರ್ಸ್ ಪದವಿಯನ್ನು ಸೆಂಟ್ರಲ್ ಕಾಲೇಜಿನಲ್ಲಿ ಪಡೆದುಕೊಂಡ ನಂತರ ಕಾನೂನು ವಿದ್ಯಾಭ್ಯಾಸಕ್ಕೆ ಮುಂದಾಗುತ್ತಾರೆ. ಬೆಂಗಳೂರು ಸರ್ಕಾರಿ ಕಾನೂನು ಮಹಾವಿದ್ಯಾಲಯದಲ್ಲಿ ವಿದ್ಯಾರ್ಥಿಯಾಗಿ ಸೇರ್ಪಡೆಯಾಗುತ್ತಾರೆ.

ಅವರ ಬಾಲ್ಯ ಕಾಲದ ಒಡನಾಡಿಗಳಾಗಿದ್ದ ಬಿ.ಎಲ್. ಗೌಡ, ಜಿ.ವಿ. ಆಂಜನಪ್ಪ ಮತ್ತಿತರರು ಕಾನೂನು ಅಧ್ಯಯನಕ್ಕೆ ನೆರವು ನೀಡುತ್ತಾರೆ. ಕಾನೂನು ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಮಹಾರಾಷ್ಟ್ರದ ಇಂದಿನ ರಾಜ್ಯಪಾಲ ಹಾಗೂ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಅವರು ರಂಗನಾಥರ ಆತ್ಮೀಯ ಮಿತ್ರರಲ್ಲಿ ಒಬ್ಬರಾಗಿರುತ್ತಾರೆ.



## ಪ್ರತಿ ಕೆಲಸವೂ ಕಾನೂನು ಚೌಕಟ್ಟಿನೊಳಗಿರಬೇಕು!

ಕಾನೂನು ಪದವಿ ಪಡೆದ ಮೇಲೆ ರಂಗನಾಥ್ ಅವರು ಕೆಂಚಪ್ಪನವರ ನೆರವಿನಿಂದ ವಕೀಲಿ ವೃತ್ತಿಯನ್ನು ಪ್ರಾರಂಭಿಸುತ್ತಾರೆ. ಈ ಹೊತ್ತಿಗಾಗಲೇ ಆ ಕ್ಷೇತ್ರದಲ್ಲಿ ಸಾಕಷ್ಟು ಅನುಭವ ಪಡೆದಿದ್ದ ಕೆಂಚಪ್ಪನವರು ವಕೀಲಿ ವೃತ್ತಿಯ ಒಳವಿವೇಕಗಳ ಬಗ್ಗೆ ಗುರುವಿನಂತೆ ಮಾರ್ಗದರ್ಶನ ಮಾಡುತ್ತಾರೆ. "ಮಾಡುವ ಪ್ರತಿಯೊಂದು ಕೆಲಸವನ್ನೂ ಕಾನೂನಿನ ಚೌಕಟ್ಟಿನೊಳಗೆ ಮಾಡಬೇಕು ಮತ್ತು ತಮ್ಮ ವಿಚಾರಗಳನ್ನು ತೀಕ್ಷ್ಣವಾಗಿ ಮಂಡಿಸಬೇಕು" ಎಂಬ ತಾತ್ವಿಕ ಚಿಂತನೆಯ ಕಾನೂನು ಮೌಲ್ಯವನ್ನು ರಂಗನಾಥ್ ಕೆಂಚಪ್ಪನವರಿಂದ ಕಲಿಯುತ್ತಾರೆ.

ಕಾನೂನು ಭಂಗ ಚಳವಳಿಯಲ್ಲಿ ಭಾಗವಹಿಸುವಾಗಲೂ ಕಾನೂನಿನ ಮೌಲ್ಯಗಳು ಹಾಗೂ ಚಿಂತನೆಗಳ ಅಭ್ಯಾಸವನ್ನು ಹಿನ್ನೆಲೆಯಾಗಿಟ್ಟುಕೊಂಡು ಭಾಗವಹಿಸಬೇಕು. ವಿರೋಧ ಪಕ್ಷದಲ್ಲಿ ಕುಳಿತು ಕೆಲಸ ಮಾಡುವಾಗಲೂ ಕಾನೂನಿನ ಚೌಕಟ್ಟಿನೊಳಗೇ ರಚನಾತ್ಮಕ ಪ್ರತಿಪಕ್ಷವಾಗಿ ಕೆಲಸ ಮಾಡಬೇಕು. ಎಂಬಿತ್ಯಾದಿ ಅಭ್ಯಾಸಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ರೂಪಿಸಿಕೊಳ್ಳಲು ಕೆಂಚಪ್ಪನವರ ಆಲೋಚನೆ ಹಾಗೂ ಅನುಭವ ಶ್ರೀಮಂತಿಕೆಗಳಿಂದ ಸಾಧ್ಯವಾಗುತ್ತದೆ.



17

## ರಾಜಕೀಯ ಪ್ರವೇಶ

ವಯಸ್ಸು ಚಿಕ್ಕದು ಎಂಬ ಕಾರಣದಿಂದಾಗಿ ರಂಗನಾಥರು ಚುನಾವಣಾ ರಾಜಕಾರಣದಿಂದ ಅನೇಕ ವರ್ಷಗಳವರೆಗೆ ದೂರ ಉಳಿಯುತ್ತಾರೆ. ಇದೇ ಕಾರಣದಿಂದಾಗಿ 1952ರಲ್ಲಿ ಘಟಿಸಿದ ಮೊಟ್ಟಮೊದಲು ಸಾರ್ವತ್ರಿಕ ಮಹಾ ಚುನಾವಣೆಗೆ ಸ್ಪರ್ಧಿಸದೆ ಹಿಂಜರಿಯುತ್ತಾರೆ.

ವಕೀಲಿ ವೃತ್ತಿಯ ಅಪಾರ ಆಕರ್ಷಣೆ ಅವರ ರಾಜಕೀಯ ಪ್ರವೇಶಕ್ಕೆ ಕಡಿವಾಣ ಹಾಕುತ್ತದೆ. ವಕೀಲರಾಗಿ ಸಂಪೂರ್ಣ ತೊಡಗಿಸಿಕೊಳ್ಳಬೇಕೆಂಬುದು ಅವರ ಎದೆಯಾಳದ ಹಂಬಲವಾಗಿರುತ್ತದೆ. ವಕೀಲಿ ವೃತ್ತಿ ಬದುಕಿನ ಮಹಾ ವಿಶ್ವಾಸವೆಂಬಂತೆ ಕಂಡು ಬರುತ್ತದೆ. ದುಡಿಮೆಯ ದಾರಿ, ಉಜ್ವಲ ಭವಿಷ್ಯ ಹಾಗೂ ವಿಶಿಷ್ಟ ಜೀವನ ಕ್ರಮವನ್ನು ರೂಪಿಸಿಕೊಳ್ಳುವ ಆಕಾಂಕ್ಷೆಯಿಂದ ವಕೀಲಿ ವೃತ್ತಿಯನ್ನು ಅವರು ಏಕೈಕ ಸಾಧನವನ್ನಾಗಿ ಪರಿಗಣಿಸುತ್ತಾರೆ. 1952ರ ನಂತರ ಬಂದ 1957ರ ಮತ್ತೊಂದು ಸಾರ್ವತ್ರಿಕ ಮಹಾಚುನಾವಣೆಯಲ್ಲೂ ಅವರು ಸ್ಪರ್ಧಿಯಾಗುವುದಿಲ್ಲ.

## ಸ್ಪರ್ಧಿಸಿ ಇಲ್ಲ ಪಕ್ಷ ವಿಸರ್ಜಿಸಿ!

ಹಿಂದಿನ ಎರಡು ಮಹಾ ಚುನಾವಣೆಗಳಿಂದ ದೂರ ಉಳಿದಿದ್ದ ರಂಗನಾಥರಿಗೆ 1962ರ ಮಹಾಚುನಾವಣೆಯಲ್ಲಿ ಅನಿವಾರ್ಯವಾಗಿ ಭಾಗವಹಿಸಲೇಬೇಕಾದ ಪರಿಸ್ಥಿತಿ ಒದಗುತ್ತದೆ. ಆ ಸಂದರ್ಭದಲ್ಲಿ ಸಮಾಜವಾದಿ ಪಕ್ಷದ ಅಧ್ಯಕ್ಷರಾಗಿದ್ದ ಅಶೋಕ್ ಮೆಹ್ತಾ ಅವರು ತಮ್ಮ ಪಕ್ಷದ ಮುಖಂಡರಿಗೆ ಹಾಗೂ ಕಾರ್ಯಕರ್ತರಿಗೆ ಒಂದು ತೀಕ್ಷ್ಣ ಬೆದರಿಕೆ ಒಡ್ಡುತ್ತಾರೆ.

"ಪಕ್ಷದಿಂದ ಹೆಚ್ಚು ಜನ ಅಭ್ಯರ್ಥಿಗಳಾಗಿ ನಿಲ್ಲದಿದ್ದರೆ, ಚುನಾಯಿತ ಪ್ರತಿನಿಧಿಗಳಾಗಿ ಪ್ರಜಾಪ್ರಭುತ್ವದ ವ್ಯವಸ್ಥೆಯೊಳಗೆ ಸಕ್ರಿಯವಾಗಿ ಭಾಗವಹಿಸದಿದ್ದರೆ ಅನಿವಾರ್ಯವಾಗಿ ಪಕ್ಷವನ್ನು ವಿಸರ್ಜಿಸಬೇಕಾದ ಪರಿಸ್ಥಿತಿ ಒದಗುತ್ತದೆ" ಎಂಬ ನಿರ್ಣಯಕ್ಕೆ ಬರುತ್ತಾರೆ. ಈ ನಿರ್ಣಯದಿಂದಾಗಿ ರಂಗನಾಥ್ ಅವರು ತಮ್ಮ ರಾಜಕೀಯ ಪ್ರವೇಶವನ್ನು ಮುಂದೂಡದೆ ಚುನಾವಣಾ ಕಣಕ್ಕಿಳಿಯುವ ಮರುಚಿಂತನೆ ಮಾಡುತ್ತಾರೆ. ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ವಿಧಾನಸಭಾ ಕ್ಷೇತ್ರದ ಅಭ್ಯರ್ಥಿಯಾಗಿ ಚುನಾವಣೆಗೆ ಸ್ಪರ್ಧಿಸಿ ಎರಡು ಬಾರಿ ಆ ಕ್ಷೇತ್ರದ ಶಾಸಕರಾಗಿ ಆಯ್ಕೆಯಾಗುತ್ತಾರೆ. ಆ ಕಾಲದಲ್ಲಿ ತಮ್ಮ ಗೆಲುವಿಗೆ ನೆರವಾದ ಬಾಳೂರು ಲಕ್ಷ್ಮಣಗೌಡ, ಸಿ.ಎಂ.ಎಸ್. ಶಾಸ್ತ್ರಿ, ಕೆ.ವಿ. ನಂಜುಂಡಯ್ಯ ಮುಂತಾದ ಮಿತ್ರರ ಸಹಕಾರವನ್ನು, ಅವರು ನೀಡಿದ ಒತ್ತಾಸೆಯನ್ನು ರಂಗನಾಥ್ ಈಗಲೂ ಸ್ಮರಿಸುತ್ತಾರೆ. ಅಲ್ಲದೆ ಅವರ ಆ ಗೆಲವು ಜನಪ್ರೀತಿಯ ಸಂಕೇತವಾಗುತ್ತದೆ.

ಮೊದಲ ಬಾರಿಗೆ ತಾವೊಬ್ಬರೇ ನಿಂತು ಗೆಲವು ಸಾಧಿಸಿದ್ದ ರಂಗನಾಥರು 1967ರ ಚುನಾವಣೆಯಲ್ಲಿ ತಾವೂ ಸ್ಪರ್ಧಿಸಿ ಗೆಲುವು ಸಾಧಿಸಿದ್ದಲ್ಲದೆ. ತಮ್ಮೊಂದಿಗೆ ಸಮಾಜವಾದಿ ಪಕ್ಷದ ಇತರೆ ಆರು ಅಭ್ಯರ್ಥಿಗಳನ್ನು ನಿಲ್ಲಿಸಿ ಐವರ ಗೆಲುವಿಗೆ ಕಾರಣರಾಗುತ್ತಾರೆ. ಅಲ್ಲಿನ ಲೋಕಸಭಾ ಕ್ಷೇತ್ರವನ್ನು ಗೆದ್ದು ಸಮಾಜವಾದಿ ಪಕ್ಷದ ಮಡಿಲಿಗೆ ಹಾಕುತ್ತಾರೆ. ಈ ಹೊತ್ತಿಗೆ ಜಿಲ್ಲೆಯಲ್ಲಿ ಗಟ್ಟಿಯಾಗಿ ಬೇರುಬಿಟ್ಟಿದ್ದ ಬಲಾಢ್ಯ ಕಾಂಗ್ರೆಸ್ಸಿಗರಿಗೆ ಇದು ರಾಕ್ಷಸ ಪ್ರಹಾರವಾಗುತ್ತದೆ. ಈ ಪೆಟ್ಟಿನಿಂದಾಗಿ ಕಾಂಗ್ರೆಸ್ ಚಿಕ್ಕಮಗಳೂರು ಜಿಲ್ಲೆಯಲ್ಲಿ ನೆಲಕಚ್ಚಬೇಕಾಗುತ್ತದೆ.

ರಾಜಕೀಯದ ಬಗೆಗಿನ ಆಸಕ್ತಿಗಿಂತಲೂ ವಕೀಲಿ ವೃತ್ತಿಯತ್ತಲೇ ಹೆಚ್ಚು ಆಕರ್ಷಿತರಾಗಿದ್ದ ರಂಗನಾಥ್ ಅವರು ತಡವಾಗಿಯಾದರೂ ರಾಜಕೀಯಕ್ಕೆ ಬರಲು ಅನೇಕ ಕಾರಣಗಳಿವೆ. 1942ರ ಕ್ವಿಟ್ ಇಂಡಿಯಾ ಚಳವಳಿ ಇಡೀ

ದೇಶಾದ್ಯಂತ ಭುಗಿಲೆದ್ದಾಗ ಚಿತ್ರದುರ್ಗದ ಜನತೆ ಕೆಂಚಪ್ಪ ಮತ್ತಿತರ ನಾಯಕರ ನೇತೃತ್ವದಲ್ಲಿ ಚಳವಳಿಗೆ ಧುಮುಕುತ್ತದೆ.

ಆ ಸಂದರ್ಭದಲ್ಲಿ ಮೆಟ್ರಿಕ್ ವಿದ್ಯಾರ್ಥಿಯಾಗಿದ್ದ ರಂಗನಾಥ್ ಕೂಡ ಚಳವಳಿಯಲ್ಲಿ ಭಾಗವಹಿಸುತ್ತಾರೆ. ಅವರಲ್ಲಿ ಉಂಟಾದ ಈ ದೇಶಪ್ರೇಮಕ್ಕೆ ಮೂಲ ಪ್ರೇರಣೆ ಕೆಂಚಪ್ಪನವರದೇ ಆಗಿರುತ್ತದೆ. ಕಾನೂನು ವಿದ್ಯಾಭ್ಯಾಸದಿಂದ ರಂಗನಾಥರ ಅಂತರಾಳದ ಅರಿವು ಜ್ಞಾನಗಳ ಪರಿಧಿ ವಿಸ್ತರಿಸುತ್ತದೆ. ರಾಜಕೀಯ ಪ್ರಜ್ಞೆ ಅರಳಿ, ರಾಜಕೀಯವೆಂಬುದು ಮುಕ್ತಿಯ ಮಹಾಸ್ತ್ರವೆಂಬ ತಿಳುವಳಿಕೆ ಮೂಡುತ್ತದೆ. ವ್ಯಕ್ತಿಗೆ ಸ್ವಾತಂತ್ರ್ಯದ ಅನುಭವವನ್ನು ಕಲ್ಪಿಸುವ ಶಕ್ತಿ ಸಾಧ್ಯತೆ ರಾಜಕೀಯಕ್ಕೆ ಇದೆ ಎಂದು ಭಾವಿಸುತ್ತಾರೆ. ದೇಶವನ್ನು ಕಟ್ಟುವ, ಬೆಳೆಸುವ ಕನಸಿಗೆ ರಾಜಕೀಯ ಕ್ಷೇತ್ರ ಮಹಾ ಸಾಧನೆವೆಂಬಂತೆ ರಂಗನಾಥರಿಗೆ ನಿಚ್ಚಳವಾಗಿ ತೋರುತ್ತದೆ.

ಕವಿ ಹಾಗೂ ಕನ್ನಡ ಅಧ್ಯಾಪಕ ಮಿತ್ರ ಎನ್.ಕೆ. ಹನುಮಂತಯ್ಯ ಅವರು ರಂಗನಾಥರ ರಾಜಕೀಯ ಪ್ರವೇಶವನ್ನು ಹಾಗೂ ಅವರು ಏರಿದ ಎತ್ತರದ ಹಾದಿಗಳನ್ನು ತಮ್ಮ ಲೇಖನದಲ್ಲಿ ಕೆಳಗಿನಂತೆ ದಾಖಲಿಸಿದ್ದಾರೆ.

"ರಾಜಕೀಯವಾಗಿ ಇಷ್ಟು ಎತ್ತರದ ಗುರಿಯನ್ನು ತಮ್ಮ ಕಿರಿಯ ವಯಸ್ಸಿನಲ್ಲೆ ರಂಗನಾಥ್ ಸಾಧಿಸಿತೋರುತ್ತಾರೆ. ಆದರೆ ತಮ್ಮ ವ್ಯಕ್ತಿತ್ವದಲ್ಲಿ ಎಂದಿಗೂ ಅಹಮಿಕೆಯ ಗುಣವನ್ನು ಬೆಳೆಸಿಕೊಳ್ಳದೆ ಸರಳ ನೇರ ನಡೆ ನುಡಿಯನ್ನು ರೂಢಿಸಿಕೊಳ್ಳುತ್ತಾರೆ. ವಿರೋಧ ಪಕ್ಷದಲ್ಲಿದ್ದರೂ ಯಾರೊಂದಿಗೂ ರಾಜಕೀಯ ವೈರತ್ವ ಬೆಳೆಸಿಕೊಳ್ಳುವುದಿಲ್ಲ. ಎಲ್ಲರನ್ನು ಪ್ರೀತಿಯಿಂದ ಕಾಣುವ, ತಮ್ಮ ರಾಜಕೀಯ ವಿರೋಧಿಗಳೊಂದಿಗೂ ವಿಚಾರ ವಿಮರ್ಶೆ ನಡೆಸುವ ವಿಶಿಷ್ಟ ಮನೋಗುಣವನ್ನು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳುತ್ತಾರೆ. ಇದು ಎಲ್ಲರೊಂದಿಗಿನ ಒಡನಾಟಕ್ಕೆ, ಆತ್ಮೀಯ ವಾತಾವರಣಕ್ಕೆ ಕಾರಣವಾಗುತ್ತದೆ."

ಶಾಸಕರಾಗಿದ್ದ ಸಂದರ್ಭದಲ್ಲಿ ಕೆ. ಕಣ್ಣನ್, ಶಾಂತವೇರಿ ಗೋಪಾಲಗೌಡ, ಖಾದ್ರಿಶಾಮಣ್ಣ ಹಾಗೂ ಮುಲ್ಕ ಗೋವಿಂದರೆಡ್ಡಿ ಮತ್ತಿತರ ಧುರೀಣರ ಸ್ನೇಹವಲಯ ರಂಗನಾಥರಿಗೆ ಪ್ರಾಪ್ತವಾಗುತ್ತದೆ. ತಮ್ಮ ತಾರುಣ್ಯದ ದಿನಗಳಲ್ಲಿ ಅನೇಕ ಸಮಾಜವಾದಿ ಸಂಘಟನೆಗಳ ನಾಯಕರ ಹಾಗೂ ಚಿಂತಕರ ಮಿತ್ರತ್ವ ದೊರೆಯುತ್ತದೆ. ರಾಷ್ಟ್ರ, ರಾಜ್ಯ ರಾಜಕಾರಣದಲ್ಲಿ ಖ್ಯಾತರಾಗಿದ್ದ ಅನೇಕ ಹಿರಿಯ ಕಾಂಗ್ರೆಸ್ಸಿಗರ ಚಿಂತನೆ, ಧೋರಣೆಗಳ ಪ್ರಭಾವ ರಂಗನಾಥರಲ್ಲಿ ಉಂಟಾಗುತ್ತದೆ.

## ರಾಜಕಾರಣಿಗಳಿಗೆ ಸಾಹಿತ್ಯ ಅತ್ಯವಶ್ಯಕ

ಅಪಾರ ಪುಸ್ತಕ ಪ್ರೇಮಿಯಾದ ರಂಗನಾಥ್ ಪುಸ್ತಕ ಓದುವಿಕೆಯನ್ನು ತಮ್ಮ ಬದುಕಿನ ಪ್ರಧಾನ ಹವ್ಯಾಸ ಮಾಡಿಕೊಂಡಿರುತ್ತಾರೆ. ಈ ಪುಸ್ತಕ ಓದಿನ ಹವ್ಯಾಸ ರಂಗನಾಥರಿಗೆ ಅನೇಕ ಸಾಹಿತಿಗಳ ಸ್ನೇಹ ಸಾಂಗತ್ಯಕ್ಕೆ ನೆರವಾಗುತ್ತದೆ. ತಮ್ಮ ಅಧ್ಯಯನ ಹಾಗೂ ಅನುಭವಗಳಿಂದ ಮೂಡಿದ ಚಿಂತನೆಗಳನ್ನು ಸಾಹಿತಿಗಳೊಂದಿಗೆ ಹಂಚಿಕೊಂಡು ತೀಕ್ಷ್ಣವಾಗಿ ಚರ್ಚಿಸುವ ಅವಕಾಶ ಲಭ್ಯವಾಗುತ್ತದೆ. ಅವರ ಚರ್ಚೆಗಳಿಗೂ ವಿಶಿಷ್ಟ ತಾತ್ವಿಕ ಬಗೆಯಿರುತ್ತದೆ. ಇಂಥ ಚರ್ಚೆಯ ಸಂದರ್ಭಗಳಲ್ಲಿ ತಮಗೆ ಒಪ್ಪದ ಮಾತುಗಳನ್ನು ನೇರವಾಗಿ ಹೇಳುವ ಧೈರ್ಯ ಮತ್ತು ಟೀಕಿಸುವ ದೃಢತೆಯನ್ನು ರಂಗನಾಥ್ ತೋರುತ್ತಿದ್ದರು. Agree and disagree ಒಪ್ಪುವ ಮತ್ತು ಒಪ್ಪದಿರುವ ತತ್ವಗಳನ್ನು ಅವರು ಅವಲಂಬಿಸಿದ್ದರು.

ಈ ಬಗೆಯ ಚಿಂತನಾ ಕ್ರಮದ ಸೂಕ್ಷ್ಮ ಸಂಯೋಜನೆಯಿಂದಾಗಿ ತಮ್ಮ ಬದುಕು ಒಂದು ಬಗೆಯ ವಿಭಿನ್ನ-ವಿಶಿಷ್ಟ ಛಾಪುಗಳಿಂದ ರೂಪುಗೊಂಡಂತೆ ಮೌಲ್ಡ್ ಆಗಿದೆ ಎಂದು ರಂಗನಾಥ್ ತಮ್ಮ ಬಗ್ಗೆ ಅಭಿಪ್ರಾಯ ಪಡುತ್ತಾರೆ.

ರಂಗನಾಥ್ ಅವರ ಸಾಹಿತ್ಯಾಸಕ್ತ ಮನೋಭಾವವನ್ನು ಯುವ ಕವಿ ಎನ್.ಕೆ. ಹನುಮಂತಯ್ಯ ಜ್ಞಾನದ ಬಲದಿಂದ ಎಂಬ ಲೇಖನದಲ್ಲಿ ಹೀಗೆ ಗುರುತಿಸಿದ್ದಾರೆ. "ರಂಗನಾಥ್‌ರನ್ನು ಸಾಹಿತ್ಯಾಭ್ಯಾಸಿ ಸಚಿವರು, ಪ್ರಾಮಾಣಿಕರು, ಮಾನವೀಯ ಚಿಂತನೆಯ, ಸರಳತೆಯ ಸ್ವಭಾವದವರು ಎನ್ನುತ್ತಾರೆ. ಇವರಿಗೆ ಸಾಹಿತ್ಯದ ಬಗ್ಗೆ ಆಸಕ್ತಿ ಹುಟ್ಟಲು ಕಾರಣವೇನು? ಎಂದು ಚಿಂತಿಸಿದಾಗ ಅವರು ಹೇಳುತ್ತಾರೆ; 'ಸಾಹಿತ್ಯವನ್ನು ಓದುವುದಾಗಲೀ, ಪ್ರಾಮಾಣಿಕವಾಗಿರುವುದಾಗಲೀ, ಮಾನವೀಯ ಚಿಂತನೆಯಾಗಲೀ, ಸರಳತೆಯಾಗಲೀ, ನನಗಿದೆ ಎನ್ನುವುದರಲ್ಲಿ ಹೆಚ್ಚುಗಾರಿಕೆ ಏನಿದೆ? ಈ ಗುಣಗಳು ಮನುಷ್ಯನಾದವನಿಗೆ ಇರಲೇಬೇಕಾದವು. ಈ ಗುಣಗಳಿರುವುದೇ ದೊಡ್ಡ ಮೌಲ್ಯ ಎನ್ನುವ ವಾತಾವರಣ ಸೃಷ್ಟಿಯಾಗಿರುವುದು ನನಗಂತೂ ನೋವನ್ನುಂಟು ಮಾಡುತ್ತದೆ' ಎಂದು."

ರಂಗನಾಥ್ ಅವರಿಗೆ ಅವರ ಅಜ್ಜನ ಪ್ರಭಾವವನ್ನು ಪ್ರಸ್ತಾಪಿಸುತ್ತಾ ಮುಂದುವರೆದು ಹನುಮಂತಯ್ಯ ಹೀಗೆ ಬರೆಯುತ್ತಾರೆ. "ಆತ್ಮಕಥೆ ಮತ್ತು ಜೀವನ ಚರಿತ್ರೆಗಳು ಇವರಿಗೆ ಅತ್ಯಂತ ಇಷ್ಟವಾದ ಸಾಹಿತ್ಯ ಪ್ರಕಾರಗಳು. ಜೈಲಿನ ದಿನಗಳಲ್ಲಿ ಗಾಂಧೀಜಿಯ ಆತ್ಮಕತೆ, ಹಾಗೂ ನೆಹರೂ ಅವರ 'ಡಿಸ್ಕವರಿ ಆಫ್ ಇಂಡಿಯಾ' ಇವರಲ್ಲಿ ಗಾಢ ಪರಿಣಾಮ ಬೀರಿದವು.

ಆಲಿವರ್ ಗೋಲ್ಡ್‌ಸ್ಮಿತ್‌ನ 'ಸಿಟಿ ನೈಟ್ ಪೀಸ್' ಪ್ರಬಂಧ ರಂಗನಾಥದಲ್ಲಿ ಸಮಾಜವಾದದ ಕಣ್ಣುಗಳನ್ನು ಅರಳಿಸಿತು. ಎಚ್.ಜಿ. ವೇಲ್ಸ್, ಹಕ್ಸ್‌ಲೀ ಮೊದಲಾದವರ ಬರಹಗಳು ಇವರ ದೃಷ್ಟಿಕೋನವನ್ನು ಸ್ಪಷ್ಟವಾಗಿಸಿದವು.

ಬಂಕಿಮಚಂದ್ರ ಚಟರ್ಜಿ, ಗಳಗನಾಥ, ಅನಕೃ, ಹಿರೇಮಲ್ಲೂರು ಈಶ್ವರನ್, ಬಸವರಾಜ ಕಟ್ಟೀಮನಿ, ಕೈಲಾಸಂ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ತರಾಸು ಮೊದಲಾದವರ ಕೃತಿಗಳು ಇವರಿಗೆ ಪರಿಣಾಮ ಬೀರಿದ್ದವು. ತರಾಸು ರಂಗನಾಥರ ಗೆಳೆಯರಾಗಿದ್ದರು. ಕುವೆಂಪು ಅವರ ಜಲಗಾರ, ಶೂದ್ರತಪಸ್ವಿ, ಸ್ಮಶಾನ ಕುರುಕ್ಷೇತ್ರ, ಮಹಾರಾತ್ರಿ ಮುಂತಾದವು ಇವರಲ್ಲಿ ಸಮುದಾಯದ ಬಗ್ಗೆ ಸ್ಪಷ್ಟ ಚಿಂತನೆಗಳನ್ನು ರೂಪಿಸಿದವು. ದೇವನೂರು ಮಹದೇವ, ಡಾ|| ಸಿದ್ಧಲಿಂಗಯ್ಯ, ಮೈಸೂರುಮಠ್ ಇವರನ್ನು ಓದಿಕೊಂಡಿದ್ದಾರೆ. ಡಿ.ಆರ್. ನಾಗರಾಜ್ ಇವರ ಆಪ್ತ ಗೆಳೆಯರಾಗಿದ್ದರು. ಸಾಹಿತ್ಯ ಪ್ರತಿಯೊಬ್ಬರಿಗೂ ಬೇಕು. ರಾಜಕಾರಣಿಗಂತೂ ಸಾಹಿತ್ಯ ಅತ್ಯವಶ್ಯಕ. ರಾಜಕಾರಣಕ್ಕೆ ಸಾಹಿತ್ಯ ಅನೇಕ ಸತ್ಯದ ದಾರಿಗಳನ್ನು ತೆರೆಯುತ್ತದೆ. ಮೇಲ್ನೋಟಕ್ಕಷ್ಟೆ ಕಾಣುವ ಸಮಾಜದ ಸ್ಥಿತಿಗಳನ್ನು ಮೀರಿದ ವಸ್ತು ಸ್ಥಿತಿ ಸಾಹಿತ್ಯದಿಂದ ಕಾಣಿಸುತ್ತದೆ. ಕಾರಂತರ ಚೋಮನ ದುಡಿ ಓದಿದರೆ 'ಭೂಮಿ' ಎಂಬ ಸ್ವಾವಲಂಬನೆ ಇಲ್ಲದವನ ಕನಸು, ಅಸಹಾಯಕತೆಗಳು ಗೋಚರಿಸುತ್ತದೆ. ದೇವನೂರು ಮಹಾದೇವರ 'ಒಡಲಾಳ' ಓದಿದರೆ ಒಂದು ಸಮುದಾಯದ ಕಠೋರ ಬಡತನ ಹಾಗೂ ಅದರ ಮೇಲಾಗುವ ವ್ಯವಸ್ಥೆಯ ಆಕ್ರಮಣಗಳು ಮತ್ತು ಸಮುದಾಯದ ಕಲಾತ್ಮಕ ದಂಗೆ ಇವುಗಳ ಅರಿವಾಗುತ್ತದೆ. ಅಂದರೆ ಸಾಹಿತ್ಯ ಅನೇಕ ಸೂಕ್ಷ್ಮ ಸಂಕೀರ್ಣತೆಗಳನ್ನು ತೆರೆದಿಡುತ್ತದೆ. ಈ ರೀತಿಯ ದರ್ಶನ ರಾಜಕೀಯಕ್ಕೆ ಬೇಕು. ಸಮಾಜವನ್ನಾಗಲೀ, ವ್ಯಕ್ತಿಯನ್ನಾಗಲೀ ಅಭಿವೃದ್ಧಿಯತ್ತ ಕೊಂಡೊಯ್ಯಬೇಕಾದರೆ ಕೇವಲ ರಸ್ತೆ, ನೀರು, ಸೇತುವೆ ಮೊದಲಾದ ಮೇಲ್ನೋಟದ ಅಂಶಗಳಷ್ಟೇ ಸಾಲದು. ಬದುಕಿನ ಸೂಕ್ಷ್ಮಗಳನ್ನು ಗಮನಿಸಬೇಕು. ತಳದಿಂದ ಬದಲಾವಣೆ ತರಬೇಕೇ ಹೊರತು ತುದಿಯಿಂದ ಕಷ್ಟ. ಅಂಥ ಬದಲಾವಣೆಗೆ ಎಲ್ಲರೂ ಶ್ರಮಿಸಬೇಕು ಎಂದು ರಂಗನಾಥ್ ಅಭಿಪ್ರಾಯಪಡುತ್ತಾರೆ.

.......ಇವರ ಪ್ರಕಾರ ಸಾಹಿತ್ಯವನ್ನು ಆಳವಾಗಿ ಓದಿ ಓದಿ ಪ್ರಬುದ್ಧತೆಗೇರುವುದರಂತೆಯೇ ರಾಜಕೀಯವೂ ಕೂಡ..... ಒಂದು ಶ್ರೇಷ್ಠ

ಕೃತಿ ಬರೆದು ಉತ್ತಮ ಕವಿ ಎನ್ನಿಸಿಕೊಳ್ಳುವುದರಷ್ಟೇ ಗಂಭೀರವಾದುದು ಶ್ರೇಷ್ಠ 'ರಾಜಕಾರಣಿ' ಎನ್ನಿಸಿಕೊಳ್ಳುವುದೂ ಎಂಬುದನ್ನು ಆಗ ತಿಳಿದರು. ರಾಜಕಾರಣ ಕೂಡ ಅತ್ಯಂತ ಸೃಜನಶೀಲ ಮತ್ತು ಮಾನವೀಯ ಕ್ಷೇತ್ರವೇ. ಪ್ರಭುತ್ವದ ಖುಷಿ ಅನುಭವಿಸುವ ಊಳಿಗಮಾನ್ಯ ವೇದಿಕೆ ಅದಲ್ಲ ಎಂಬುದು ಇವರ ನಿಲುವಾಯಿತು."

ಕನ್ನಡದ ಮತ್ತೊಬ್ಬ ಶ್ರೇಷ್ಠ ಕವಿ, ಚಿಂತಕ ಹಾಗೂ ಪತ್ರಕರ್ತ ರಮಜಾನ್ ದರ್ಗಾ ಅವರು ರಂಗನಾಥರ ಸಾಹಿತ್ಯ, ಸಂಸ್ಕೃತಿ ಆಸಕ್ತಿಯನ್ನು ತಮ್ಮ ಲೇಖನವೊಂದರಲ್ಲಿ ಹೀಗೆ ಚಿತ್ರಿಸುತ್ತಾರೆ. "ಅವರಿಗೆ ಸಾಹಿತ್ಯದ ಬಗ್ಗೆ ವಿಶೇಷ ಆಸಕ್ತಿ, ಅವರು ಓದುವ ಆನಂದವನ್ನು ಬಯಸುತ್ತಾರೆ. ಹಚ್ಚ ಹಸುರಾದ ಪ್ರಶಾಂತ ಸ್ಥಳವೊಂದರಲ್ಲಿ ನದಿ ದಂಡೆಯ ಮೇಲೆ ಒಂದು ಪುಟ್ಟ ಮನೆಯಲ್ಲಿ ಪುಸ್ತಕಗಳ ಜೊತೆ ಕಾಲ ಕಳೆಯುವುದು ಅವರ ಮಹದಾಶೆಯಾಗಿದೆ. ಕೆ.ವಿ. ಅಯ್ಯರ್ ಅವರ 'ಶಾಂತಲಾ' ಮತ್ತು ನಿರಂಜನರ 'ಚಿರಸ್ಮರಣೆ' ಅವರಿಗೆ ಬಹಳ ಹಿಡಿಸಿದ್ದವು. ಯಾವುದೇ ಒಂದು ವಿಷಯದ ಬಗ್ಗೆ ಮಾತನಾಡಲು ಅವರು ಒಪ್ಪಿಕೊಂಡರೆ ಅದನ್ನು ಗಂಭೀರವಾಗಿ ಪರಿಗಣಿಸುತ್ತಾರೆ. ರಾಹುಲ ಸಾಂಕೃತ್ಯಾಯನರ 'ಓಲ್ಗಾ-ಗಂಗಾ' ಗ್ರಂಥದ ಕನ್ನಡ ಅನುವಾದವನ್ನು ಅವರೇ ಬಿಡುಗಡೆ ಮಾಡಬೇಕೆಂಬುದು ನವಕರ್ನಾಟಕದ ಪಬ್ಲಿಕೇಷನ್ಸ್‌ನ ರಾಜಾರಾಮ್ ಅವರ ಬಯಕೆಯಾಗಿತ್ತು. ಅವರು ಒಪ್ಪಿಕೊಂಡರು. ಆ ಗ್ರಂಥ ಬಿಡುಗಡೆ ಮಾಡಿ ಚೆನ್ನಾಗಿ ಮಾತನಾಡಿದರು. ಗ್ರಂಥವನ್ನು ಕುರಿತು ಕ.ವೆಂ. ರಾಜಗೋಪಾಲ ಅವರು ಮಾತನಾಡಿದ್ದನ್ನು ಮೆಚ್ಚಿಕೊಂಡರು. ನನ್ನ 'ಸಾಹಿತ್ಯ ಮತ್ತು ಸಮಾಜ' ಪುಸ್ತಕವನ್ನು ಅವರಿಗೆ ಕೊಟ್ಟಿದ್ದೆ. ರಾತ್ರಿ 11.30 ಆಗಿತ್ತು. ಗನ್‌ಮ್ಯಾನ್ ನಾನಿದ್ದ ಔಟ್‌ಹೌಸ್‌ಗೆ ಬಂದು ಸಾಹೇಬರು ಕರೆಯುತ್ತಿದ್ದಾರೆಂದು ಹೇಳಿದ. ನಾನು ಅಳುಕುತ್ತಲೇ ಹೋದೆ. ಅವರು 'ಸಾಹಿತ್ಯ ಮತ್ತು ಸಮಾಜ' ಓದುತ್ತಿದ್ದರು. 'ಮಹಿಳೆಯಿಂದಾಗಿ ಕೃಷಿ ಪ್ರಾರಂಭವಾಯಿತು; ಅದೇ ನಾಗರಿಕತೆಗೆ ಮೂಲವಾಯಿತು-' ಎಂಬ ವಿಚಾರ ಕುರಿತು ಬರೆದದ್ದರ ಬಗ್ಗೆ ಪ್ರಶ್ನಿಸಿದರು. ಅದು ಅವರಿಗೆ ಸಂತಸವನ್ನುಂಟು ಮಾಡಿತ್ತು. ಹೀಗೆ ಅವರದು ಸದಾ ಚಿಕಿತ್ಸಕ ಬುದ್ಧಿ. ಒಳ್ಳೆಯದು ಎಲ್ಲೇ ಇದ್ದರೂ ಸ್ವೀಕರಿಸುವ ಮನೋಭಾವ ಅವರದು".




## ಏರಿದ ಎತ್ತರದ ಹಾದಿಗಳು

1962 ರಲ್ಲಿ ಶಾಸಕರಾಗಿ ಮೂಡಿಗೆರೆಯಿಂದ ಆಯ್ಕೆಯಾದ ರಂಗನಾಥರು ಮತ್ತೆ ಹಿಂದಿರುಗಿ ನೋಡಲೇ ಇಲ್ಲ. ಸರ್ಕಾರದ ಅನೇಕ ಇಲಾಖೆಗಳ ಮಂತ್ರಿಗಳಾಗಿ ನಿಷ್ಠೆಯಿಂದ ದುಡಿದರು. ಮುಖ್ಯಮಂತ್ರಿಯಾಗುವ ಅವಕಾಶವಿದ್ದರೂ ಅಧಿಕಾರದ ಆಸೆಗೆ ಕಟ್ಟುಬೀಳಲಿಲ್ಲ. ರಂಗನಾಥರು ಏರಿದ ಎತ್ತರದ ಹಾದಿಗಳನ್ನು ಕವಿ ಹನುಮಂತಯ್ಯ ನಾಗರಘಟ್ಟ ಅವರು ತಮ್ಮ ಜ್ಞಾನದ ಬಲದಿಂದ.... ಎಂಬ ಲೇಖನದಲ್ಲಿ ಕೆಳಗಿನಂತೆ ದಾಖಲಿಸಿದ್ದಾರೆ.

"ಇವರು ಸೋಷಿಯಲಿಸ್ಟ್ ಪಾರ್ಟಿಯ ಜನರಲ್ ಸೆಕ್ರೆಟರಿಯಾಗಿ ಕೆಲಸ ಮಾಡಿದರು. 1969 ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್‌ಗೆ ಸೇರ್ಪಡೆಯಾದರು. 'ಪ್ರಜಾ ಸೋಷಿಯಲಿಸ್ಟ್ ಪಾರ್ಟಿ' ಯಲ್ಲಿ ಎಸ್.ಎಂ. ಜೋಶಿ, ಮಧು ಲಿಮಯೆ, ಮಧು ದಂಡವತೆ ಮುಂತಾದವರು ಇದ್ದರು. ಕರ್ನಾಟಕದಲ್ಲಿ ಕೆಂಚಪ್ಪ, ಬಿ.ಎಲ್. ಗೌಡ ಮೊದಲಾದವರು ಈ ಪಕ್ಷದಲ್ಲೇ ಇದ್ದರು. 1964ರಲ್ಲಿ ಪಿಎಸ್‌ಪಿ ಅಶೋಕ್ ಮೆಹ್ತಾರ ಕಾಲದಲ್ಲಿ ಕಾಂಗ್ರೆಸ್ ಜತೆ ಒಗ್ಗೂಡಿತು. 1957ರಲ್ಲಿ ಕೆಂಚಪ್ಪನವರು ರಾಜಕೀಯದಿಂದ ದೂರ ಉಳಿದರು. ರಂಗನಾಥ್ ಕಾಂಗ್ರೆಸ್‌ನಲ್ಲಿ ಮುಂದುವರಿದರು.

1972ರಿಂದ 74ರವರೆಗೆ ಇವರು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. ಅದಕ್ಕೂ ಮುನ್ನ 1971-72 ರವರೆಗೆ ಉಪಾಧ್ಯಕ್ಷರಾಗಿ ಅನುಭವ ಪಡೆದಿದ್ದರು.

ಇವರ ರಾಜಕೀಯ ಜೀವನಕ್ಕೆ ಸ್ಪಷ್ಟ ಹಾದಿ ತೆರೆದ ಕಾಲ. 1984-89ರಲ್ಲಿ ಮೀಸಲು ಕ್ಷೇತ್ರವನ್ನು ಬಿಟ್ಟು ಸಾಮಾನ್ಯ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾದರು. ಆಗ ಈ ದೇಶದಲ್ಲಿ ಜಾತ್ಯತೀತ ಭಾವನೆ ಎಲ್ಲರಲ್ಲೂ ಇದೆ. ಆ ಭಾವನೆ ಪ್ರಜ್ವಲಿಸುವಂತೆ ಮಾಡಬೇಕಾದ್ದು ಎಲ್ಲರ ಜವಾಬ್ದಾರಿ ಎಂಬ ಆಶಾಭಾವನೆ ಇವರಿಗೆ ಬಂತು. ಇಡೀ ಭಾರತದಲ್ಲಿ ಮೀಸಲು ಕ್ಷೇತ್ರ ಬಿಟ್ಟು ಸಾಮಾನ್ಯ ಕ್ಷೇತ್ರದಲ್ಲಿ ಗೆದ್ದ ಕೆಲವೇ ಮುಖಂಡರಲ್ಲಿ ಇವರೂ ಒಬ್ಬರು.

ದಿನ ಕಳೆದಂತೆ ಅಂಬೇಡ್ಕರ್, ಲೋಹಿಯಾ, ಗಾಂಧೀಜಿಯವರ ಗಾಢ ಪ್ರಭಾವ ರಂಗನಾಥ್‌ರ ಮೇಲಾಯಿತು. 1973ರಲ್ಲಿ ರಾಜ್ಯ ಸರ್ಕಾರದ ಸಂಪುಟ ದರ್ಜೆಯ ಸಚಿವರಾದರು. ನಂತರ ಸಾರಿಗೆ ಸಚಿವರಾಗಿ, ಸಹಕಾರ ಸಚಿವರಾಗಿ, ಶಿಕ್ಷಣ ಸಚಿವರಾಗಿ, ಕೃಷಿ ಸಚಿವರಾಗಿ, ಗೃಹ ಸಚಿವರಾಗಿ, ಸಂಸದೀಯ ವ್ಯವಹಾರಗಳ ಸಚಿವರಾಗಿ, ಲೋಕೋಪಯೋಗಿ ಸಚಿವರಾಗಿ 1981ರಿಂದ 83ರ ತನಕ ವಿಧಾನಸಭಾ ಸ್ಪೀಕರ್ ಆಗಿ, ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಸಚಿವರಾಗಿ ರಾಜಕೀಯದಲ್ಲಿ ಹೆಜ್ಜೆಗುರುತು ಮೂಡಿಸಿದ್ದಾರೆ. ವಿವಿಧ ಇಲಾಖೆಗಳೂ ನನಗೆ ಮನುಷ್ಯರ ಒಂದೊಂದು ಲೋಕವನ್ನು ತೋರಿಸಿಕೊಟ್ಟು ವಿವೇಕ ಮೂಡಿಸಿವೆ ಎಂದು ಸ್ಮರಿಸುತ್ತಾರೆ.

ರಂಗನಾಥರಿಗೆ ಮುಖ್ಯಮಂತ್ರಿ ಸ್ಥಾನ ದೊರಕದಿರುವುದಕ್ಕೆ ಅತೃಪ್ತಿ ಇದೆಯೇ? ಸಣ್ಣಪುಟ್ಟ ಖಾತೆಗಳು ಸಿಕ್ಕಿದರೂ ಮಂತ್ರಿಯಾಗಲು ಇವರಿಗೆ ಅಸಮಾಧಾನವಾಗಲಿಲ್ಲವೆ? ಎಂದು ಎಲ್ಲರಿಗೂ ಅನುಮಾನವಾಗಬಹುದು. ಆದರೆ ರಂಗನಾಥ್‌ರ ಚಿಂತನೆಯ ನೆಲೆಯೇ ಬೇರೆಯದಾಗಿದೆ. ಅವರ ಪ್ರಕಾರ; 'ಹೆಣ ಹೊರುವುದಕ್ಕೆ ಹಿಂದಾದರೇನು? ಮುಂದಾದರೇನು? ಕಸ ಗುಡಿಸುವುದು ಅವಮಾನದ ಕೆಲಸವೇ? ರಾಜಕೀಯವೂ ಅಷ್ಟೆ. ಪ್ರತಿಯೊಂದು ಇಲಾಖೆಯೂ ಮುಖ್ಯವಾದದ್ದೇ. ಸಮುದಾಯದ ಅಂಗವೇ. ಹೀಗಿರುವಾಗ ನನಗೆ ಯಾವುದೇ ಅತೃಪ್ತಿಯಾಗಲಿ ಅಸಮಾಧಾನವಾಗಲೀ ರಾಜಕಾರಣದಲ್ಲಿ ಆಗಿಲ್ಲ' - ಎನ್ನುವುದಾಗಿದೆ."



## ಆ ಕುಟುಂಬದ ಪರಿಸರ

ರಂಗನಾಥರ ಚಿಂತನೆಗಳಿಗೆ ಮೂಲ ದ್ರವ್ಯ ಒದಗಿಬಂದದ್ದೇ ಅವರ ಕುಟುಂಬ ಹಾಗೂ ಪರಿವಾರದಿಂದ. ಅವರು ಎತ್ತರದ ಹಾದಿಗಳನ್ನು ತುಳಿಯಲು ಈ ಕೌಟುಂಬಿಕ ಪರಿಸರ ಅಗಾಧ ಪ್ರಭಾವ ಬೀರುತ್ತದೆ.

ರಂಗನಾಥರ ತಾಯಿ ಸಿದ್ದಮ್ಮ ವಿದ್ಯಾವಂತೆಯಾಗಿರಲಿಲ್ಲ. ತಾಯಿಯ ತಂದೆಯವರೂ ವಿದ್ಯಾವಂತರಾಗಿರಲಿಲ್ಲ. ಆದರೆ ಆರ್ಥಿಕವಾಗಿ ಸ್ವಲ್ಪಮಟ್ಟಿಗೆ ಅನುಕೂಲಸ್ಥರಾಗಿದ್ದರು. ನೈತಿಕ, ನೇಮನಿಷ್ಠೆಯುಳ್ಳ ಸನ್ಮಾರ್ಗಿಗಳಾಗಿದ್ದರು. ತಂದೆಯ ಕುಟುಂಬ ಹಾಗೂ ತಾಯಿಯ ಕುಟುಂಬಗಳ ಹಿನ್ನೆಲೆ ವೈಶಿಷ್ಟ್ಯ ಪೂರ್ಣವಾಗಿದ್ದ ಕಾರಣದಿಂದಲೇ ರಂಗನಾಥರ ವೈಯಕ್ತಿಕ ಬದುಕು ಅತೀವ ನೈತಿಕ ನಿಷ್ಠೆಯಿಂದ ಸುವರ್ಣ ಪುತ್ಥಳಿಯಂತೆ ರೂಪಿತವಾಗಿತ್ತು. ಅವರಲ್ಲಿ ಅನೇಕ ಒಳ್ಳೆಯ ಹವ್ಯಾಸಗಳು ಅಭ್ಯಾಸಗಳು ಮೈಗೂಡಲು ಕಾರಣವಾಗಿದ್ದವು.

ಈ ಎರಡೂ ಕುಟುಂಬಗಳ ಪಿತೃಪಿತಾಮಹರ ಹಾಗೂ ಮಾತೃ ಪರಂಪರೆಯನ್ನು ರಂಗನಾಥ್ ಈ ಇಳಿವಯಸ್ಸಿನಲ್ಲೂ ಅತ್ಯಂತ ಗೌರವ ಹಾಗೂ ಹೆಮ್ಮೆಯಿಂದ ಭಾವಪೂರ್ಣವಾಗಿ ಸ್ಮರಿಸುತ್ತಾರೆ. ಪೂರ್ವಿಕ ಸಂಸ್ಕೃತಿ ಸಂಸ್ಕಾರದಿಂದ ಚಿಗುರೊಡೆದ ಗುಣ ಸಂಪನ್ನತೆಗಳ ಬಳುವಳಿಗಳನ್ನು, ಅವು ನಶಿಸದ ಹಾಗೆ ಈಗಲೂ ಕಾಪಿಟ್ಟುಕೊಂಡಿದ್ದಾರೆ.

ತಮ್ಮ ಮಗ ಹರಿಹರಪ್ಪ ಇಂಗ್ಲೀಷ್ ಕಲಿಯಲಿ ಎಂಬುದು ಹರಿಹರಪ್ಪನವರ ತಾಯಿಯವರ ಇಚ್ಛೆಯಾಗಿತ್ತು. ರಂಗನಾಥರ ಅಜ್ಜಿ ಅದಕ್ಕಾಗಿ ಮಗನಿಗೆ ತುಂಬು ಪ್ರೋತ್ಸಾಹ ನೀಡುತ್ತಿದ್ದರಂತೆ. ಆದರೆ ಅಜ್ಜ ಲಿಂಗಪ್ಪನವರು ಮಗನ ಇಂಗ್ಲೀಷ್ ಕಲಿಕೆಗೆ ಕಡಿವಾಣ ಹಾಕ್ಕಿದ್ದರಂತೆ. ಇದರಿಂದಾಗಿ ಅಜ್ಜಿಗೆ ಬೇಸರವುಂಟಾಗಿತ್ತಂತೆ.

ಕನ್ನಡ ಕಾವ್ಯಗಳ ಬಗೆಗೆ ಮಾತ್ರ ವ್ಯಾಮೋಹ ಹೊಂದಿದ್ದ ಲಿಂಗಪ್ಪನವರು ಮಗ ಹರಿಹರಪ್ಪನವರ ಇಂಗ್ಲೀಷ್ ಪುಸ್ತಕಗಳನ್ನು ಸುಟ್ಟು ತಮ್ಮ ಸಿಟ್ಟು ತೋರಿಸಿದ್ದರಂತೆ. ಮಗನ ಇಂಗ್ಲೀಷ್ ಕಲಿಕೆಗೆ, ಬೆಂಬಲ, ಪ್ರೋತ್ಸಾಹ ನೀಡುತ್ತಿದ್ದಾರೆಂದು ಮಗನ ಮಿತ್ರ ಕೆಂಚಪ್ಪನವರ ಬಗ್ಗೆ ಉಗ್ರ ಕೋಪ ತಾಳಿದ್ದರಂತೆ. ಕೆಂಚಪ್ಪನವರು ತಮ್ಮ ಮಗನಿಗೆ ಇಂಗ್ಲೀಷ್ ಕಲಿಯುವಂತೆ ಪ್ರೋತ್ಸಾಹಿಸುವ ಮೂಲಕ ದಾರಿ ತಪ್ಪಿಸುತ್ತಿದ್ದಾರೆಂಬ ಭಾವನೆ ಅವರಲ್ಲಿ ಮನೆಮಾಡಿಕೊಂಡಿತ್ತಂತೆ. ಇದೇ ಕಾರಣಕ್ಕಾಗಿ ಕೋಪಮಾಡಿಕೊಂಡ ಅಜ್ಜ ಲಿಂಗಪ್ಪನವರು ಕೆಂಚಪ್ಪನವರನ್ನು ಅನೇಕ ವರ್ಷಗಳವರೆಗೆ ಮಾತನಾಡಿಸದೆ ಮಾತು ಬಿಟ್ಟಿದ್ದರಂತೆ.

ಕೆಂಚಪ್ಪನವರು ಬೆಳೆದು ದೊಡ್ಡವರಾಗಿ ಎತ್ತರದ ಸ್ಥಾನಗಳಿಗೆ ಏರಿದ ಮೇಲೆ ಲಿಂಗಪ್ಪನವರು ಒಮ್ಮೆ ಅವರನ್ನು ಅನಿವಾರ್ಯವಾಗಿ ಭೇಟಿಯಾಗುವ, ಅವರ ಮನೆಗೆ ಹೋಗುವ ಪ್ರಸಂಗ ಒದಗುತ್ತದೆ. ತಮ್ಮ ಮಗನಿಗೆ ಇಂಗ್ಲೀಷ್ ಕಲಿಯುವುದಕ್ಕೆ ತಾನೇ ಸ್ವತಃ ಅಡ್ಡಿಯಾದೆನೆಂದು ನೆನಪು ಮಾಡಿಕೊಂಡು ಕೆಂಚಪ್ಪನವರೆದುರು ಪರಿತಾಪ ಪಡುತ್ತಾರೆ. ಅಲ್ಲದೆ ಕೆಂಚಪ್ಪನವರ ಕ್ಷಮೆಯನ್ನು ಕೇಳುತ್ತಾರೆ. "ನನಗೆ ಆ ಕಾಲದಲ್ಲಿ ನೀವೆಲ್ಲ ಇಂಗ್ಲೀಷ್ ಕಲಿತು ಇಷ್ಟು ದೊಡ್ಡವರಾಗುತ್ತೀರಿ ಎಂದು ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ"- ಎಂದು ತಮ್ಮ

ತಪ್ಪನ್ನು ಮುಗ್ಧವಾಗಿ ಒಪ್ಪಿಕೊಳ್ಳುತ್ತಾರೆ. ಸಂಗೀತ ಪ್ರೇಮಿಯಾಗಿದ್ದ ಅಜ್ಜ ಲಿಂಗಪ್ಪನವರು ಸುಶ್ರಾವ್ಯವಾಗಿ ಹಾಡುತ್ತಿದ್ದರಂತೆ. ರಂಗನಾಥರ ತಂದೆ ಹರಿಹರಪ್ಪನವರಿಗೂ ಸಂಗೀತ ಚೆನ್ನಾಗಿ ತಿಳಿದಿತ್ತಂತೆ.

1900ರಲ್ಲಿ ಹುಟ್ಟಿದ ತಮ್ಮ ತಂದೆ ಹರಿಹರಪ್ಪ ಈಗ ಜೀವಂತವಾಗಿದ್ದಿದ್ದರೆ 105 ವರ್ಷಗಳ ಹಿರಿಯ ಚೇತನವಾಗಿ ಇರುತ್ತಿದ್ದರು ಎಂದು ರಂಗನಾಥ್ ಭಾವಪೂರ್ಣವಾಗಿ ತಂದೆಯನ್ನು ಸ್ಮರಿಸುತ್ತಾರೆ. ಮೆಟ್ರಿಕ್ಯುಲೇಷನ್‌ವರೆಗೆ ಓದಿದ್ದ ಹರಿಹರಪ್ಪ ತಮ್ಮ ಕೆಲಸ ಕಾರ್ಯಗಳ ಬಗ್ಗೆ ಸದಾ ಕಟ್ಟುನಿಟ್ಟಿನ, ಶ್ರದ್ಧೆಯ ಧೋರಣೆ ಹೊಂದಿದ್ದರು. ಶಿಸ್ತುಬದ್ಧ ಜೀವನ ಕ್ರಮಕ್ಕೆ, ಜೀವನ ನಿಷ್ಠೆಗೆ ಒತ್ತುಕೊಡುತ್ತಿದ್ದ ಅವರು ಸಮಯ ಪರಿಪಾಲಕರಾಗಿರುತ್ತಾರೆ. ಸ್ನಾನ, ಬಟ್ಟೆಗಳ, ಸ್ವಚ್ಛತೆ ಶುಚಿತ್ವ ಹಾಗೂ ಆರೋಗ್ಯ ಕಾಪಾಡಿಕೊಳ್ಳುವಲ್ಲಿ ಶ್ರದ್ಧೆ, ಕಾಳಜಿಗಳನ್ನು ತೋರುತ್ತಿದ್ದರು.

ಪುಸ್ತಕ ಪ್ರೇಮಿಯಾಗಿದ್ದ ಹರಿಹರಪ್ಪನವರು ಕಾಂಗ್ರೆಸ್ ಚರಿತ್ರೆಯ ಬಗ್ಗೆ ಅಪಾರ ತಿಳುವಳಿಕೆ ಹೊಂದಿದ್ದರು. ಮೂರು ತಿಂಗಳಿಗೊಮ್ಮೆ ಬಂಗಾಳದಿಂದ ಪ್ರಕಟವಾಗುತ್ತಿದ್ದ 'Modern Reviw' ಎಂಬ ಮಾಗಜೈನ್ ತರಿಸುತ್ತಿದ್ದರು. ಅದರೊಳಗಿನ ಅತ್ಯುತ್ತಮ ಲೇಖನಗಳನ್ನು ಓದಿ ಮನನ ಮಾಡಿಕೊಳ್ಳುತ್ತಿದ್ದರು. ಗ್ರಂಥ ಭಂಡಾರಗಳಿಗೆ ಹೋಗಿ ಹಳೆಯ ಪತ್ರಿಕೆಗಳನ್ನು ಅಭ್ಯಾಸ ಮಾಡುವ ಹವ್ಯಾಸವಿಟ್ಟುಕೊಂಡಿದ್ದರು. ತಮ್ಮ ಹೆಣ್ಣು ಮಕ್ಕಳಿಗೆ ಹಿಂದಿ ಹಾಗೂ ಸಂಗೀತ ಕಲಿಸಲು ಉಪಾಧ್ಯಾಯರೊಬ್ಬರನ್ನು ನೇಮಕ ಮಾಡಿದ್ದರು.

ಕರ್ನಾಟಕದ ಮತ್ತೊಬ್ಬ ಹಿರಿಯ ನಾಯಕ, ಶ್ರೇಷ್ಠ ಚಿಂತಕ, ರಾಜಕಾರಣಿ ಬಿ. ಬಸವಲಿಂಗಪ್ಪನವರು ಹರಿಹರಪ್ಪನವರ ಚಿಕ್ಕಪ್ಪನವರ ಪುತ್ರರು. ಬಸವಲಿಂಗಪ್ಪನವರನ್ನು ಕಂಡರೆ ಹರಿಹರಪ್ಪನವರಿಗೆ ಅಗಾಧ ಪ್ರೀತಿಯಿತ್ತು. ಈ ಪ್ರೀತಿಯ ಹಿನ್ನೆಲೆಯಲ್ಲಿ ಬೆಳೆದ ಬಸವಲಿಂಗಪ್ಪ ಹಾಗೂ ಕೆ.ಎಚ್. ರಂಗನಾಥ್ ಅವರ ಗುಣ ಸ್ವಭಾವಗಳನ್ನು ಕವಿ ಮತ್ತು ಪತ್ರಕರ್ತ ಪಿ. ಮಂಜುನಾಥ್ ಅವರು ತಮ್ಮ 'ಬುದ್ಧ ಪ್ರಜ್ಞೆ' ಎಂಬ ಲೇಖನದಲ್ಲಿ ಹೀಗೆ ವಿಶ್ಲೇಷಿಸುತ್ತಾರೆ. "ಕರ್ನಾಟಕದ ದಲಿತ ರಾಜಕಾರಣಿಗಳಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುವ ಶ್ರೀ ಕೆ.ಎಚ್. ರಂಗನಾಥ್ ಹಾಗೂ ಶ್ರೀ ಬಿ. ಬಸವಲಿಂಗಪ್ಪನ ವರನ್ನು ಬುದ್ಧನ ಜಾತಕ ಕತೆಯ ಚೌಕಟ್ಟಿನಲ್ಲಿಟ್ಟು ನೋಡುವ ಕುತೂಹಲ. ಈ

ಇಬ್ಬರು ಕೂಡ ಬುದ್ಧನ ಅಭಿಮಾನಿಗಳು. ಒಂದೇ ಪಕ್ಷದಲ್ಲಿದ್ದವರು. ಕಾಂಗ್ರೆಸ್ ಸರ್ಕಾರದಲ್ಲಿ ಒಟ್ಟಿಗೆ ಸಚಿವರಾಗಿದ್ದವರು. ಈ ಎಲ್ಲಕ್ಕೂ ಮಿಗಿಲಾಗಿ ಇಬ್ಬರೂ ಬಾಲ್ಯ ಕಾಲದಲ್ಲಿ ಒಂದೇ ಮನೆಯ ಒಡನಾಡಿಗಳು. ಇವರಿಬ್ಬರೂ ಶ್ರೀ ಕೆ.ಎಚ್. ರಂಗನಾಥ್‌ರ ತಂದೆ ಶ್ರೀ ಹರಿಹರಪ್ಪನವರ ಆರೈಕೆಯಲ್ಲಿ ಬೆಳೆದಂತವರು. ಶ್ರೀ ಹರಿಹರಪ್ಪನವರು ಅಂಬೇಡ್ಕರ್‌ರವರಿಗೆ ಆಪ್ತರಾಗಿದ್ದರು. ಆದ್ದರಿಂದಲೇನೋ ಹರಿಹರಪ್ಪನವರಿಗೆ ಅಂಬೇಡ್ಕರ್ ಅವರ ಪ್ರತಿಭಟನೆಯನ್ನು ಮೈಗೂಡಿಸಿಕೊಂಡಿದ್ದ ಬಾಲಕ ಬಸವಲಿಂಗಪ್ಪ ಅಂದರೆ ಪ್ರೀತಿ ಹೆಚ್ಚು. ಅದೇ ಸ್ವಂತಮಗ ರಂಗನಾಥ್ ಮೌನಿ; ತನ್ನ ಪಾಡಿಗೆ ತಾನು ಕೆಲಸ ಮಾಡುವ ಸ್ವಭಾವ.

ಇವರಿಬ್ಬರು ಅಧಿಕಾರಿದಲ್ಲಿದ್ದಾಗಲೂ ಕೂಡ ಅದೇ ಬಗೆಯ ಮೌನ ಹಾಗೂ ಪ್ರತಿಭಟನೆ ಸ್ವಭಾವಗಳು ಕಾಣಿಸಿಕೊಂಡಿವೆ. ಶ್ರೀ ಬಸವಲಿಂಗಪ್ಪನವರು ಜಾತಕ ಕತೆಯಲ್ಲಿ ಬರುವಂತೆ ಬಾಣ ಹೊಡೆದವರನ್ನು ಪತ್ತೆಹಚ್ಚಲು ಅಧಿಕಾರವನ್ನು ಬಿಟ್ಟು ಆಗಿಂದಾಗ್ಗೆ ಓಡಾಡಿದ್ದಾರೆ. ಆದರೆ ಶ್ರೀ ರಂಗನಾಥ್ ಅಧಿಕಾರದ ಮನೆಯಲ್ಲಿಯೇ ವೈದ್ಯರಂತೆ ಮೌನವಾಗಿ ಚಿಕಿತ್ಸೆ ಮಾಡಿದ್ದಾರೆ." ಈ ಮಾತುಗಳು ಈ ಇಬ್ಬರು ರಾಜಕಾರಣಿಗಳ ಮೇಲೆ ಹರಿಹರಪ್ಪನವರು ಉಂಟುಮಾಡಿದ ಪ್ರೇರಣೆ, ಪ್ರಭಾವಗಳಿಗೆ ದ್ಯೋತಕವಾಗಿವೆ. ಆ ಪ್ರೇರಣೆ ಪ್ರಭಾವಗಳಿಂದಲೇ ಈ ಇಬ್ಬರೂ ತಮ್ಮ ವ್ಯಕ್ತಿತ್ವವನ್ನು ಗಾಢ ಆಲೋಚನೆಗಳ ನೆಲೆಯ ಮೇಲೆ ರೂಪಿಸಿಕೊಳ್ಳಲು ಸಾಧ್ಯವಾಗಿರಬಹುದೆಂದು ಊಹಿಸಿಕೊಳ್ಳಬಹುದು.

ಕೇವಲ ತಮ್ಮ ಕುಟುಂಬ ವರ್ಗ, ಮನೆಮಂದಿ, ಸಂಬಂಧಿಕರ ಮಟ್ಟಿಗಷ್ಟೇ ತಮ್ಮ ಗಮನವನ್ನು ಕೇಂದ್ರೀಕರಿಸದೇ ಹರಿಹರಪ್ಪ ತಮ್ಮ ಜನಾಂಗದ ಸುತ್ತಲಿನ ಜನತೆಯ ಮತ್ತು ಊರಿನ ಅಭಿವೃದ್ಧಿಯತ್ತಲೂ ಗಮನಕೊಡುತ್ತಿದ್ದರು. ತಮ್ಮ ಕೈಲಾದ ಪ್ರೋತ್ಸಾಹ ಬೆಂಬಲ ನೀಡುತ್ತಿದ್ದರು.

ಊರಿನ ಪರಿಸರವು ವೈಚಾರಿಕ ತಳಹದಿಯ ಮೇಲೆ ರೂಪುಗೊಂಡಿತ್ತು. ಮುಸ್ಲಿಮ್ ಜನಾಂಗದವರು ಊರಿನಲ್ಲಿ ಅಪಾರ ಸಂಖ್ಯೆಯಲ್ಲಿದ್ದರು. ಸಣ್ಣಪುಟ್ಟ ಜಗಳ ತಕರಾರುಗಳಿದ್ದರೂ ಆ ಜಗಳ ತಕರಾರುಗಳನ್ನು ಮೀರಿದ ಮಾನವೀಯ ಸಂಬಂಧವೊಂದು ಹಿಂದು ಮುಸ್ಲಿಮರ ನಡುವೆ ಇತ್ತು. ಈ ಎರಡೂ ಕೋಮಿನ ಜನ ಅಣ್ಣ ತಮ್ಮಂದಿರಂತೆ ಸಾಮರಸ್ಯದಿಂದ ಕೂಡಿಬಾಳುತ್ತಿದ್ದ ವಾತಾವರಣ ರಂಗನಾಥರಿಗೆ ಜೀವನ ಪ್ರೇಮದ ಸಂಕೇತವಾಗಿ ಕಾಣುತ್ತಿತ್ತು. ಒಗ್ಗಟ್ಟಿನ ಕೂಡುಬಾಳುವಿಕೆಯ ಸೌಹಾರ್ದಕನಸಿಗೆ ಪ್ರೇರಣೆಯ ಅಂಶವಾಗಿತ್ತು.

ರಂಗನಾಥರು ಹುಟ್ಟಿದ ದಿನಾಂಕವನ್ನು 20.10.1926 ಎಂದು ಹರಿಹರಪ್ಪ ತಮ್ಮ ಡೈರಿಯಲ್ಲಿ ಬರೆದಿಟ್ಟಿದ್ದರು. ಅದೇ ದಿನಾಂಕವನ್ನು ಶಾಲೆಗೆ ಸೇರಿಸುವಾಗಲೂ ಕೊಟ್ಟಿದ್ದರು. ವಾರ, ತಿಥಿ, ಪಂಚಾಂಗ, ರಾಹುಕಾಲ, ಗುಳಿಕಾಲ ಹಾಗೂ ಜನ್ಮ ಕುಂಡಲಿಗಳ ಬಗ್ಗೆ ಅಭ್ಯಾಸ-ವಿಶ್ವಾಸ ಹೊಂದಿರದ ಅವರು "ನಮ್ಮವರು ಬೆಸಗೊಳ್ಳೆ ಶುಭ ಕಾಲವೆನ್ನಿ" ಎಂಬ ಬಸವ ತತ್ವಕ್ಕೆ ನಿಷ್ಠರಾಗಿದ್ದರು.

ಹರಿಹರಪ್ಪನವರಿಗೆ ಒಟ್ಟು ಐವರು ಮಕ್ಕಳು. ರಂಗನಾಥರಿಗಿಂತ ಹಿರಿಯರಾಗಿದ್ದ ಅಣ್ಣ ತೀರಿಕೊಂಡಿದ್ದಾರೆ. ರಂಗನಾಥರ ಬೆನ್ನ ಹಿಂದೆ ಹುಟ್ಟಿದವರು ಮೂವರು ಹೆಣ್ಣುಮಕ್ಕಳು. ಶೈವ ತತ್ವಾಚಾರಗಳಿಗೆ ಬದ್ಧರಾಗಿದ್ದ ಆ ಕುಟುಂಬ ಶೈವ ಪರಂಪರೆಗೆ ಹೊಂದುವಂತೆ ಕೊಟ್ರಬಸಪ್ಪ, ಬಸಪ್ಪ ಮತ್ತಿತರ ಶಿವಾಚಾರದ ಹೆಸರುಗಳನ್ನು ಮಕ್ಕಳಿಗೆ ನಾಮಕರಣ ಮಾಡಬೇಕಾಗಿತ್ತು. ಮಹಾರಾಷ್ಟ್ರದ ನಿಕಟ ಪ್ರಭಾವಕ್ಕೆ ಒಳಗಾಗಿದ್ದ ಹರಿಹರಪ್ಪನವರು ತಮ್ಮ ಕುಟುಂಬದ ಎಂದಿನ ಸಂಪ್ರದಾಯವನ್ನು ಬದಲಿಸಿ ಮಗನಿಗೆ ರಂಗನಾಥ್ ಎಂದು ಹೆಸರಿಡುತ್ತಾರೆ. ಅಲ್ಲದೆ ತಮ್ಮ ಹೆಣ್ಣುಮಕ್ಕಳಿಗೆ ಗೋದಾವರಿ, ಲಕ್ಷ್ಮೀದೇವಿ ಮತ್ತು ಇಂದಿರಾ ಎಂದು ನಾಮಕರಣ ಮಾಡುವ ಮೂಲಕ ವಿನೂತನ ಹಾದಿ ಹಿಡಿಯುತ್ತಾರೆ.

ಈಗ ರಂಗನಾಥರ ಒಬ್ಬ ತಂಗಿ ವಿಧಿವಶರಾಗಿದ್ದಾರೆ. ತಾಯಿ ಸಿದ್ದಮ್ಮನವರಂತೂ ರಂಗನಾಥರು ಹತ್ತನೇ ವಯಸ್ಸಿನ ಬಾಲಕರಾಗಿದ್ದಾಗಲೇ ತೀರಿಕೊಂಡಿದ್ದರು. ಮೊದಲೇ ಹೇಳಿದಂತೆ ತಂದೆ ಹರಿಹರಪ್ಪ ರಂಗನಾಥರ ಹದಿನೇಳು ಹದಿನೆಂಟರ ಪ್ರಾಯದ ಹುಡುಗನಾಗಿದ್ದ ಸಂದರ್ಭದಲ್ಲಿ ನಿಧನ ಹೊಂದುತ್ತಾರೆ.

ಪತ್ನಿ ಲಲಿತಮ್ಮ ರಂಗನಾಥರ ಸೋದರತ್ತೆಯ ಮಗಳು. 1985 ಫೆಬ್ರವರಿ 26 ರಂದು ಲಲಿತಮ್ಮ ತೀರಿಕೊಳ್ಳುತ್ತಾರೆ. ರಂಗನಾಥ್ ಲಲಿತಮ್ಮ ದಂಪತಿಗಳಿಗೆ ಆರು ಮಕ್ಕಳು, ಎಂಟು ಮೊಮ್ಮಕ್ಕಳಿದ್ದಾರೆ. ಇವರ ಮೊದಲ ಮಗ ಎಚ್.ಆರ್. ಭಾಸ್ಕರ್ ಉದ್ಯಮಿಯಾಗಿದ್ದಾರೆ. ಕರ್ನಾಟಕ ಪ್ರದೇಶ ಕಾಂಗ್ರೆಸ್ ಪಕ್ಷದ ಸಕ್ರಿಯ ಸದಸ್ಯರೂ ಆಗಿದ್ದಾರೆ. ಭಾಸ್ಕರ್ ಅವರ ಪತ್ನಿ ಸುಜಾತ ಗೃಹಿಣಿಯಾಗಿದ್ದಾರೆ. ಎರಡನೇ ಮಗಳು ಎಚ್.ಆರ್. ದೇವಕಿ. ಅವರ ಪತಿ ಡಾ|| ವಿಶ್ವನಾಥ್ ಅವರೊಂದಿಗೆ ನಿವೃತ್ತ ಜೀವನ ನಡೆಸುತ್ತಿದ್ದಾರೆ. ಮತ್ತೊಬ್ಬ ಪುತ್ರ ಡಾ|| ಎಚ್.ಆರ್. ಹರೀಂದ್ರನಾಥ್, ಸರ್ಜನ್ ಹಾಗೂ ಬೆಂಗಳೂರಿನ ವೈದ್ಯಕೀಯ ಮಹಾವಿದ್ಯಾಲಯದ ಪ್ರಾಧ್ಯಾಪಕರು. ಹರೀಂದ್ರನಾಥರ ಪತ್ನಿ

ಡಾ|| ರೂಪಾಮಾಲಿನಿ ಬೆಂಗಳೂರಿನ ರಾಜರಾಜೇಶ್ವರಿ ದಂತ ವೈದ್ಯ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ವಾಣಿಜ್ಯ ತೆರಿಗೆ ಅಧಿಕಾರಿಯಾದ ವಿಜಯಕುಮಾರ್ ಅವರ ಪತ್ನಿ ಗೋದಾವರಿ ಮೂರನೆಯ ಪುತ್ರಿ. ಔರಂಗಬಾದ್ ಹೈಕೋರ್ಟಿನಲ್ಲಿ ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿರುವ ಪ್ರಸನ್ನ ವರಾಳೆ ಅವರ ಪತ್ನಿ ಹೆಚ್.ಆರ್. ಗೀತಾ ಮತ್ತೊಬ್ಬ ಪುತ್ರಿ ಮೈಸೂರು ವಿಶ್ವವಿದ್ಯಾಲಯದ ರಾಜ್ಯಶಾಸ್ತ್ರ ಪ್ರಾಧ್ಯಾಪಕ ಸೋಮಶೇಖರ್ ಅವರ ಪತ್ನಿ ಭಾನುಮತಿ ನಾಲ್ಕನೆಯ ಪುತ್ರಿ.

ರಂಗನಾಥರು ತಮ್ಮ ಮಕ್ಕಳು ಮೊಮ್ಮಕ್ಕಳೊಂದಿಗೆ ಈಗ ಬೆಂಗಳೂರಿನಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. ಈಗಲೂ ತಮ್ಮ ಬಳಿಗೆ ಬರುವ ಆರ್ತರಿಗೆ ತಮ್ಮ ಕೈಲಾದ ಮಾರ್ಗದರ್ಶನ ಮಾಡುತ್ತಾರೆ. ಮೇಲ್ನೋಟಕ್ಕೆ ಕಠಿಣ ವ್ಯಕ್ತಿಯಂತೆ ತೋರುವ ರಂಗನಾಥರ ಅಂತರ್ಯ ಅತ್ಯಂತ ಆರ್ದ್ರವಾಗಿದೆ. ಅನೇಕ ಮಿತ್ರರು, ಹಳೆಯ ಕಾಲದ ಒಡನಾಡಿಗಳು, ಸ್ವಕ್ಷೇತ್ರದ ಮತದಾರರು ಈಗಲೂ ರಂಗನಾಥರ ಮಾರ್ಗದರ್ಶನಕ್ಕಾಗಿ, ನೆರವಿಗಾಗಿ ಅವರ ಮನೆಯತ್ತ ಎಡತಾಕುತ್ತಾರೆ. ಅವರೆಲ್ಲರ ಕಷ್ಟ ಸುಖಗಳಿಗೆ ರಂಗನಾಥರು ಈ ಇಳಿ ವಯಸ್ಸಿನಲ್ಲೂ ಸ್ಪಂದಿಸುತ್ತಿದ್ದಾರೆ. ರಂಗನಾಥರು ಚುನಾವಣಾ ರಾಜಕೀಯದಿಂದ ನಿವೃತ್ತರಾಗಿದ್ದರೂ ಕಾಂಗ್ರೆಸ್ ಪಕ್ಷ ತನ್ನ ಈ ಮೇಧಾವಿ ನಾಯಕನ ಸಲಹೆಯನ್ನು ಸಮಯ ಸಂದರ್ಭಗಳು ಒದಗಿದಾಗ ಪಡೆಯುತ್ತದೆ.

ಸಭೆ ಸಮಾರಂಭಗಳಲ್ಲೂ ಭಾಗವಹಿಸುತ್ತಾರೆ. ಈಚೆಗೆ ಹಿರಿಯ ಚೇತನ ಮುಲ್ಕ ಗೋವಿಂದರೆಡ್ಡಿ ಅವರ 90ನೇ ಹುಟ್ಟು ಹಬ್ಬದಲ್ಲಿ ಭಾಗವಹಿಸಿದ್ದರು. ಅನೇಕ ಸಂಘ ಸಂಸ್ಥೆಗಳೊಂದಿಗೆ ಒಡನಾಟವಿಟ್ಟುಕೊಂಡಿದ್ದಾರೆ. ಪುಸ್ತಕ ಓದುವ ತಮ್ಮ ಮೂಲ ಪ್ರವೃತ್ತಿಯನ್ನು ಇನ್ನೂ ಬಿಟ್ಟಿಲ್ಲದಿರುವುದೊಂದು ಅವರ ವ್ಯಕ್ತಿತ್ವದ ವೈಶಿಷ್ಟ್ಯ. ಮಹಾರಾಷ್ಟ್ರದಲ್ಲಿ ಅಂಬೇಡ್ಕರ್ ಸ್ಥಾಪಿಸಿದ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿದ್ದಾರೆ. ಆ ಸಂಸ್ಥೆಯ ಪುರೋಭಿವೃದ್ಧಿಗಾಗಿ ದುಡಿಯುತ್ತಿದ್ದಾರೆ. ಆಗಾಗ ಅಲ್ಲಿಗೆ ಹೋಗಿ ಸಭೆ ಸಮಾರಂಭಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಮಾರ್ಗದರ್ಶನ ಮಾಡುತ್ತಿದ್ದಾರೆ.

# ಇಲ್ಲಿಗೆ ಮುಗಿಯುವುದಿಲ್ಲ.....

ಎಂಬತ್ತು ವಸಂತಗಳನ್ನು ದಾಟಿದ ಹಿರಿಯ ಚೇತನ ರಂಗನಾಥರನ್ನು ಅವರ ಕನಸಿನ ಬಗ್ಗೆ ಪ್ರಶ್ನಿಸಿದರೆ ಅವರ ಕಣ್ಣುಗಳು ಪ್ರಫುಲ್ಲಗೊಳ್ಳುತ್ತವೆ. "ನಾನು ಆಶಾವಾದಿ, ನನ್ನ ಕನಸು ವಿಸ್ತಾರವಾದುದು" ಎಂದು ಗಂಭೀರವಾಗಿ, ದೃಢವಾಗಿ ಹೇಳುತ್ತಾರೆ. ರಾಜಕಾರಣಿಗಳು ಸ್ವಾರ್ಥ ಬಿಟ್ಟು ಕೆಲಸಮಾಡಿದರೆ ಖಂಡಿತ ಒಂದು ಸುಂದರ ರಾಷ್ಟ್ರ ನಿರ್ಮಾಣ ಮಾಡಲು ಸಾಧ್ಯವಿದೆ. ಜಾತಿ ಎಂಬುದು ಮಾತಿಗಷ್ಟೆ ಇದೆ. ಎಲ್ಲರೂ ಜಾತಿವಾದಿಗಳಾಗಿಲ್ಲ. ಬಹುಸಂಖ್ಯಾತರು ಜಾತಿಮತ ಭೇದಗಳಿಂದ ದೂರವಿದ್ದಾರೆ. ವಿದ್ಯಾವಂತರಾದ ಕೆಲವರಲ್ಲಿ ಮಾತ್ರ ಜಾತಿ ಪಜ್ವಲವಾಗಿದೆ. ರಾಜಕಾರಣವನ್ನು ಹೊಟ್ಟೆಪಾಡಿನ ಮಾರ್ಗವನ್ನಾಗಿ ಮಾಡಿಕೊಂಡಿರುವ ಜನರು ತಾವೂ ದಾರಿ ತಪ್ಪಿರುವುದಲ್ಲದೆ ಇತರರನ್ನೂ ದಾರಿತಪ್ಪಿಸುತ್ತಿದ್ದಾರೆ. ಇಂಥವರ ನಡುವೆಯೂ ಬಹುಜನ ಹಿತಕ್ಕಾಗಿ ದುಡಿಯುವರ, ಚಿಂತಕರ ಸಂಖ್ಯೆ ಅಧಿಕವಾಗಿದೆ- ಎನ್ನುತ್ತಾರೆ.

ಯುವ ಪೀಳಿಗೆಗೆ ಮಾರ್ಗದರ್ಶನ ಮಾಡಲು ಸೂಕ್ತ ಕಾರ್ಯಕ್ರಮ ರೂಪಿಸಬೇಕು. 'ಜೀವನದ ಮಾರ್ಗಕ್ಕಾಗಿ ರಾಜಕೀಯ' ಎಂಬ ಚಿಂತನೆ ಅವರಲ್ಲೂ ಬೆಳೆಯದಂತೆ ನೋಡಿಕೊಳ್ಳಬೇಕು. ತಂದೆ ತಾಯಂದಿರು ತಮ್ಮ ಮಕ್ಕಳು ಇಂತಹ ಹಾದಿ ತುಳಿಯದಂತೆ ಎಚ್ಚರಿಕೆ ತಾಳಬೇಕು. ಆದರೆ ಪ್ರಸ್ತುತ ಸಂದರ್ಭ ಇದಕ್ಕೆ ವಿರುದ್ಧ ದಿಕ್ಕಿನಲ್ಲಿದೆ. ತಂದೆತಾಯಿಗಳು ಮಕ್ಕಳನ್ನು ರಾಜಕೀಯಕ್ಕೆ ಬಿಟ್ಟು ತಮಗೆ ಬೇಕಾದ ಕೆಲಸ ಮಾಡಿಸಿಕೊಳ್ಳುತ್ತಿದ್ದಾರೆ. ಯುವ ಕಾಂಗ್ರೆಸ್ಸಿಗೆ ಸೇರುವ ಹುಡುಗ ತನ್ನ ತಂದೆಯ ವ್ಯಾಪಾರ ಉದ್ಯಮಗಳಿಗಾಗಿ ಆಡಳಿತ ನಡೆಸುವವರ ಬಳಿ ಹೋಗಿ ಅಧಿಕಾರ ದುರ್ಬಳಕೆ ಮಾಡಿಕೊಳ್ಳುತ್ತಿದ್ದಾನೆ. ಇಂತಹ ಉಡಾಳರಿಂದ ರಾಜಕೀಯ ಕೆಡುತ್ತಿದೆ. ಪಕ್ಷಗಳು ಇಂತಹವರನ್ನು ದೂರವಿಟ್ಟು ನಿಜವಾದ ಕಾರ್ಯಕರ್ತರಿಗೆ ಜವಾಬ್ದಾರಿ ನೀಡಬೇಕು. ಸ್ವಾತಂತ್ರ್ಯ ಪೂರ್ವದಲ್ಲಿದ್ದಂತೆ ನಿಷ್ಠಾವಂತ, ಸಕ್ರಿಯ ಕಾರ್ಯಕರ್ತರ ಪಡೆ ಕಟ್ಟಬೇಕು.

ಸಾಮಾಜಿಕ ಪರಿವರ್ತನೆಯ ಮನಸ್ಥಿತಿ ಹಾಗೂ ಉನ್ನತ ಚಿಂತನೆಯ ವಿದ್ಯಾಭ್ಯಾಸವುಳ್ಳವರು ಪ್ರಾಮಾಣಿಕವಾಗಿ ಕೆಲಸ ಮಾಡಿದರೆ, ತಮ್ಮ ಪ್ರತಿಭೆ ಪರಿಶ್ರಮಗಳನ್ನು ಸ್ವಾರ್ಥಕ್ಕೆ ಬಳಸದೆ, ಬಹುಜನ ಹಿತಕ್ಕೆ ಬಳಸಿದರೆ ನಾವು ಬಯಸಿದಂತಹ ಶ್ರೇಷ್ಠ ರಾಜ್ಯ ನಿರ್ಮಿಸಲು ಸಾಧ್ಯವಾಗುತ್ತದೆ. ಇದು ರಂಗನಾಥರ ತಾತ್ವಿಕ ನಂಬಿಕೆ. ಒಂದು ಸರಳ ಕನಸು......

ಎತ್ತ ನೋಡಿದಡತ್ತ ನಿಮ್ಮ
ತೇಜವನೇ ಕಾಂಬೆನಲ್ಲದೆ ಮತ್ತೊಂದ
ಕಾಣೆ. ಎನ್ನ ಚಿತ್ತ ನೋವಲ್ಲಿ
ನೊಂದಲ್ಲಿ ನೆನೆವಲ್ಲಿ ನೀನೆ
ಇಪ್ಪೆಯಾಗಿ, ಬೆಳಗಿರಲು
ಕತ್ತಲೆಯುಂಟೆ ಕೂಡಲಸಂಗಮದೇವಾ?



ನಾಡುನುಡಿ

## ಕಾಲಚಕ್ರದಲ್ಲಿ ಕನ್ನಡ ನಾಡು ಒಂದಾಗಿರಬೇಕು

25 ಜುಲೈ 1972

ಶ್ರೀ ಕೆ.ಎಚ್. ರಂಗನಾಥ (ಹಿರಿಯೂರು).- ಸನ್ಮಾನ್ಯ ಅಧ್ಯಕ್ಷಿಣಿಯವರೇ, ಇವೊತ್ತಿನ ದಿವಸ ಕರ್ನಾಟಕ ಚರಿತ್ರೆಯಲ್ಲಿ ಒಂದು ಶುಭದಿವಸ ಎಂದು ನಾನು ಭಾವಿಸಿದ್ದೇನೆ. ಕನ್ನಡ ನಾಡು ಒಂದಾಗಬೇಕು, ಅಲ್ಲಲ್ಲಿ ಹರಿದು ಹಂಚಿಹೋಗಿದ್ದ ಭಾಗಗಳು ಒಟ್ಟಾಗಿ ಸೇರಿಕೊಂಡು ಸಮೃದ್ಧಿಯಾಗಿ ಕನ್ನಡ ನಾಡು ಬೆಳೆದು, ಆ ನಾಡಿಗೆ ಕರ್ನಾಟಕ ಎಂದು ಹೆಸರು ಕೊಡಬೇಕು ಎಂಬ ಮಾತು ಇಂದು ನೆನ್ನೆಯದಲ್ಲ. ಅದಕ್ಕೆ ರಾಜಕೀಯವಾಗಿ ಕೂಡ ತನ್ನದೇ ಆದಂಥ ಚರಿತ್ರೆಯ ಆಧಾರವಿದೆ.

ಭಾರತದ ರಾಜಕೀಯದಲ್ಲಿಯೂ ಸಹ ಇದಕ್ಕೆ ಒಂದು ಸ್ಥಾನ ಕೊಟ್ಟಿದ್ದನ್ನು ನಾವು 1920ನೇ ಇಸವಿಯಲ್ಲಿ ನೋಡಬಹುದು. ಮಹಾತ್ಮಾ ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟ ಮಾಡುವ ಕಾಲದಲ್ಲಿ, ಸ್ವಾತಂತ್ರ್ಯ ಹೋರಾಟದ ತಿಳುವಳಿಕೆ ಹಳ್ಳಿಹಳ್ಳಿಯಲ್ಲಿರುವ ಎಲ್ಲ ಜನತೆಗೂ ತಲುಪಬೇಕಾದರೆ, ಇದನ್ನು ಒಂದು ಆಂದೋಳನವನ್ನಾಗಿ ಮಾಡಬೇಕಾದರೆ, ಪಕ್ಷವನ್ನು ಆಡಳಿತದ ದೃಷ್ಟಿಯಿಂದ ಒಂದೇ ಅಲ್ಲ, ರಾಜಕೀಯವಾಗಿಯೂ ಕೂಡ ಭಾಷೆಯ ಆಧಾರದ ಮೇಲೆ ಕಟ್ಟಬೇಕು ಎಂಬ ಅಭಿಪ್ರಾಯವನ್ನು 1920ರ ಸುಮಾರಿಗೆ ತಳೆದು ಅದನ್ನು ಪುಷ್ಟೀಕರಿಸಿಕೊಂಡು ಬಂದಿದ್ದೇವೆ. ನಮ್ಮ ಕನ್ನಡನಾಡಿನಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತು ಇದ್ದಿದ್ದನ್ನು ನೋಡಿದ್ದೇವೆ. ಮೈಸೂರಿನಲ್ಲಿ ಮೈಸೂರು ಕಾಂಗ್ರೆಸ್ ಎಂದು ಇದ್ದಿದ್ದನ್ನು ನೋಡಿದ್ದೇವೆ. ಇದೆಲ್ಲವನ್ನೂ ಸೇರಿಸಿ ಕನ್ನಡ ನಾಡು ಒಂದಾಗಬೇಕು. ಕರ್ನಾಟಕ ವಿತ್ ಮೈಸೂರು ಆಗಬೇಕು ಎಂದು ನಾವು ಹೇಳುತ್ತಿರುವಾಗ ಕೆಲವು ಮೇಧಾವಿಗಳನ್ನು ಸ್ಮರಣೆ ಮಾಡಿಕೊಂಡರೆ ತಪ್ಪಾಗಲಾರದು. ಆಲೂರು ವೆಂಕಟರಾವ್, ಮುದುವೀಡು ಕೃಷ್ಣರಾವ್, ಗಂಗಾಧರ್ ದೇಶಪಾಂಡೆ ಮುಂತಾದ ಮೇಧಾವಿಗಳು ಈ ಕನ್ನಡ ನಾಡು ಒಂದಾಗಬೇಕು ಎಂದು ಹೇಳಿದ್ದರ ಸಲುವಾಗಿ ತಾರೀಖು 1ನೇ ನವೆಂಬರ್ 1956 ರಂದು ಅವರು ಬಯಸಿದಷ್ಟು ಆಗದಿದ್ದರೂ, ಕನ್ನಡ ನಾಡು ಒಂದಾಗಿದ್ದನ್ನ ನಾವು ಕಂಡಿದ್ದೇವೆ. ಇನ್ನೂ ಕೆಲವು ಭಾಗಗಳು ನಮಗೆ ಬರಬೇಕಾದದು ಇದೆ. ಅದರ ಬಗ್ಗೆ ವಿಚಾರ ಮಾಡೋಣ.

ಮಾನ್ಯ ಮುಖ್ಯಮಂತ್ರಿಗಳು ಅಭಿಪ್ರಾಯಕೊಟ್ಟಂತೆ, ಈ ಸಭೆಗೆ ವಿಷದವಾಗಿ ತಿಳಿಸಿದಂತೆ, ಇಲ್ಲಿಯವರೆಗೆ ಕಾರಣಾಂತರದಿಂದ ನಾವು ನಾಡಿಗೆ ಕರ್ನಾಟಕ ನಾಡು ಎಂದು ಹೆಸರು ಇಡುವುದಕ್ಕೆ ಸಾಧ್ಯವಾಗಲಿಲ್ಲ. ಒಂದು ವಿಷಯವನ್ನು ಈ ಸಭೆಯ ಗಮನಕ್ಕೆ ತರುತ್ತೇನೆ. ತಾರೀಖು 4ನೇ ಆಗಸ್ಟ್ 1962ರಂದು ಈ ಸಭೆಯಲ್ಲಿ ಇದೇ ವಿಷಯದಲ್ಲಿ ಒಂದು ನಿರ್ಣಯ ಬಂತು. ಆ ನಿರ್ಣಯ ರಾತ್ರಿ ಎಂಟು ಗಂಟೆಯ ಸಮಯದಲ್ಲಿ ಪಾಸಾಗಿತ್ತು. ಈ ನಾಡಿಗೆ ಕರ್ನಾಟಕ ಎಂಬ ಹೆಸರು ಬರುತ್ತದೆ ಎಂದು ನಾವೆಲ್ಲ ಭಾವಿಸಿಕೊಂಡು ಕಾತುರತೆಯಿಂದ ಕಾದಿದ್ದೆವು.

ಆದರೆ ಕಾರಣಾಂತರದಿಂದ ಅಂದಿನ ಮುಖ್ಯಮಂತ್ರಿಗಳ ಆ ಒಂದು ಭರವಸೆ ಸಮಯಕ್ಕೆ ಸಹಕಾರಿಯಾಗಲಿಲ್ಲ. ಆ ಪ್ರೊಸೀಡಿಂಗ್ಸ್ ಈಗ ನನ್ನ ಮುಂದೆ ಇದೆ. ನಾನು ಈ ಬಗ್ಗೆ ಹೆಚ್ಚು ಪ್ರಸ್ತಾಪ ಮಾಡುವುದಕ್ಕೆ ಹೋಗುವುದಿಲ್ಲ. ಕಾರಣಾಂತರಗಳಿಂದ ಅದು ಆಗಲಿಲ್ಲ. ಮುಖ್ಯಮಂತ್ರಿಗಳು ಈ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಈ ಸಮಯ ಒಂದು ಕಾಲಚಕ್ರ. ಈ ಕಾಲಚಕ್ರ ಉರುಳುವುದನ್ನು ಪ್ರಪಂಚದಲ್ಲಿ ಯಾರೂ ತಡೆಯಲಾರರು ಎಂದು ಮಾನ್ಯ ಮುಖ್ಯ ಮಂತ್ರಿಗಳು ಹೇಳಿದ್ದಾರೆ. ಇನ್ನು 10 ದಿವಸಗಳು ಮುಗಿದರೆ ಆಗಸ್ಟ್ 4ನೇ ತಾರೀಖು ಬರುತ್ತದೆ. 10 ವರ್ಷಗಳಿಗೆ 10 ದಿವಸಗಳು ಕಡಿಮೆ ಇರುವಾಗ ಇವೊತ್ತಿನ ದಿವಸ ಈ ಸಭೆಯಲ್ಲಿ ಈ ಒಂದು ನಿರ್ಣಯವನ್ನು ಮಾನ್ಯ ಮುಖ್ಯಮಂತ್ರಿಗಳು ಮಂಡಿಸುತ್ತಿದ್ದಾರೆ. ಇದಕ್ಕೆ ಈಗ ಆಡಳಿತವನ್ನು ನಡೆಸತಕ್ಕ ಪಕ್ಷದಲ್ಲಿ ಪಕ್ಷದ ಒಮ್ಮತ ಇದೆ ಎನ್ನುವ ಅಭಿಪ್ರಾಯ ಎಲ್ಲರಿಗೂ ಗೊತ್ತಿರತಕ್ಕದ್ದು. ಆದ್ದರಿಂದ ನಾನು ಈ ಬಗ್ಗೆ ಹೆಚ್ಚು ವಿಚಾರವನ್ನು ಪ್ರಸ್ತಾಪ

ಮಾಡುವುದಕ್ಕೆ ಹೋಗುವುದಿಲ್ಲ. ಅದು ಆಗಬೇಕು ಆಗಬಾರದು ಎನ್ನುವ ಜಿಜ್ಞಾಸೆಯನ್ನು ಇಲ್ಲಿ ಹೇಳಿ ಜಿಜ್ಞಾಸೆಯ ಒಂದು ಅಭಿಪ್ರಾಯವನ್ನು ಮಂಡಿಸುವುದಕ್ಕೆ ನಾನು ಪ್ರಯತ್ನ ಮಾಡುವುದಿಲ್ಲ. ಅದು ಆಗಬೇಕು, ಆಗಲೇಬೇಕು; ಎಂದು ಭಾವಿಸಿ ಕವಿಗಳಿಂದ ಮೊದಲ್ಗೊಂಡು ಸಾಮಾನ್ಯ ಜನತೆಯವರೆಗೆ ಈ ನಾಡಿಗೆ 'ಕರ್ನಾಟಕ' ಎನ್ನುವ ಹೆಸರು ಇಡಬೇಕು ಎನ್ನುವವರಲ್ಲಿ ಹೆಚ್ಚು ಭಿನ್ನಾಭಿಪ್ರಾಯವಿಲ್ಲ.

ಮಾನ್ಯ ಮುಖ್ಯ ಮಂತ್ರಿಗಳ ಈ ನಿರ್ಣಯವನ್ನು ಪ್ರಸ್ತಾಪ ಮಾಡುವಾಗ 'ನ'ಕಾರ ಇರಬೇಕು, 'ಣ'ಕಾರ ಇರಬಾರದು ಎನ್ನುವ ವಿಚಾರವನ್ನು ಪ್ರಸ್ತಾಪ ಮಾಡಿದ್ದಾರೆ. ಆದ್ದರಿಂದ 10 ವರ್ಷಗಳ ಹಿಂದೆ ಆಗಬೇಕಾದಂಥಾದ್ದು, 10 ವರ್ಷಗಳು ಆದನಂತರ ಆಗತಕ್ಕಂಥಾ ಕಾಲ ಬಂದಿದೆ. ಈ ಸಭೆಯ ಸರ್ವ ಸದಸ್ಯರೂ ಕೂಡ ಒಮ್ಮತದಿಂದ ಈ ಒಂದು ನಿರ್ಣಯವನ್ನು ಪಾಸು ಮಾಡಿಕೊಟ್ಟು ಕನ್ನಡ ನಾಡಿಗೆ 'ಕರ್ನಾಟಕ' ಎನ್ನುವ ಹೆಸರು ಒಪ್ಪುವಂಥಾ ಹೆಸರು. ಅದು ಆಗುವುದಕ್ಕೆ ರಾಜ್ಯಾಂಗವನ್ನು ತಿದ್ದುಪಡಿ ಮಾಡಬೇಕು. ಅದನ್ನು ಮಾಡುವುದಕ್ಕೆ ಏನೇನು ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೋ ಅದನ್ನು ತೆಗೆದುಕೊಳ್ಳುವುದಕ್ಕೆ ನಾವೆಲ್ಲರೂ ಪ್ರಯತ್ನ ಮಾಡೋಣ ಎಂದು ಪ್ರಾರ್ಥಿಸಿ ನಾನು ನನ್ನ ಅಭಿಪ್ರಾಯವನ್ನು ಈ ಸಭೆಯ ಮುಂದೆ ಮಂಡಿಸುತ್ತಾ ಇದ್ದೇನೆ.

ಇದು ನನ್ನ ವೈಯಕ್ತಿಕ ಅಭಿಪ್ರಾಯ ಅಷ್ಟೇ ಅಲ್ಲ. ಇವೊತ್ತಿನ ದಿವಸ ನಾನು ಸೇರಿರತಕ್ಕಂಥಾ ಪಕ್ಷದ ಅಭಿಪ್ರಾಯ ಕೂಡ ಆಗಿದೆ. ನಮ್ಮ ಪಕ್ಷದ ಸಭೆಯಲ್ಲಿ ಈ ಬಗ್ಗೆ ನಾವು ತೀರ್ಮಾನವನ್ನು ತೆಗೆದುಕೊಂಡಿದ್ದೇವೆ. ಕೆಲವು ಹಿತಾಸಕ್ತಿಗಳು ಮಧ್ಯಂತರ ಚುನಾವಣೆಯಲ್ಲಿ ಮತ್ತು ತದನಂತರ ನಮ್ಮ ಪಕ್ಷದ ನಿಲುವಿನ ಬಗ್ಗೆ ನಮ್ಮನ್ನು ಕೀಟಲೆ ಮಾಡಿದುದಕ್ಕೆ ಉತ್ತರವನ್ನು ಈ ಪಕ್ಷ ರಾಜ್ಯದ ಮುಂದೆ ಇಟ್ಟಿದೆ. ನಮ್ಮ ಕರ್ನಾಟಕವನ್ನು ಸಂಪತ್ಭರಿತವಾದ ರಾಜ್ಯವನ್ನಾಗಿ ಮಾಡುವುದರಲ್ಲಾಗಲೀ, 200 ಮೈಲಿ ಕರಾವಳಿಯನ್ನು ಅಭಿವೃದ್ಧಿಪಡಿಸುವುದರಲ್ಲಾಗಲೀ ಅದಕ್ಕೆ ಹೊಂದಿಕೊಂಡಿರತಕ್ಕ ಪಶ್ಚಿಮ ಘಟ್ಟವನ್ನು ಅಭಿವೃದ್ಧಿಪಡಿಸುವುದಕ್ಕಾಗಲೀ ಮೈದಾನ ಪ್ರದೇಶವನ್ನು ಅಭಿವೃದ್ಧಿಪಡಿಸುವುದಕ್ಕಾಗಲೀ ಕರ್ನಾಟಕದಲ್ಲಿರತಕ್ಕ ಜಲ ಮತ್ತು ಅದರ ಅಭಿವೃದ್ಧಿ ಮಾಡತಕ್ಕ ವಿಷಯದಲ್ಲಾಗಲೀ ರಾಜ್ಯದ ಸಮಗ್ರ ಅಭಿವೃದ್ಧಿ ದೃಷ್ಟಿಯಿಂದ ಯಾವ ರಾಜಕೀಯ ಪಕ್ಷಕ್ಕೂ ನಾವು ಎರಡನೆಯವರಾಗಿರುವುದಿಲ್ಲ ಎಂದು ಈಗ ತೋರಿಸಿಕೊಟ್ಟಿದ್ದೇವೆ. ಈ ಮಾನ್ಯ ಸಭೆಯ ಎಲ್ಲಾ ಮಾನ್ಯ ಸದಸ್ಯರೂ ಅವರು ಯಾವುದೇ ಪಕ್ಷಕ್ಕೆ ಸೇರಿರಲಿ ಈ ಒಂದು ನಿರ್ಣಯಕ್ಕೆ ತಮ್ಮ ಬೆಂಬಲವನ್ನು ಕೊಡಬೇಕು. ಈ ರಾಜ್ಯಕ್ಕೆ 'ಕರ್ನಾಟಕ' ರಾಜ್ಯ ಎಂದು ಕರೆಯುವುದಕ್ಕೆ ಎಲ್ಲರೂ ಸಹಾಯ ಮಾಡಬೇಕು ಎಂದು ಕೇಳಿಕೊಂಡು ಈ ನಿರ್ಣಯಕ್ಕೆ ನನ್ನ ಅನುಮತಿ ಮತ್ತು ನನ್ನ ಬೆಂಬಲವನ್ನು ಕೊಡುತ್ತೇನೆ. ಇದು 'ಕರ್ನಾಟಕ' ಎನ್ನುವ ಹೆಸರು ಎಲ್ಲರೂ ಒಪ್ಪತಕ್ಕ ಹೆಸರು. ಅದು ಆಗಬೇಕು, ಆಗಲೇ ಬೇಕು.

*****

# ಶಿಕ್ಷಣ ನೀತಿ: ಒಂದು ಸುದೀರ್ಘ ಚರ್ಚೆ

28 ಮಾರ್ಚ್ 1984

*ಶ್ರೀ ಕೆ.ಎಚ್. ರಂಗನಾಥ್ (ಹಿರಿಯೂರು).- ಮಾನ್ಯ ಸಭಾಧ್ಯಕ್ಷರೇ, ಪ್ರಾಥಮಿಕ, ಮಾಧ್ಯಮಿಕ, ಹೈಸ್ಕೂಲು ಮತ್ತು ವಿಶ್ವವಿದ್ಯಾನಿಲಯ ಇವುಗಳಿಗೆ ಸಂಬಂಧಪಟ್ಟಂತೆ ಮಾನ್ಯಮಂತ್ರಿಗಳು ಒಂದು ಸಮಗ್ರವಾದ ಮಸೂದೆಯನ್ನು ತರುತ್ತಾರೆ ಎಂದು ನಾನು ಭಾವಿಸಿದ್ದೆ. ಈ ಸದನದಲ್ಲಿ ಯಾವುದೇ ಪ್ರಶ್ನೆ ಬಂದಾಗಲೂ ಕೂಡಾ ಈ ಸರ್ಕಾರ ಎಂದು ನಾನು ಹೇಳುವುದಿಲ್ಲ. ಹಿಂದಿನ ಸರ್ಕಾರದವರು ಕೂಡಾ ಏನು ಹೇಳುತ್ತಿದ್ದರು ಎಂದರೆ ನಾವು ಈ ಬಗ್ಗೆ ಒಂದು ಸಮಗ್ರವಾದ ಮಸೂದೆಯನ್ನು ತರುತ್ತೇವೆ, ಅದರಲ್ಲಿ ಇದನ್ನೆಲ್ಲಾ ಸೇರಿಸುತ್ತೇವೆ ಎಂದು ಹೇಳುತ್ತಿದ್ದರು.

ಶ್ರೀ ಎ. ಲಕ್ಷ್ಮೀಸಾಗರ್.- ಆ ಹಿಂದಿನ ಮಸೂದೆಯೇ ಇದು.

ಶ್ರೀ ಕೆ.ಎಚ್. ರಂಗನಾಥ್.- ಹಾಗಿದ್ದರೆ ಅವರಿಗೂ ಇದೇ ಟೀಕೆ, ತಮಗೂ ಇದೇ ಟೀಕೆ ಇದರಲ್ಲಿ ಏನೂ ಬದಲಾವಣೆಯಾಗುವುದಿಲ್ಲ.

ಸ್ವಾಮಿ, ವಿದ್ಯೆ ಬಹಳ ಪ್ರಮುಖವಾದುದು. ನನ್ನ ದೃಷ್ಟಿಯಲ್ಲಿ ಸ್ವಾತಂತ್ರ್ಯ ಬಂದುದು ನಮ್ಮ ರಾಷ್ಟ್ರಕ್ಕೆ ಎಷ್ಟು ಪ್ರಾಮುಖ್ಯವೋ ಸ್ವಾತಂತ್ರ್ಯ ಬಂದ ನಂತರ ರಾಷ್ಟ್ರದಲ್ಲಿ ವಿದ್ಯೆಯು ಎಲ್ಲದಕ್ಕಿಂತ ಪ್ರಮುಖವಾಗಿದೆ. ಏಕೆಂದರೆ ವಿದ್ಯೆಯ ಮೂಲಕವೇ ನಾವು ಎಂಥ ಸಮಾಜ ರಚನೆಯನ್ನು ಮಾಡುತ್ತೇವೆ ಎಂಥ ರಾಷ್ಟ್ರ ರಚನೆ ಮಾಡುತ್ತೇವೆ ಎನ್ನುವುದನ್ನು ಸಾಧಿಸಲಿಕ್ಕೆ ಸಾಧ್ಯವಾಗುತ್ತದೆ. ದಿವಂಗತ ಡಾ॥ ರಾಧಾಕೃಷ್ಣನ್ ಅವರು ತಮ್ಮ ವರದಿಯ ಪೂರ್ವ ಪೀಠಿಕೆಯಲ್ಲಿ Sovereign, Democratic, Republic ಎಂದು ಹೇಳಿದ್ದಾರೆ. ಆದರೆ ಇವತ್ತಿನ ದಿವಸ Sovereign Socialist secular, Democratic, Republic ಎಂದು ಇದೆ. ಈ ತತ್ವ ಬರಬೇಕಾಗುತ್ತದೆ. ಈ ಒಂದು ಸಮಾಜ ವ್ಯವಸ್ಥೆಯನ್ನು ಮಾಡಬೇಕು. ಈ ದೃಷ್ಟಿಯಲ್ಲಿ ನಮ್ಮ ದಾರಿ ಹೋಗಬೇಕಾಗುತ್ತದೆ. ಅದಕ್ಕೆ ಮಕ್ಕಳನ್ನು ತಯಾರು ಮಾಡಬೇಕಾಗುತ್ತದೆ ಎಂದು ಪ್ರಸ್ತಾಪ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಈ ಮಾತನ್ನು ಹೇಳುತ್ತಿದ್ದೇನೆ. ಈ ಸಮಗ್ರ ವಿದ್ಯಾ ಮಸೂದೆಯಲ್ಲಿ ಈ ತರಹ ವಿಚಾರ ಇರತಕ್ಕ, ಅದಕ್ಕೆ ಒತ್ತು ಕೊಟ್ಟಿರತಕ್ಕ ಮಾತು ಬರಬಹುದು ಎಂದು ನಾನು ಅಂದುಕೊಂಡಿದ್ದೆ. ಇದನ್ನು ಹೆಸರಿಗೇನೋ ಸಮಗ್ರ

ವಿದ್ಯಾ ಮಸೂದೆ ಎಂದು ಕರೆಯುತ್ತೇವೆ. ಆದರೆ ಕ್ಲಾಸ್ 3 ಮತ್ತು 4ನ್ನು ಬಿಟ್ಟರೆ ಬಾಕಿ ಎಲ್ಲಾ ಕ್ಲಾಸ್‌ಗಳೂ ಕೂಡ ಈ ಶಾಲೆಗಳನ್ನು ನಿಯಂತ್ರಣ ಮಾಡತಕ್ಕ ವಿಷಯ, ಪರೀಕ್ಷೆ ವಿಷಯ, ವಿದ್ಯಾರ್ಥಿಗಳನ್ನು ಸೇರಿಸುವ ವಿಷಯ ಅನುಮತಿ ಕೊಡುವ ವಿಷಯ ಹೀಗೆ ಎಲ್ಲಾ ರೀತಿಯಲ್ಲೂ ಕೂಡ ನಿಯಂತ್ರಣ ಮಾಡತಕ್ಕದ್ದಿದೆಯೇ ಹೊರತು ಬೇರೇನೂ ಇದರಲ್ಲಿಲ್ಲ. ಪಠ್ಯದ ವಿಷಯದ ಬಗ್ಗೆಯೂ ಇದರಲ್ಲಿ ಪ್ರಸ್ತಾಪ ಮಾಡಿದ್ದಾರೆ. ಈ ಒಂದು ಮಸೂದೆಯನ್ನು ವಿದ್ಯಾಸಂಸ್ಥೆಗಳನ್ನು ನಿಯಂತ್ರಿಸತಕ್ಕ ಮಸೂದೆ ಎಂದು ಕರೆಯಬಹುದಾಗಿತ್ತೇ ವಿನಹ ವಿದ್ಯಾ ಮಸೂದೆ ಎಂದು ಕರೆದದ್ದು ತಪ್ಪೇನೋ ಎಂಬುದು ನನ್ನ ಅಭಿಪ್ರಾಯ. ತಾವು ಪ್ರಿಯಾಂಬಲ್‌ನಲ್ಲೂ ಕೂಡ ಈ ರೀತಿ ಹೇಳಿದ್ದೀರಿ.

A Bill to provide for better organisation, development, discipline and control of the education institutions in the State.

Whereas it is considered necessary to provide for the planned development of educational institutions, inculation of healthy educational practice, maintenance and improvement in the standards of education and better organisation, discipline and control over educational institutions in the State.......

**ಶ್ರೀ ಎ. ಲಕ್ಷ್ಮೀಸಾಗರ್.–** ಕ್ಲಾಸ್ 7 ನೋಡಿ.

**ಶ್ರೀ ಕೆ.ಎಚ್. ರಂಗನಾಥ್.–** ಕ್ಲಾಸ್ 3-4-5-6-7 ಇದರಲ್ಲೂ ಕೂಡ ಇದೇ ರೀತಿ ಹೇಳಿದ್ದಾರೆ. ಅದು ಒಂದು ಬಿಟ್ಟರೆ 22ನೇ ಪುಟದಿಂದ 26ನೇ ಪುಟದವರೆಗೆ ಮಾತ್ರ ಕೆಲವು ಪ್ರಸ್ತಾಪವಿದೆ. ಇನ್ನು ವಿಶ್ವವಿದ್ಯಾನಿಲಯಗಳಿಗೆ ಸಂಬಂಧಪಟ್ಟಂತೆ ಕಾಲೇಜಿಗೆ ಸಂಬಂಧಪಟ್ಟಂತೆ ಮತ್ತು ಟೆಕ್ನಿಕಲ್ ಎಜುಕೇಷನ್‌ಗೆ ಸಂಬಂಧಪಟ್ಟಂತೆ ಎಲ್ಲೂ ಏನು ಬರುವುದಿಲ್ಲ. ಕೆಲವು ವಿಚಾರಗಳನ್ನು ಒಂದೆರಡು ಮಾತುಗಳಲ್ಲಿ ಮಾನ್ಯ ವಿದ್ಯಾ ಮಂತ್ರಿಗಳ ಗಮನಕ್ಕೆ ತರಬಯಸುತ್ತೇನೆ. ವಿದ್ಯಾ ಇಲಾಖೆಯು ನಿದ್ರೆ ಹೋಗತಕ್ಕ ಇಲಾಖೆಯಾಗಿದೆ. ಅದಕ್ಕೆ ಜೀವ ಕೊಡಬೇಕಾಗುತ್ತದೆ. ಅದರ ವಿಚಾರಧಾರೆಯನ್ನು ಧೋರಣೆಯನ್ನು ಬದಲಾವಣೆ ಮಾಡತಕ್ಕ ವ್ಯವಸ್ಥೆ ಮಾಡಬೇಕಾಗಿದೆ. ವಿದ್ಯಾ ಇಲಾಖೆಯಲ್ಲೂ ಲಂಚ ಎಂದರೆ ಇನ್ನೇನು ಹೇಳಬೇಕು? ನಾವು ತಲೆ ತಗ್ಗಿಸಬೇಕಾಗುತ್ತದೆ. ಯಾವುದೇ ಹಾಸ್ಟಲ್ ತೆಗೆದುಕೊಳ್ಳುವುದಕ್ಕೆ ಲಂಚ, ಪ್ರಮೋಷನ್ ತೆಗೆದುಕೊಳ್ಳುವುದಕ್ಕೆ ಲಂಚ ಕೊಡಬೇಕಾಗಿದೆ. ನಿಮ್ಮ ಇಲಾಖೆಯಲ್ಲಿ ಇಲ್ಲಿಯವರೆಗೆ ಸೀನಿಯಾರಿಟಿ ಲಿಸ್ಟ್ ಮಾಡಿದ್ದೀರಾ? ತಾಲ್ಲೂಕು ಬೋರ್ಡ್ ಮುಂತಾದ ಸ್ಥಳೀಯ ಸಂಸ್ಥೆಗಳಿಂದ ಹೈಸ್ಕೂಲುಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡ ನಂತರ ಅಲ್ಲಿ ಕೆಲಸ ಮಾಡುತ್ತಿದ್ದ ನೌಕರರೆಲ್ಲಾ ಸರ್ಕಾರಕ್ಕೆ ಬಂದರು. ಹೀಗೆ ಬಂದು ಅಲ್ಲಿ ಕೆಲಸ

ಮಾಡುತ್ತಿದ್ದವರೆಲ್ಲಾ ಮೇಲೆ ಬಂದು ಸರ್ಕಾರಿ ನೌಕರರು ಕೆಳಗೆ ಹೋಗಿದ್ದಾರೆ. ಅದರ ಬಗ್ಗೆ ಇನ್ನೂ ತೀರ್ಮಾನವಾಗಲಿಲ್ಲ. ಎಷ್ಟು ವರ್ಷದ ತನಕ ಇಂಥ ಸಣ್ಣಪುಟ್ಟ ವಿಚಾರಗಳಿಗೆ ತಲೆ ಕೆಡಿಸಿಕೊಂಡು ಮುಂದಿನ ಪೀಳಿಗೆಗೆ ದಾರಿ ತೋರಿಸತಕ್ಕ ವಿಚಾರದಲ್ಲಿ ಸಮಯವಿಲ್ಲದೇ ಈ ತೊಳಲಾಟಕ್ಕೆ ಒಳಗಾಗತಕ್ಕದ್ದು? ತಮ್ಮ ಅಭಿಪ್ರಾಯ ಇದನ್ನು ರೆಗ್ಯುಲೇಟ್ ಮಾಡಬೇಕು, ಡಿಸಿಪ್ಲಿನ್ ತರಬೇಕೆಂದು ಇದೆ. ಆದರೆ ಕೆಲವು ವಿಷಯಗಳನ್ನು ನೋಡುವಾಗ ಅದು ಸಾಧ್ಯವಾಗುತ್ತದೋ ಇಲ್ಲವೋ ಎಂಬುದನ್ನು ಕಾದು ನೋಡಬೇಕಾಗುತ್ತದೆ.

ಈಗ ನಾನು ಶಾಲೆಗಳ ಬಗ್ಗೆ ವಿದ್ಯಾ ಇಲಾಖೆ ಬಗ್ಗೆ ಹೇಳುವಾಗ ನನ್ನ ಮಾತು ವಿಶ್ವವಿದ್ಯಾಲಯಗಳಿಗೂ ಅನ್ವಯಿಸುತ್ತದೆ. ಕಾಲೇಜು ಶಿಕ್ಷಣ ನಿರ್ದೇಶನಾಲಯ, ತಾಂತ್ರಿಕ ಶಿಕ್ಷಣ ಮತ್ತು ಪಾಲಿಟೆಕ್ನಿಕ್ ಬಗ್ಗೆ ಕೂಡ ಇದು ಅನ್ವಯಿಸುತ್ತದೆ. ಎಲ್ಲಾ ಕಡೆ ಈ ಪರಿಸ್ಥಿತಿ ಇದೆ. ಇದಕ್ಕೆ ಮಂತ್ರಿಗಳು ಹೊಣೆ ಎಂದು ಹೇಳುವುದಿಲ್ಲ. ಅವರು ಈ ಇಲಾಖೆ ತೆಗೆದುಕೊಂಡು ಸ್ವಲ್ಪ ದಿವಸವಾಗಿದೆ. ಈ ಇಲಾಖೆಯು ಬೃಹದಾಕಾರವಾಗಿ ಬೆಳೆಯುತ್ತಿರುವುದರಿಂದ ಎಲ್ಲಿ ಏನು ನಡೆಯುತ್ತಿದೆ ಎನ್ನುವುದನ್ನು ನೋಡುವುದಕ್ಕೆ ಸಾಧ್ಯವಿಲ್ಲದ ಪರಿಸ್ಥಿತಿ ಬಂದಿದೆ. ನಮ್ಮ ರಾಜ್ಯದಲ್ಲಿ ಅದರಲ್ಲೂ ಹಳೆಯ ಮೈಸೂರಿನಲ್ಲಿ ಹೇಳುವುದಾದರೆ 1916ನೇ ಇಸವಿಯಲ್ಲಿ ಸಿ.ಆರ್. ರೆಡ್ಡಿಯವರು ಐ.ಜಿ.ಪಿ. ಆಗಿದ್ದರು. ನಾನು ಏತಕ್ಕೆ ಅವರ ಹೆಸರನ್ನು ಹೇಳುತ್ತಿದ್ದೇನೆಂದರೆ 1916ಕ್ಕೆ ಮುಂಚೆ ಹಳೆಯ ಮೈಸೂರಿನಲ್ಲಿ ನಿಮ್ಮ ವರ್ಗದವರು ಪ್ರೈಮರೀ 4ನೇ ತರಗತಿವರೆಗೆ ಓದಿ ಮನೆಗೆ ಹೋಗಬೇಕಾಗಿತ್ತು. ಅಂದಿನ ಯುವರಾಜರಾದ ಕಂಠೀರವ ನರಸಿಹಂರಾಜ ಒಡೆಯರ್ ಅವರ ಸಹಾಯ ಮತ್ತು ಸಹಕಾರದಿಂದ ನಿಮ್ಮ ವರ್ಗದವರೂ ಕೂಡ ಇಂಗ್ಲೀಷ್ ಶಾಲೆಗೆ ಸೇರಬಹುದೆಂದು ಸರ್ಕಾರಿ ಆಜ್ಞೆಯಾಯಿತು. ನಮ್ಮ ತಂದೆಯವರು ಇದನ್ನು ಹೇಳುತ್ತಿದ್ದರು. He was the first beneficiary of that Government Order.....

ಹಿಂದೆ ಮೇಧಾವಿಯಾಗಿದ್ದವರನ್ನು ಶಿಕ್ಷಣ ಇಲಾಖೆಯಲ್ಲಿ ಮುಖ್ಯಸ್ಥರನ್ನಾಗಿ ನೇಮಿಸುತ್ತಿದ್ದರು. ಆದರೆ ಈಗ ಏನು ಮಾಡುತ್ತಿದ್ದೀರಿ? ಇವತ್ತು ಕಮರ್ಷಿಯಲ್ ಟ್ಯಾಕ್ಸ್ ಆಫೀಸಿನಲ್ಲಿರುವ ಐ.ಎ.ಎಸ್. ಅಧಿಕಾರಿಯನ್ನು ತೆಗೆದು ಶಿಕ್ಷಣ ಇಲಾಖೆಗೆ ಹಾಕುತ್ತೀರಿ. ಇದರಿಂದ ಏನು ಪ್ರಯೋಜನ ಆಗುತ್ತದೆ? ಮೊದಲನೆಯಸಾರಿಗೆ ಕೆ. ಗುರುದತ್ ಅವರನ್ನು ಅಲ್ಲಿ ಹಾಕಿದ್ದರು. ಅವರಲ್ಲಿ ಒಳ್ಳೆಯ ವಿದ್ವತ್ ಇತ್ತು. ಯಾರೋ ಒಬ್ಬರು ಚೆನ್ನಾಗಿರಬಹುದು. ಆದರೆ ಅದೇ ಪರಿಪಾಠ ಈಗ ಬೆಳೆದು ಬಂದಿದೆ. ಹೀಗೆ ಮಾಡುವುದರಿಂದ ಅಲ್ಲಿ ಕೆಲಸ ಮಾಡತಕ್ಕ ಅಧಿಕಾರಿಗಳಿಗೆ ಪ್ರೌಢಿಮೆಯನ್ನು ಪರಿಪೂರ್ಣತೆಯನ್ನು ಸಾಧಿಸುವುದಕ್ಕಾಗುವುದಿಲ್ಲ. ನಾವು ಏನಿದ್ದರೂ ಅಡಿಷನಲ್ ಡೈರೆಕ್ಟರ್ ಆಗಿ ರಿಟೈರ್ ಆಗುತ್ತೇನೆಂದು ಹೇಳಿ ಬೇಸರಪಟ್ಟುಕೊಂಡು ಯಾವ ಕೆಲಸವನ್ನು ಸರಿಯಾಗಿ ಮಾಡುವುದಕ್ಕೆ ಹೋಗುವುದಿಲ್ಲ. ಆದ್ದರಿಂದ ಕೇಡರ್ ಅಂಡ್ ರಿಕ್ರೂಟ್‌ಮೆಂಟ್ ರೂಲ್ಸ್ ಏತಕ್ಕೆ ಬದಲಾಯಿಸಬಾರದು?

**How can an IAS Man be the top man?** ಇದು ಸರಿಯಲ್ಲ. ಮಾನ್ಯ ಲಕ್ಷ್ಮೀಸಾಗರ್ ಅವರು 7ನೇ ಕ್ಲಾಸನ್ನು ತೋರಿಸುತ್ತಿದ್ದರು, ಸುಮಾರು ವಿಷಯಗಳು ಇದರಲ್ಲಿದೆ. ಇಲ್ಲವೆಂದು ನಾನು ಹೇಳುವುದಿಲ್ಲ.

Government to prescribe the curricula ಎಂದು ಹೇಳಿದ್ದೀರಿ. ತಾವು ಇದಕ್ಕೆ ಸಹಾಯ ಮಾಡುವುದಕ್ಕೋ ಅಡ್ವೈಸರಿ ಕಮಿಟಿ ಮಾಡಬೇಕೆಂದು ಮಸೂದೆಯಲ್ಲಿ ಪ್ರಸ್ತಾಪ ಮಾಡಿದ್ದೀರಿ. ಆದರೆ ವಿದ್ಯಾ ಇಲಾಖೆಯಲ್ಲಿ ತಿಳಿದುಕೊಂಡಿರತಕ್ಕಂಥವರನ್ನು, ವಿಚಾರವಂತರನ್ನು ಬಳಸಿಕೊಂಡು ಈ ಹುದ್ದೆಗೆ ಬರುವುದಕ್ಕೆ ಸಹಾಯ ಆಗುವ ರೀತಿಯಲ್ಲಿ ತಾವು ಅವಕಾಶಮಾಡಬೇಕು. ಇವತ್ತಿನ ದಿವಸ ವೊಕೇಷನಲ್ ಎಜುಕೇಷನ್ ಸಂಬಂಧಪಟ್ಟ ಒಂದು ಡೈರಕ್ಟೋರೇಟ್ ಇದೆ. ಅಲ್ಲಿ ಒಬ್ಬ ಕೆ.ಎ.ಎಸ್. ಆಫೀಸರ್ ಇದ್ದಾರೆ. ಇದು ಖಾಯಂ ಇಲಾಖೆ ಆಗಿಲ್ಲ. ಬಹಳ ವರ್ಷಗಳಿಂದ ಈ ಇಲಾಖೆ ನಡೆಯುತ್ತಿದೆ. ದಾವಣಗೆರೆ ಇಂಜಿನಿಯರ್ ಕಾಲೇಜಿನಿಂದ ಒಬ್ಬರು ಇಲ್ಲಿಗೆ ಬಂದು ನಿವೃತ್ತಿಯಾದರು. ಈ ಇಲಾಖೆಯನ್ನು ಖಾಯಂ ಮಾಡಬೇಕೆನ್ನುವ ವಿಚಾರ ಇದೆಯೆಂದು ಕೇಳಿದ್ದೇನೆ. ಇದು ಸಂತೋಷದ ವಿಚಾರ. ಇವತ್ತು ಡೈರೆಕ್ಟರ್ ಆಫ್ ಟೆಕ್ನಿಕಲ್ ಎಜುಕೇಷನ್ ಸರ್ಕಾರಕ್ಕೆ ಸಂಬಂಧಪಟ್ಟ ಒಂದೇ ಒಂದು ಕಾಲೇಜು ದಾವಣಗೆರೆಯಲ್ಲಿ ಇದೆ. ಬೆಂಗಳೂರಿನಲ್ಲಿರತಕ್ಕಂಥಾದ್ದು, ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸೇರಿದ್ದು. ಇವತ್ತು ಇಲ್ಲಿ 30-35 ಪ್ರೈವೇಟ್ ಕಾಲೇಜುಗಳು ಇರತಕ್ಕಂಥ ಪರಿಸ್ಥಿತಿ ಇದೆ. ತಾವು ದಯಮಾಡಿ ಈ ವಿಚಾರದ ಕಡೆ ಗಮನಹರಿಸಬೇಕೆಂದು ಹೇಳುತ್ತೇನೆ.

ವಿಶ್ವವಿದ್ಯಾನಿಲಯಗಳು ಮತ್ತು ಕಾಲೇಜುಗಳು ಕುಪ್ತ ಕಾಲಕ್ಕೆ ಪರೀಕ್ಷೆಗಳನ್ನು ಮಾಡುವುದಿಲ್ಲ. ಈ ಬಿಲ್ಲಿನಲ್ಲಿ ಈ ವಿಚಾರ ಇಲ್ಲದೇ ಇದ್ದರೂ ಕೂಡ ನಾನು ಪ್ರಸ್ತಾಪ ಮಾಡಬೇಕಾಗಿದೆ. ಶಾಸನ ಸಭಾ ಸದಸ್ಯರೂ ಕೂಡಾ ಇದನ್ನು ಯೋಚನೆ ಮಾಡಬೇಕಾಗುತ್ತದೆ. ನಮ್ಮ ಮಕ್ಕಳ ಭವಿಷ್ಯದ ಬಗ್ಗೆ ವಿದ್ಯಾಭ್ಯಾಸದ ಬಗ್ಗೆ ವಿಚಾರ ಮಾಡಬೇಕಾದ್ದು ಅವಶ್ಯಕ. ಇವತ್ತು ಇಂಟರ್ ಮೀಡಿಯೆಟ್ ಕಾಲೇಜುಗಳು ಇವೆಯೇ ಎನ್ನುವ ಭಾವನೆ ಬಂದಿದೆ. ನಾನು ಹಿಂದೆ ಓದಿದಂಥ ಇಂಟರ್ ಮೀಡಿಯೆಟ್ ಕಾಲೇಜಿನಲ್ಲಿ ಪ್ರಿನ್ಸಿಪಾಲ್ ಕೊಠಡಿಯಲ್ಲಿ ಒಂದು ಕುರ್ಚಿ ಕೂಡ ಸರಿಯಿಲ್ಲ. ಅಂದರೆ ಇದು ಎಂಥ ಕಾಲೇಜು. ಅಲ್ಲಿ 1,600 ಜನ ವಿದ್ಯಾರ್ಥಿಗಳು ಇದ್ದಾರೆ. ಒಂದು ಜೂನಿಯರ್ ಇಂಟರ್ ಮೀಡಿಯೆಟ್, ಒಂದು ಸೀನಿಯರ್ ಇಂಟರ್ ಮೀಡಿಯೆಟ್ ಎಂದು ಎರಡು ಕ್ಲಾಸ್ ಇವೆ. ಪ್ರೈವೇಟ್ ಕಾಲೇಜುಗಳಲ್ಲಿ ಬೇಕಾದಷ್ಟು ವ್ಯವಸ್ಥೆ ಮಾಡಿದ್ದಾರೆ. ಅದರಲ್ಲಿ ಆರ್ಟ್ಸ್ ತರಗತಿಗಳು ನಡೆಯುತ್ತಾ ಇಲ್ಲ. ಶಾಲೆಗಳ ಪಕ್ಕದಲ್ಲಿಯೇ ವೀಡಿಯೋಗಳಿಗೆ ಅನುಮತಿ ಕೊಟ್ಟಿದ್ದಾರೆ. ಇದರಿಂದ ವಿದ್ಯಾರ್ಥಿಗಳು ವ್ಯಾಸಂಗದಲ್ಲಿ ಆಸಕ್ತಿ ಕೊಡದೆ ವೀಡಿಯೋ ನೋಡಿಕೊಂಡು ಹೋಗುತ್ತಾರೆ. ಹೀಗಾದರೆ ನೀವು ಏತಕ್ಕೆ ಇಷ್ಟೊಂದು ಹಣವನ್ನು ಖರ್ಚು ಮಾಡಬೇಕು? ಒಂದು ಕಡೆ ವಿದ್ಯಾವಂತರ ಮಾನವ ಶಕ್ತಿಯನ್ನು ವ್ಯಯ ಮಾಡುತ್ತಿದ್ದೀರಿ, ಇನ್ನೊಂದು ಕಡೆ ಇವರು

ವಿದ್ಯಾವಂತರಾಗುವುದಕ್ಕೆ ಹಣವನ್ನು ಖರ್ಚು ಮಾಡಿ, ವಿದ್ಯಾವಂತರಾಗುವುದಕ್ಕೆ ಅವಕಾಶ ಇಲ್ಲದಂತಹ ಪರಿಸ್ಥಿತಿ ನಿರ್ಮಾಣ ಮಾಡಿದ್ದೀರಿ. ಇದರ ಬಗ್ಗೆ ಸರ್ಕಾರ ವಿಚಾರ ಮಾಡಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ. ಸುಮಾರು ನೂರಕ್ಕೆ 90 ರಷ್ಟು ಅನುದಾನವನ್ನು ಪ್ರೈವೇಟ್ ಕಾಲೇಜುಗಳಿಗೆ ಕೊಡುತ್ತಿದ್ದೀರಿ. ಸರ್ಕಾರದವರು ಇವುಗಳನ್ನು ಏತಕ್ಕೆ ತೆಗೆದುಕೊಳ್ಳಬಾರದು? ಪೂರ್ವ ಪ್ರಾಥಮಿಕ ಶಾಲೆ, ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಹೈಸ್ಕೂಲುಗಳು, ಮತ್ತು ಕಾಲೇಜುಗಳನ್ನು ನೀವೇ ಏತಕ್ಕೆ ನಡೆಸಬಾರದು? ಆರ್ಟಿಕಲ್ 31ರ ಪ್ರಕಾರ ಮೈನಾರಿಟಿ ಶಾಲೆಗಳನ್ನು ಬಿಟ್ಟು, ಉಳಿದ ಶಾಲಾ ಕಾಲೇಜುಗಳನ್ನು ಸರ್ಕಾರದವರೇ ಏತಕ್ಕೆ ನಡೆಸಬಾರದು? ಇದರ ಬಗ್ಗೆ ವಿಚಾರ ಮಾಡತಕ್ಕಂಥಾದ್ದು ಬಹಳ ಉತ್ತಮವಾಗಿದೆ.

ಇವತ್ತು ವಿದ್ಯಾಭ್ಯಾಸ ಕನ್‌ಕರೆಂಟ್ ಲಿಸ್ಟ್‌ಗೆ ಬಂದಿದೆ. ಮೊದಲು ಇದು ರಾಜ್ಯ ಸರ್ಕಾರದ ವ್ಯಾಪ್ತಿಯಲ್ಲಿ ಇತ್ತು. ಕನಕರೆಂಟ್ ಲಿಸ್ಟ್‌ಗೆ ಹೋದರೆ ರಾಜ್ಯದ ಹಿತದೃಷ್ಟಿಯಿಂದ ಒಳ್ಳೆಯದು ಎಂದು ಹೇಳುವುದರಲ್ಲಿ ನಾನೂ ಒಬ್ಬ. ಕೇಂದ್ರ ಸರ್ಕಾರದವರು ಕೂಡ ಇದರ ಬಗ್ಗೆ ತೀರ್ಮಾನ ತೆಗೆದುಕೊಳ್ಳುವ ಪರಿಸ್ಥಿತಿ ಇದ್ದ ಹಾಗೆ ಕಾಣುವುದಿಲ್ಲ. ಖಾಸಗಿ ವಿದ್ಯಾ ಸಂಸ್ಥೆಗಳು ಹೆಚ್ಚಾಗಿ ಆಗುವುದಕ್ಕೆ ರಾಜ್ಯ ಸರ್ಕಾರದವರು ಪ್ರೋತ್ಸಾಹಕೊಡತಕ್ಕ ವಿಚಾರದಲ್ಲಿ ಆಸಕ್ತಿ ವಹಿಸಿದ್ದಾರೆ. ನನ್ನ ಅಭಿಪ್ರಾಯದಲ್ಲಿ ಹೇಳುವುದಾದರೆ, ಸರ್ಕಾರದವರೇ ಇವುಗಳನ್ನು ನಡೆಸತಕ್ಕಂಥಾದ್ದು ಬಹಳ ಒಳ್ಳೆಯದು. ಆದರಲ್ಲೂ ಕೂಡ ದುರ್ಬಲವರ್ಗದವರು ಏನಿದ್ದಾರೆ ಅವರ ಹಿತದೃಷ್ಟಿಯಿಂದ ಇದು ಒಳ್ಳೆಯದೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಏಕೆಂದರೆ ತಾವು ಇಲ್ಲಿ ಒಂದು ಕ್ಲಾಜ್ ಹಾಕಿದ್ದೀರಿ : Promotion of education of the weaker sections and the handicapped ಎಂದು ಪ್ರಸ್ತಾಪ ಮಾಡಿದ್ದೀರಿ. The State Government shall endeavour to remote the education of the handicapped, backward classes and weaker sections of the society including the economically weaker sections thereof ಎಂದು ಹೇಳಿದ್ದೀರಿ. ಇದನ್ನು ಹೇಗೆ ಮಾಡುವುದಕ್ಕೆ ಸಾಧ್ಯವಾಗುತ್ತದೆ? ಖಾಸಗಿ ವಿದ್ಯಾಸಂಸ್ಥೆಗಳಲ್ಲಿ ಮಕ್ಕಳಿಗೂ ಸೀಟುಗಳನ್ನು ಕೊಡುವುದಿಲ್ಲ. ಅಧ್ಯಾಪಕರನ್ನು ಕೂಡ ನೇಮಕ ಮಾಡಿಕೊಳ್ಳುವುದಿಲ್ಲ. ಇದನ್ನು ನಾವು ಪ್ರತಿನಿತ್ಯ ನೋಡುತ್ತಿದ್ದೇವೆ. ಸರ್ಕಾರದವರು ಎಕ್ವಿಪ್‌ಮೆಂಟ್ ಗ್ರಾಂಟ್ ಮತ್ತು ಬಿಲ್ಡಿಂಗ್ ಗ್ರಾಂಟನ್ನು ಸ್ವಲ್ಪ ಮಾತ್ರ ಕೊಡುತ್ತಿದ್ದಾರೆ. ಹೈಸ್ಕೂಲುಗಳ ಫೀಯನ್ನು ಕಡಿಮೆ ಮಾಡಿ ಈ ಹಣವನ್ನು ವಿದ್ಯಾ ಸಂಸ್ಥೆಗೆ ವಾಪಸ್ ಕೊಡುತ್ತಿದ್ದಾರೆ. ಆಟದ ಮೈದಾನ, ಲೈಬ್ರರಿ, ಬಿಲ್ಡಿಂಗ್ ಇವತ್ತು ಇರಬೇಕೆಂದು, ಪರಿಸರದ ದೃಷ್ಟಿಯಿಂದ ತಾವು ಹೇಳಿದ್ದೀರಿ. ನಾನಾದರೂ ಹೇಳುತ್ತೇನೆ. ಸರ್ಕಾರದವರೇ ಇವರಿಗೆ ಸುಮಾರು 90 ರಷ್ಟು ಸಹಾಯ ಧನವನ್ನು ಕೊಡುತ್ತಿರುವುದರಿಂದ, ತಾವೇ ಏತಕ್ಕೆ ಇವುಗಳನ್ನು ವಹಿಸಿಕೊಳ್ಳಬಾರದು? ನನ್ನ ಊರಿನಲ್ಲಿ ಒಂದು ಫಸ್ಟ್ ಗ್ರೇಡ್ ಕಾಲೇಜು ಬಂತು. ಹೆಣ್ಣು ಮಕ್ಕಳು ಹಿರಿಯೂರಿನಿಂದ ಚಿತ್ರದುರ್ಗಕ್ಕೆ ಸುಮಾರು 25 ಮೈಲಿ ದೂರ

ಹೋಗುತ್ತಿದ್ದಾರೆ. ಸಕ್ಕರೆ ಕಾರ್ಖಾನೆಯಲ್ಲಿ ಪ್ರತಿಯೊಂದು ಟನ್ನಿಗೆ 1 ರೂ. ನಂತೆ ವಸೂಲ್ಮಾಡುತ್ತಿದ್ದಾರೆ. 1972ನೇ ಇಸವಿಯಿಂದ ಸಕ್ಕರೆ ಕಾರ್ಖಾನೆ ಅಸ್ತಿತ್ವಕ್ಕೆ ಬಂತು. ಇದುವರೆಗೂ ಎಷ್ಟು ಹಣವನ್ನು ವಸೂಲ್ಮಾಡಿರಬಹುದು? ಕಾಲೇಜು ಸಕ್ಕರೆ ಕಾರ್ಖಾನೆಯ ಕಾಂಪೌಂಡಿನಲ್ಲಿ ನಡೆಯುತ್ತಿದೆ. ಜೂನಿಯರ್ ಕಾಲೇಜಿನಲ್ಲಿ ಒಬ್ಬ ಲೆಕ್ಚರರ್ ಆಗಿದ್ದವರನ್ನು ಈ ಶಾಲೆಗೆ ಡೆಪ್ಯೂಟೇಷನ್ ಮೇಲೆ ಕಳಿಸಿ, ಪ್ರಿನ್ಸಿಪಾಲರಾಗಿ ಮಾಡಿದ್ದಾರೆ. ಇದು ಸರಿಯೇ? ಕಾನೂನು ಪ್ರಕಾರ ಅವಕಾಶ ಇದೆಯೇ? ಇವತ್ತು ಹಳ್ಳಿಗಾಡಿನಲ್ಲಿ ವಿದ್ಯಾಭ್ಯಾಸದ ಮಟ್ಟ ಹೇಗಿರುತ್ತದೆ ಎನ್ನುವುದನ್ನು ವಿಚಾರ ಮಾಡಬೇಕಾಗುತ್ತದೆ. ಇವತ್ತು ನಮ್ಮ ರಾಜ್ಯದಲ್ಲಿ ಎಷ್ಟು ಖಾಸಗಿ ವಿದ್ಯಾ ಸಂಸ್ಥೆಗಳು ನಡೆಯುತ್ತಿವೆ. ಬೆಂಗಳೂರಿನಲ್ಲಿ ನರ್ಸರಿ ಶಾಲೆಗೆ ಮಕ್ಕಳನ್ನು ಸೇರಿಸಬೇಕಾದರೆ 3-4 ಸಾವಿರ ರೂಪಾಯಿ ಡೊನೇಷನ್ ಕೊಡಬೇಕು. ಇಲ್ಲದೇ ಹೋದರೆ ಸೀಟುಕೊಡುವುದಿಲ್ಲ. ಇವತ್ತು ಒಬ್ಬ ಎರಡನೇ ದರ್ಜೆ ಗುಮಾಸ್ತನಿಗೂ ಕೂಡ ಏನು ಭಾವನೆ ಇದೆ ಎಂದರೆ, ನನ್ನ ಮಕ್ಕಳನ್ನು ಕಾನ್ವೆಂಟ್ ಶಾಲೆಗೆ ಸೇರಿಸಬೇಕು ಎಂಬ ಮಾನಸಿಕವಾದ ಹಠವಿದೆ. ಕಾರಣ ಕನ್ನಡಕ್ಕೆ ಪ್ರೋತ್ಸಾಹ ಇಲ್ಲ ಎನ್ನುವ ಉದ್ದೇಶದಿಂದ; ಅಲ್ಲದೆ ಇಂಗ್ಲೀಷ್‌ನ ಮೇಲಿನ ವ್ಯಾಮೋಹ. ಹಿಂದೆ ನಾವು ನೀವು ಓದುತ್ತಿದ್ದಾಗ ಮಿಡಲ್ ಸ್ಕೂಲಿಗೆ ಬಂದಕೂಡಲೇ ಒಬ್ಬರು ಕನ್ನಡ ಪಂಡಿತರು ಇರುತ್ತಿದ್ದರು. ವ್ಯಾಕರಣಕ್ಕೆ ಸಂಬಂಧಪಟ್ಟಂತೆ ಒಬ್ಬರು ಇರುತ್ತಿದ್ದರು. ಇವತ್ತು ಸಹ ಯಾವ ವ್ಯವಸ್ಥೆಯೂ ಕಂಡು ಬರುತ್ತಿಲ್ಲ. ಇವತ್ತು ವಿದ್ಯಾವಂತರ ಸಂಖ್ಯೆ ಜಾಸ್ತಿಯಾಗಿದೆ. ಪರಿಸ್ಥಿತಿಗೆ ಅನುಗುಣವಾಗಿ, ಸಮಾಜದ ಜನತೆಗೆ ನಾವು ವಿದ್ಯಾಭ್ಯಾಸವನ್ನು ಕೊಡದೇ ಹೋದರೆ because we have been trying to provide education to the periphery the society. Hitherto, it was the monopoly of the centre of the safety.

ಸಮಾಜದಲ್ಲಿ ಕೆಲವು ವರ್ಗಗಳ ಕೈಗೆ ಇದು ಸಿಕ್ಕಿದೆ, ಇವತ್ತು ಅದನ್ನು ಸಮಾಜದ ಎಲ್ಲಾ ವರ್ಗಗಳಿಗೆ, ಎಲ್ಲಾ ಭಾಗಕ್ಕೆ ಕಳುಹಿಸುವಾಗ ಆ ವ್ಯವಸ್ಥೆಯನ್ನು ನಾವು ಮಾಡಬಾರದೇ ಅಂತಹ ಉಪಾಧ್ಯಾಯರು ಎಲ್ಲಿದ್ದಾರೆ? ಇನ್ನೂ ನಾಲ್ಕು ತರಗತಿಗಳನ್ನು ಒಂದು ಕಡೆಯಲ್ಲಿ ಸೇರಿಸಿ, ಒಬ್ಬ ಉಪಾಧ್ಯಾಯರನ್ನು ಹಾಕತಕ್ಕ ವ್ಯವಸ್ಥೆಯನ್ನು ನಾವು ಮಾಡುತ್ತಿರುವುದು ನಡೆದಿದೆ. ಮೂರು ಇರುವ ಕಡೆ ಇಬ್ಬರು, ಇಬ್ಬರು ಇರುವ ಕಡೆ ಒಬ್ಬರನ್ನು ನಾವು ಮಾಡುತ್ತಿದ್ದೇವೆ. ಇನ್ನು ಶಾಲೆ ಬಿಟ್ಟು ಹೋಗುವವರು ಎಷ್ಟು? 3, 4 ಅಥವಾ 2-3ನೇ ಸ್ಟಾಂಡರ್ಡ್‌ನಲ್ಲಿ ಬಿಟ್ಟುಹೋಗುವವರ ಸಂಖ್ಯೆ 38 ಪರ್ಸೆಂಟ್ ಇದೆ.

ಡಾ|| ಎಚ್.ಎಲ್. ತಿಮ್ಮೇಗೌಡ.- ನಮ್ಮಲ್ಲಿ ಒಂದು ಪಾಠಶಾಲೆಯಲ್ಲಿ ಏಳು ತರಗತಿಗಳೂ ಒಂದೇ ಹಾಲ್‌ನಲ್ಲಿ ಇವೆ.

ಶ್ರೀ ಕೆ.ಎಚ್. ರಂಗನಾಥ್.- ಅಂತಹ ಶಾಲೆಗಳು ಸುಮಾರು ನಮ್ಮಲ್ಲಿವೆ. ಡೆಪ್ಯುಟೇಷನ್ ಮೇಲೆ ಉಪಾಧ್ಯಾಯರನ್ನು ಕಳುಹಿಸುತ್ತಾರೆ. ನಾಲ್ಕು ಜನ ಉಪಾಧ್ಯಾಯರು

ಇದ್ದ ಮೂರು ಜನರನ್ನು ಮಾಡಿ ಕಳುಹಿಸುತ್ತಾರೆ. ಮೂರು ಜನ ಇರುವ ಕಡೆ ಇಬ್ಬರನ್ನು ಮಾಡಿ ಒಬ್ಬರನ್ನು ಡೆಪ್ಯುಟೇಷನ್ ಕಳುಹಿಸುತ್ತಾರೆ. ಇಬ್ಬರು ಇರುವ ಕಡೆ ಒಬ್ಬರನ್ನು ಮಾಡುತ್ತಾರೆ. ಈ ರೀತಿ ವ್ಯವಸ್ಥೆ ಇದೆ. ನಾವು ಜವಾಬ್ದಾರಿಯುತವಾಗಿ ಇದನ್ನು ಗಮನಿಸಬೇಕು. ಹಳ್ಳಿಯಲ್ಲಿರತಕ್ಕ ಮಕ್ಕಳಿಗೆ ಈ ವ್ಯವಸ್ಥೆಯನ್ನು ನಾವು ದೊರಕಿಸಬೇಕು. ಶೋಷಣೆಗೆ ಒಳಗಾಗಿರತಕ್ಕ ಜನಕ್ಕೆ, ಇವತ್ತು ವಿದ್ಯೆಯಿಂದ ಕಣ್ಣು ಬಿಡತಕ್ಕ ಸಮಯದಲ್ಲಿ ಅವರಿಗೆ ಏನು ವ್ಯವಸ್ಥೆಬೇಕೋ ಅದನ್ನು ಮಾಡದೇ ಹೋದರೆ ತಪ್ಪಾಗುತ್ತದೆ. ಈ ವ್ಯವಸ್ಥೆಯನ್ನು ಮಾಡುವುದಕ್ಕೆ ಧೈರ್ಯಮಾಡಬೇಕೆಂದು ನಾನು ಹೇಳುತ್ತೇನೆ ಹೈಸ್ಕೂಲಿನಲ್ಲಿ ಭಾಷೆಯ ಬಗ್ಗೆ ಎಷ್ಟು ಗಮನ ಕೊಡಬೇಕೋ ಅಷ್ಟು ಗಮನ ನಾವು ಕೊಟ್ಟಿಲ್ಲ. ಮಕ್ಕಳಿಗೆ ಯಾವ ಪ್ರಮಾಣದಲ್ಲಿ ಭಾಷೆಯ ಮೇಲೆ ಪ್ರಭುತ್ವ ಇರಬೇಕೋ ಅಷ್ಟಿಲ್ಲ. ಒಂದೊಂದು ಸಲ ಉಪಾಧ್ಯಾಯರು ಇದರ ಬಗ್ಗೆ ಮಾತನಾಡುತ್ತಾರೆ. ಹೈಸ್ಕೂಲಿನಲ್ಲಿ ನಾವು ಅವನಿಗೆ ಕಾಗುಣಿತ ಕಲಿಸಬೇಕಾದ ಪರಿಸ್ಥಿತಿ ಬಂದಿದೆ, ಏನು ಮಾಡುವುದು ಎಂದು ಹೇಳುತ್ತಾರೆ. ಹಳ್ಳಿಗಾಡಿನಲ್ಲಿರತಕ್ಕ ಉಪಾಧ್ಯಾಯರ ಹಾಗೂ ಸ್ಕೂಲುಗಳ ಪರಿಸ್ಥಿತಿ ಹೀಗಿದೆ. ಅಲ್ಲಿ ಪರೀಕ್ಷೆಯಲ್ಲಿ ಪಾಸ್ ಮಾಡತಕ್ಕದ್ದು ಹೇಗೆ? ಪರೀಕ್ಷೆ ಬಗ್ಗೆ ಬಹಳ ಆಸ್ಥೆ ವಹಿಸಿದ್ದೀರಿ. ಮಾಲ್‌ಪ್ರಾಕ್ಟೀಸ್ ಆಗಬಾರದು ಎಂದು ಹೇಳಿದ್ದೀರಿ. ಮಾಲ್‌ಪ್ರಾಕ್ಟೀಸ್ ಬಗ್ಗೆ ತಮ್ಮಲ್ಲಿರತಕ್ಕಂಥ ಮಾತು ಹೇಳುವುದಾದರೆ "ಬಾಯಿ ತೆಗೆದರೆ ಮಾಲಾಪ್ರಾಕ್ಟಿಸ್ ಆಗುತ್ತದೆ" ಸೂಪರ್‌ವೈಸರ್, ಇನ್‌ವಿಜಿಲೇಟರ್ಸ್ ಎಲ್ಲರನ್ನು ಸರಿಮಾಡಿಕೊಳ್ಳುತ್ತಾರೆ, ಹಳ್ಳಿಯವರೂ ಸೇರಿ ನಮ್ಮೂರ ಸ್ಕೂಲಿಗೆ ಒಳ್ಳೆಯ ರಿಸಲ್ಟ್ ಬರಬೇಕೆಂದು ಕಾಪಿ ಮಾಡಿಸುತ್ತಾರೆ. ಬೋರ್ಡ್ ಮೇಲೆ ಎಲ್ಲಾ ಉತ್ತರ ಬರೆಯುತ್ತಾರೆ. ಮುಂದಿನ ಬೋರ್ಡ್ ನೋಡು ಎಂದು ಅಲ್ಲಿ ಬರೆದಿದ್ದರೆ, ಇವನೂ "ಪು.ನೋ" ಎಂದು ಬರೆಯುತ್ತಾನೆ.

ಡಾ|| ಸಂಗಮೇಶ್ವರ ಸರದಾರ್.- ಇದು ಮುಂದುವರಿಯಬೇಕೆಂದು ಹೇಳುತ್ತೀರಾ?

ಶ್ರೀ ಕೆ.ಎಚ್. ರಂಗನಾಥ್.- ಇದು ನಮ್ಮ ಡಾಕ್ಟರಿಗೆ ತಿಳಿಯುವುದಿಲ್ಲ. ಇದು ಬೇಡ ಎಂದು ನಾವು ಹೇಳುವುದು. ಇದನ್ನು ಮುಂದುವರಿಸಿಕೊಂಡು ಹೋಗಬಾರದು ಎಂದು ನಾವು ಹೇಳುತ್ತಿರುವುದು. ತಮ್ಮ ಕ್ಷೇತ್ರ ರಾಯಚೂರು ಟೌನ್, ಎಲ್ಲರೂ ಉರ್ದು ಓದಿರುತ್ತಾರೆ. ಅವರಿಗೆ "ಮುಷಾಯರ್" ಹೇಳಿದರೆ ಮುಗಿದುಹೋಯಿತು. ಅಲ್ಲಿ ಯಾರೂ ಪುಸ್ತಕಗಳನ್ನೇ ಕೊಂಡುಕೊಳ್ಳುವುದಿಲ್ಲ ಎಂದು ನಮ್ಮ ಮಿತ್ರರು ಹೇಳುತ್ತಾರೆ. ನಿಮ್ಮದು ಮುಷಾಯರ್ ಟೌನ್.

ಡಾ|| ಸಂಗಮೇಶ್ವರ ಸರದಾರ್.- ನಾವೂ ಹಳ್ಳಿಯಲ್ಲಿ ಹುಟ್ಟಿದ್ದೇವೆ.

ಶ್ರೀ ಕೆ.ಎಚ್. ರಂಗನಾಥ್.- ಆದರೆ ಹಳ್ಳಿಯಲ್ಲಿ ನೀವು ಇಲ್ಲವಲ್ಲ. ಮೊನ್ನೆದಿನ ಮಾತನಾಡುತ್ತಾ "ನಮ್ಮ ತಂದೆಯವರು ವಕೀಲಿ ಮಾಡುತ್ತಿದ್ದರು ಹಳ್ಳಿಯಲ್ಲಿ ಇರಲಿಲ್ಲ" ಎಂದು ಹೇಳಿ ಸ್ವಾಮಿ. ತಮ್ಮ ಉದ್ದೇಶ ಏನೋ ಚೆನ್ನಾಗಿದೆ. ಆದರೆ ಈ ಒಂದು ಪರಿಸ್ಥಿತಿ

ಇರುವುದರಿಂದ ಏನಾಗುತ್ತದೆ, ನಮ್ಮ ಶಾಲೆಗೆ ಸರಿಯಾದ ರಿಸಲ್ಟ್ ಬರದೇಹೋದರೆ ರೆಕಾಗ್ನಿಷನ್ ತೆಗೆಯುತ್ತಾರೆ. ಎಂದು ಮಾಡುತ್ತಾರೆ ಎಂಬ ಭಯದಿಂದ ಹಳ್ಳಿಯವರು ಇಂತಹ ಒಂದು ಪರಿಸ್ಥಿತಿಗೆ ತಾವಾಗಿಯೇ ತಳ್ಳಿದ್ದಾರೆ. ನಾವೂ ಉಪಾಧ್ಯಾಯರು ಎಷ್ಟಿರಬೇಕು, ಯಾವ ಯಾವ ಭಾಷೆಗೆ ಸಂಬಂಧಪಟ್ಟಂತೆ ಎಷ್ಟೆಷ್ಟು ಉಪಾಧ್ಯಾಯರು ಇರಬೇಕು, ಸೈನ್ಸ್ ಟೀಚರ್ಸ್ ಎಷ್ಟಿರಬೇಕು, ಮ್ಯಾಥ್ಸ್ ಟೀಚರ್ಸ್ ಎಷ್ಟಿರಬೇಕು ಇದನ್ನೆಲ್ಲಾ ನಿಗಾಮಾಡಿ ಕಳುಹಿಸುವುದಿಲ್ಲ. ಕಾಲೇಜುಗಳನ್ನು ತೆಗೆಯುವಾಗ ಕೂಡ ಅಷ್ಟೆ. ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಎಷ್ಟು ಜನ ಕುಳಿತುಕೊಳ್ಳುತ್ತಾರೆ, ಮುಂದೆ ಅದರಲ್ಲಿ ಎಷ್ಟು ಜನ ಕಾಲೇಜಿಗೆ ಹೋಗುತ್ತಾರೆ ಇವುಗಳನ್ನು ಅಂದಾಜು ಮಾಡಿ, ಕಾಲೇಜುಗಳನ್ನು ಸ್ಯಾಂಕ್ಷನ್ ಮಾಡುವುದಿಲ್ಲ. ಹೀಗಾಗಿ ಇದು ಒಂದು ತರಹ ನಡೆದುಕೊಂಡು ಬಂದು, ವಿದ್ಯಾಭ್ಯಾಸಕ್ಕೆ ಧಕ್ಕೆ ಆಗತಕ್ಕ ಸ್ಥಿತಿ ಒದಗಿಬಂದು ಕಷ್ಟವಲ್ಲಿ ನಾವು ಸಿಕ್ಕಿಹಾಕಿಕೊಂಡಿದ್ದೇವೆ. ಇದರ ಬಗ್ಗೆ ಮಾನ್ಯ ಮಂತ್ರಿಗಳು ಗಮನ ಹರಿಸಬೇಕೆಂದು ಕೇಳುತ್ತೇನೆ.

ಸ್ವಾಮಿ, ಇನ್ನು ಪಠ್ಯಪುಸ್ತಕಗಳ ಬಗ್ಗೆ ಒಂದು ಮಾತನ್ನು ಆಡಲು ಇಷ್ಟಪಡುತ್ತೇನೆ. ತಾವು ಇದರಲ್ಲಿ ಕೆಲವಾರು ಒಳ್ಳೆಯ ಏರ್ಪಾಡುಗಳನ್ನು ಹೇಳಿದ್ದೀರಿ. ಸೋಷಿಯಲ್ ಸೈನ್ಸ್ ಎಂದು ಹೇಳಿದ್ದೀರಿ. ನಮ್ಮ ರಾಜ್ಯದ ಚರಿತ್ರೆ ನಮ್ಮ ಮಕ್ಕಳಿಗೆ ಗೊತ್ತಿಲ್ಲದ ಪರಿಸ್ಥಿತಿ ಇದೆ. ನಮ್ಮ ರಾಷ್ಟ್ರದ ಚರಿತ್ರೆ ನಮ್ಮ ಮಕ್ಕಳಿಗೆ ಗೊತ್ತಿಲ್ಲ. ನಮ್ಮ ರಾಜ್ಯದ ಭೂಗೋಳ ಗೊತ್ತಿಲ್ಲ, ಪ್ರಪಂಚದ ಭೂಗೋಳ ಗೊತ್ತಿಲ್ಲ, ನಾವು ಮಾಡಿರುವಂಥ ಕ್ರಮ ಸರಿಯಿಲ್ಲ, ಇದರ ಬಗ್ಗೆ ಹೇಗೆ ತೀರ್ಮಾನ ತೆಗೆದುಕೊಂಡರೋ ಗೊತ್ತಿಲ್ಲ. ನಾನು ತಮ್ಮನ್ನು ನೇರವಾಗಿ ಆಪಾದಿಸುತ್ತಿಲ್ಲ. ನಾನು ದಿವಂಗತ ದೇವರಾಜ ಅರಸು ಇದ್ದಾಗಿನಿಂದಲೂ ಹೇಳುತ್ತಿದ್ದೇನೆ. ಮಕ್ಕಳು ಪ್ರಾಥಮಿಕ ಶಾಲೆಯಲ್ಲಿ ವ್ಯಾಕರಣ ಕಲಿಯುತ್ತಿಲ್ಲ. ಮಾಧ್ಯಮಿಕ ಶಾಲೆಯಲ್ಲೂ ಕಲಿಯುತ್ತಿಲ್ಲ. ಕನ್ನಡ ವ್ಯಾಕರಣ ಇಲ್ಲ, ಇಂಗ್ಲಿಷ್ ವ್ಯಾಕರಣವೂ ಇಲ್ಲ. ಅಮೇರಿಕದವರು ಹೇಳಿದರು, ಇಂಗ್ಲೆಂಡ್‌ನವರು ಹೇಳಿದರು ಎಂದು ಮಾತನಾಡುತ್ತಾ, ಮಾತನಾಡುತ್ತಾ ವ್ಯಾಕರಣ ಬರುತ್ತದೆ ಎಂದು. ನೀವೂ ಅದೇ ತೀರ್ಮಾನಕ್ಕೆ ಬಂದು ಅದೇ ಅಭಿಪ್ರಾಯಕ್ಕೆ ಬಂದು, ಈ ತೀರ್ಮಾನವನ್ನು ತೆಗೆದುಕೊಂಡಿದ್ದೀರಿ. ಅದು ಸರಿಯೋ ತಪ್ಪೋ ಎಂಬುದನ್ನು ತಾವು ಯೋಚನೆ ಮಾಡಬೇಕಾಗುತ್ತದೆ. ನಾನು ವಿದೇಶಗಳಿಗೆ ಹೋಗಿದ್ದಾಗ, ಒಂದೆರಡು ಶಾಲೆಗಳಿಗೆ ಹೋಗತಕ್ಕ ಅವಕಾಶ ಸಿಕ್ಕಿತ್ತು. ಆ ದೇಶದಲ್ಲಿ ಅವರು ವಿದ್ಯಾಭ್ಯಾಸದ ವಿಚಾರದಲ್ಲಿ ಎಷ್ಟು ರಿಜಿಡ್ ಆಗಿದ್ದಾರೆ ಎಂದರೆ, ಮಕ್ಕಳಿಗೆ ಕಲಿಸತಕ್ಕ ವಿಚಾರದಲ್ಲಿ, ಒಂದು ಕ್ರಮವನ್ನು ಅನುಸರಿಸುವುದರಲ್ಲಿ ಅವರಿಗೆ ತಿಳಿಸುವುದರಲ್ಲಿ they are very Orthodox. ನಿಮ್ಮಲ್ಲಿ ಶಾಲೆಯನ್ನು ಬಿಟ್ಟು ಹೋಗುವವರ ಸಂಖ್ಯೆ ಎಷ್ಟಿದೆ ಎಂದು ನಾನು ಕೇಳಿದೆ. ಅದಕ್ಕೆ ಅವರು ನಮ್ಮಲ್ಲಿ ಶಾಲೆಯನ್ನು ಬಿಟ್ಟು ಹೋಗತಕ್ಕವರು ಪಾಯಿಂಟ್ ಸಮ್‌ಥಿಂಗ್ ಎಂದರು. ಅವನಿಗೆ ಆಸಕ್ತಿ ಇದೆಯೋ ಇಲ್ಲವೋ ಎಂಬುದನ್ನು ನೋಡಿ, ಅವನು 11ನೇ ತರಗತಿವರೆಗೆ ಕಡ್ಡಾಯವಾಗಿ

ಓದಬೇಕು, 11ನೇ ಕ್ಲಾಸ್ ಆದಮೇಲೆ ಬೇರೆಕಡೆ ಹೋಗಬೇಕು. ನಮ್ಮ ಎಸ್.ಎಸ್.ಎಲ್.ಸಿ. ತರಹ, ಅಲ್ಲಿಂದ ಬೇರೆಕಡೆಗೆ ಡೈವರ್ಟ್ ಮಾಡುತ್ತಾರೆ. ಎಲ್ಲಿ ಅವನಿಗೆ ಆಸಕ್ತಿ ಇದೆ ಅಲ್ಲಿಗೆ ಅವನನ್ನು ಕಳುಹಿಸುತ್ತಾರೆ. ಅಲ್ಲಿ ಅವನನ್ನು ತಯಾರುಮಾಡುತ್ತಾರೆ. ಹೀಗೆ ಮಾಡಿ ಮಾಡಿ, ಅನಕ್ಷರಸ್ಥರು ಅಲ್ಲಿ ಬಹಳ ಕಡಿಮೆ ಇದ್ದಾರೆ. ಅಲ್ಲಿ ಮ್ಯಾನ್ಯುಯಲ್ ಲೇಬರ್‌ಗೆ ಜನ ಸಿಕ್ಕದಿರುವ ಪರಿಸ್ಥಿತಿ ಬರುತ್ತದೆ.

ನಮ್ಮಲ್ಲಿ ಇವತ್ತಿನ ದಿವಸ ಏನಾಗಿದೆ. ನಾನು ನಿನ್ನೆ ಡೆಕ್ಕನ್ ಹೆರಾಲ್ಡ್ ಪತ್ರಿಕೆ ಓದುತ್ತಿದ್ದೆ. ಅದರಲ್ಲಿ ಡಾ|| ವಿ.ಕೆ.ಆರ್.ವಿ. ರಾವ್ ಅವರು ಒಂದು ಲೇಖನ ಬರೆದಿದ್ದಾರೆ. ನಮ್ಮಲ್ಲಿ ಇದ್ದವರು, ಇಲ್ಲದವರ ನಡುವೆ ಅಂತರ ಹೇಗೆ ಜಾಸ್ತಿಯಾಗುತ್ತಿದೆ, ಓದಿದವರು, ಅನಕ್ಷರಸ್ಥರ ನಡುವೆ ಅಂತರ ಹೇಗೆ ಜಾಸ್ತಿಯಾಗುತ್ತಿದೆ ಎಂಬುದನ್ನು ಅವರು ಚೆನ್ನಾಗಿ ಹೇಳುತ್ತಾ ಬರೆದಿದ್ದಾರೆ. "It is transgressing the limits of tolerance" ಎನ್ನುವ ಮಾತನ್ನು ಹೇಳಿದ್ದಾರೆ. ಮತ್ತು ಇದರಿಂದ ಗಂಡಾಂತರ ಇದೆ ಎಂಬ ಮಾತನ್ನೂ ಹೇಳುತ್ತಾ, ಈ ಒಂದು ಮಸೂದೆ ಸಮಗ್ರವಾದ ಮಸೂದೆಯಾಗಿ ಬರುತ್ತದೆ ಎಂದು ನಾನು ತಿಳಿದುಕೊಂಡಿದ್ದೆ. ಆದರೆ ದುರದೃಷ್ಟವಶಾತ್ ಈಗಿರತಕ್ಕಂಥ ಗೌರ್ನಮೆಂಟ್ ಆರ್ಡರ್‌ಗಳು ಏನಿದ್ದಾವೆ. [1]ಅವುಗಳನ್ನು ಸೆಕ್ಷನ್‌ಗಳನ್ನು, ಕ್ಲಾಸ್‌ಗಳನ್ನು ಒಂದು ಕಡೆ ಸೇರಿಸಿ ಒಂದು ಮಸೂದೆ ತರಹ ಬಂದಿದೆ. [2]ಇವೆಲ್ಲಾ ಒಂದೇಕಡೆ ಒಂದು ರೂಪದಲ್ಲಿ ಇರಲಿಲ್ಲ. ಈಗ ಅದೆಲ್ಲಾ ಸೇರಿ ಒಂದು ಆಕ್ಟ್ ಆಗಿ ಬಂದಿದೆ. ಮಾನ್ಯ ಮಂತ್ರಿಗಳು ಸ್ವಲ್ಪಮಟ್ಟಿಗೆ ಇದೇ ಸಮಯದಲ್ಲಿ ಪಾಸಾಗಬೇಕೆಂದು ಅವಸರ ಮಾಡಿದರು. ಅವರು ಆಸ್ಥೆವಹಿಸಿ, ಎಲ್ಲದಕ್ಕೆ ಸಂಬಂಧಪಟ್ಟ ಹಾಗೆ ಇದನ್ನು ಮಾಡಿದ್ದರೆ ಚೆನ್ನಾಗಿತ್ತು ಎಂದು ನಾನಾದರೂ ಕೂಡಾ ಹೇಳುತ್ತೇನೆ. ಸ್ವಾಮಿ ಇದರಲ್ಲಿ ಟ್ಯುಟೋರಿಯಲ್ ಇನ್‌ಸ್ಟಿಟ್ಯೂಷನ್ ಕೂಡ ತಮ್ಮ ಅಧೀನಕ್ಕೆ ತೆಗೆದುಕೊಂಡಿದ್ದೀರಿ. ಇದರಲ್ಲಿ ಯಾವ ಯಾವ ಸಂಸ್ಥೆಗಳು ಸೇರುತ್ತವೆ ಎಂಬುದನ್ನು ಹೇಳಿದ್ದೀರಿ. It applies to the whole of the State in Karnataka. It applies to all educational institutions, tutorial institutions in the State except ಹಾಗೆ ಎಂದು ಹೇಳುತ್ತಾ, ತಾವು ಮುಂದೆ ಹೇಳುತ್ತಾ ಬರುತ್ತೀರಿ. ಪೇಜ್ 16ರಲ್ಲಿ ಕಾಮರ್ಸ್ ಇನ್‌ಸ್ಟಿಟ್ಯೂಷನ್ಸ್ ಬಗ್ಗೆ ಕೆಲವು ಕಲಮುಗಳನ್ನು ಹೊರತುಪಡಿಸಿದ್ದೀರಿ. ಪುಟ 16ರಲ್ಲಿ ತೋರಿಸಿರುವಂತೆ ವಾಣಿಜ್ಯ ಶಾಲೆಗಳನ್ನು ಕೆಲವು ಕಲಂಗಳಿಂದ ಏತಕ್ಕೆ ಹೊರತುಪಡಿಸಿದ್ದೀರಿ?

ಶ್ರೀ ಬಿ. ರಾಚಯ್ಯ.- ಅದಕ್ಕೆ ಪ್ರತ್ಯೇಕವಾಗಿ ಡೆಫಿನಿಷನ್ ಕೊಟ್ಟಿದ್ದೇವೆ.

ಶ್ರೀ ಕೆ.ಎಚ್. ರಂಗನಾಥ್.- ಕೊಟ್ಟಿದ್ದೀರಿ, ಜೊತೆಗೆ ಹೊರತುಪಡಿಸಿದ್ದೀರಿ. "Previded that nothing in Chapter II, section 35 of Chapter V, Chapter VII and Chapters IX to XV (both inclusive) except sections 57 and 58 of Chapter X shall be applicable to commerce institutions". ಏತಕ್ಕೆ ಇದನ್ನು

ಈ ಕಾನೂನಿನಿಂದ ಹೊರತುಪಡಿಸಿದ್ದೀರಿ? ಇದಕ್ಕೆ ಏತಕ್ಕೆ ಈ ಕಾನೂನು ಅನ್ವಯವಾಗುವುದಿಲ್ಲ. ಚಾಪ್ಟರ್ 9ರಿಂದ 15ವರೆಗೆ ಇದಕ್ಕೆ ಯಾವುದೂ ಅನ್ವಯವಾಗುವುದಿಲ್ಲವೆಂದು ಹೇಳಿದ್ದೀರಿ. ಇದರ ಉದ್ದೇಶವೇನು? ಇದನ್ನು ತಾವು ಸರಿಪಡಿಸಬೇಕು. ಗ್ರ್ಯಾಂಟ್ ಬಗ್ಗೆ ಚಾಪ್ಟರ್ 9ರಲ್ಲಿ ಹೇಳಿದ್ದೀರಿ. ವಾಣಿಜ್ಯ ಶಾಲೆಗಳಿಗೆ ಗ್ರ್ಯಾಂಟ್ ಕೊಡುವುದಿಲ್ಲವೆ?

ಶ್ರೀ ಬಿ. ರಾಚಯ್ಯ.- ಕೊಡುತ್ತಿಲ್ಲ.

ಶ್ರೀ ಕೆ.ಎಚ್. ರಂಗನಾಥ್.- ಇದಕ್ಕೆ ಚಾಪ್ಟರ್ 3 ಏತಕ್ಕೆ ಅನ್ವಯವಾಗಬಾರದು? ಇದನ್ನು ಏತಕ್ಕೆ ಹೊರತುಪಡಿಸಿದ್ದೀರಿ? ಇದು ಹೇಗೆ ನಮ್ಮ ಜಂಟಿ ಸಲಹಾ ಸಮಿತಿಯವರ ಕಣ್ಣಿನಿಂದ ಹೊರತಾಯಿತು? ಚಾಪ್ಟರ್ 3ರಲ್ಲಿ ಕಡ್ಡಾಯ ಶಿಕ್ಷಣದ ವಿಚಾರ ಇರುವುದರಿಂದ ಇದು ಸಂಬಂಧಪಡುವುದಿಲ್ಲವೆಂಬುದನ್ನು ಒಪ್ಪಿಕೊಳ್ಳಬಹುದು. Chapter 7 is about Management of recognised private educational institutions and local authority institution etc. ಇದರಲ್ಲಿ ಟೀಚಿಂಗ್, ನಾನ್ ಟೀಚಿಂಗ್ ಎಲ್ಲಾ ಬರುತ್ತದೆ. ಇಷ್ಟು ಕಲಂಗಳಿಂದ ಏತಕ್ಕೆ ವಾಣಿಜ್ಯ ಶಾಲೆಗಳನ್ನು ಹೊರತುಪಡಿಸಿದ್ದೀರಿ? ಡೆಫನಿಷನ್‌ನಲ್ಲಿ ವಾಣಿಜ್ಯ ಸಂಸ್ಥೆ ಅಂದರೆ ಏನು ಎಂಬುದನ್ನು ಪ್ರೀ ಪ್ರೈಮರಿ ಶಾಲೆಗಳನ್ನು ಪ್ರಾಥಮಿಕ ಶಾಲೆಗಳನ್ನು ಮತ್ತು ಮಾಧ್ಯಮಿಕ ಶಾಲೆಗಳನ್ನು ಭರ್ತಿ ಮಾಡತಕ್ಕದ್ದು ಅವಶ್ಯಕ. ಆದರೆ ನಿಮ್ಮ ವಹಿವಾಟು ಎಲ್ಲಾ ಇದರ ಹಾವಳಿಯಲ್ಲಿ ಇವತ್ತಿನ ದಿವಸ ಜಾಸ್ತಿಯಾಗಿದೆ. ಸಾರ್ವಜನಿಕ ಶಾಲೆಗಳಲ್ಲಿ ವಿದ್ಯಾಭ್ಯಾಸ ಕ್ರಮ ಸರಿಯಾಗಿ ಇಲ್ಲದೇ ಇರುವುದರಿಂದ, ಗುಣಮಟ್ಟ ಸರಿಯಾಗಿ ಇಲ್ಲದೇ ಇರುವುದರಿಂದ ಮತ್ತು ಉಪಾಧ್ಯಾಯರುಗಳು ಸರಿಯಾಗಿ ಆಸಕ್ತಿ ವಹಿಸದೇ ಇರುವುದರಿಂದ ಎಲ್ಲರಲ್ಲೂ ಕೂಡ ಕಾನ್‌ವೆಂಟ್ ಸ್ಕೂಲ್‌ಗಳಿಗೆ ಕಳುಹಿಸಬೇಕು ಎನ್ನತಕ್ಕ ಅಭಿಪ್ರಾಯ ಮೂಡಿಬಂದಿದೆ. ಇದರಿಂದ ಎಲ್ಲರೂ ಕೂಡ ಪ್ರೈವೇಟ್ ಶಾಲೆಗಳಿಗೆ ಹೋಗುವಂಥ ಅವಕಾಶ ಉಂಟಾಗಿದೆ. ಆ ಮೇಲೆ (ಕೆ) ನಲ್ಲಿ "take from time to time such other steps as they may consider necessary or expedient." ಎಂದು ಹೇಳಿದ್ದಾರೆ. ಮೊದಲು ಪ್ರೈವೇಟ್ ಟ್ಯೂಷನ್‌ಗೆ ಬರುತ್ತೇವೆಂದು ವಿದ್ಯಾರ್ಥಿಗಳು ಕೇಳಿದರೆ ಬೇಡವೆಂದು ಹೇಳುತ್ತಿದ್ದರು. ಆದರೆ ಈಗ ಹೆಚ್ಚಾಗಿ ಪ್ರೈವೇಟ್ ಟ್ಯೂಷನ್‌ಗಳಲ್ಲಿ ಶಾಲೆಯಲ್ಲಿರತಕ್ಕ ಸಂಖ್ಯೆಗಿಂತ ಹೆಚ್ಚಾಗಿ ಮಕ್ಕಳು, ಟ್ಯೂಷನ್‌ಗೆ ಹೋಗತಕ್ಕದ್ದನ್ನು ನಾವು ಕಾಣುತ್ತಿದ್ದೇವೆ. ಇದಕ್ಕೆ ಕಾರಣವೇನೆಂದರೆ ಸರ್ಕಾರಿ ಶಾಲೆಗಳಲ್ಲಿ ಪಿ.ಯು.ಸಿ. ಯಲ್ಲಾಗಲಿ ಎಸ್.ಎಸ್.ಎಲ್.ಸಿ. ಯಲ್ಲಿ ಆಗಲೀ ಪಾಠವನ್ನು ಸರಿಯಾಗಿ ಮಾಡದೇ ಇರುವುದರಿಂದ ಅಥವಾ ಅಧ್ಯಾಪಕರುಗಳು ಇಲ್ಲದೇ ಇದ್ದರೆ ಅವರು ಹೇಗೆ ಪರೀಕ್ಷೆಗಳಲ್ಲಿ ಬರೆಯಬೇಕು? ಅದಕ್ಕೋಸ್ಕರವಾಗಿ ಅವರು ಪ್ರೈವೇಟ್ ಟ್ಯೂಷನ್‌ಗಳಿಗೆ ಹೋಗುತ್ತಾರೆ. ಗ್ರಾಮಾಂತರ ಪ್ರದೇಶಗಳಲ್ಲಿ ಸಹ ಈ ತೊಂದರೆ ಇದೆ. ಅಂಥಾದ್ದರಲ್ಲಿ ತಾವು ಈ ರೀತಿಯಾಗಿ ಹೇಳಿ ಬಿಟ್ಟರೆ.......

"On and after the date of commencement of this Act, no institution recognised or deemed to be recognised under this Act, shall permit any of its employees to give private tuition nor shall such employee impart such tuition to any person" ಈ ರೀತಿಯಾಗಿ ನೀವು ಮಾಡಿದರೆ ಅದನ್ನು ಪ್ರೂವ್ ಮಾಡುವುದು ಬಹಳ ಕಷ್ಟದ ಕೆಲಸವಾಗುತ್ತದೆ. ಆದುದರಿಂದ ಈ ರೀತಿಯಾದ ಕಲಂಗಳನ್ನು, ಇಲ್ಲಿ ನೀವು ಹಾಕಿದರೆ ಅವುಗಳನ್ನು ಜಾರಿಗೆ ಕೊಡುವುದಕ್ಕೆ ಸಾಧ್ಯವಾಗುತ್ತದೆಯೇ ಎಂದರೆ ಇಲ್ಲ. ಸಾಧ್ಯವಾಗದೇ ಇರತಕ್ಕದ್ದನ್ನು ಏತಕ್ಕೆ ತೆಗೆದುಕೊಂಡು ಬಂದು ಅದೂ, ದಪ್ಪ ದಪ್ಪ ಅಕ್ಷರಗಳಲ್ಲಿ ಪ್ರಿಂಟ್ ಮಾಡಿದ್ದೀರಿ? ಆದುದರಿಂದ ಇದು ಸರಿಯಿಲ್ಲವೆಂದು ಹೇಳಬಯಸುತ್ತೇನೆ.

ಇನ್ನು ಕ್ಲಾಸ್ (5)ರಲ್ಲಿ Promotion of education of the weaker section and the handicapped.

ಸ್ವಾಮಿ ಈಗಿರತಕ್ಕಂಥ ವಾತಾವರಣದಲ್ಲಿ ದುರ್ಬಲ ವರ್ಗದವರಿಗೆ, ನಿಮ್ನ ವರ್ಗದವರಿಗೆ ರಕ್ಷಣಾ ಕೊಡತಕ್ಕ ವ್ಯವಸ್ಥೆ ಇದ್ದರೂ ಸಹ ಆ ಪರಿಸ್ಥಿತಿ ಇವತ್ತಿನ ದಿವಸ ಇಲ್ಲ. ಹೀಗಿರುವಾಗ ನೀವು ಖಾಸಗಿ ಶಾಲೆಗಳು ಬರುವುದಕ್ಕೆ ಅವಕಾಶ ಮಾಡಿಕೊಟ್ಟು, ಮಾನ್ಯ ಮಂತ್ರಿಗಳವರಿಗೆ ಗೊತ್ತಿದೆ, ನಮ್ಮ ಹಳೇ ಮೈಸೂರಿನಲ್ಲಿ ಇದು ಇರಲೇ ಇಲ್ಲ. ಖಾಸಗಿ ಶಾಲೆಗಳು ಬೊಂಬಾಯಿ ಕರ್ನಾಟಕದಲ್ಲಿ ಜಾಸ್ತಿ ಇವೆ. ಆದರೂ ಕೂಡ ಅಲ್ಲಿ ಬಹಳ ಚೆನ್ನಾಗಿ ಪಾಠವನ್ನು ಹೇಳಿಕೊಡುತ್ತಿದ್ದಾರೆ. ಧಾರವಾಡದ ಹತ್ತಿರ ಬಂದು ಕೆ.ಇ.ಬಿ. ಸ್ಕೂಲ್ ಎಂದು ನಡೆಸುತ್ತಿದ್ದಾರೆ. ಅದನ್ನು ಬಹಳ ಚೆನ್ನಾಗಿ ನಡೆಸುತ್ತಿದ್ದಾರೆ. ಬಿಲ್ಡಿಂಗ್ ನೋಡಿದರೆ ಸಾಧಾರಣವಾಗಿದೆ. ಆದರೆ ಅಲ್ಲಿಯ ಪಾಠ ಪ್ರವಚನಗಳನ್ನು ನೋಡಿದರೆ, ಅದರ ಗುಣಮಟ್ಟ ಉತ್ತಮವಾಗಿರುವುದರಿಂದ ಪ್ರತಿ ವರ್ಷ ಒಬ್ಬರಲ್ಲ ಒಬ್ಬರು ಆ ಶಾಲೆಯ ವಿದ್ಯಾರ್ಥಿಗಳು ನ್ಯಾಶನಲ್ ಸ್ಕಾಲರ್ ಶಿಪ್ಪನ್ನು ಪಡೆಯುತ್ತಲೇ ಇರುತ್ತಾರೆ. ಅಲ್ಲಿ ಇದ್ದ ಒಬ್ಬ ಉಪಾಧ್ಯಾಯರು ತಾವು ರಿಟೈರ್ಡ್ ಆದ ಮೇಲೆ ತಮಗೆ ಬಂದಂಥ ಹಣವನ್ನೆಲ್ಲಾ ಆ ಶಾಲೆಗೆ ಕೊಟ್ಟರು. ಅಂಥಾ ಪುಣ್ಯಾತ್ಮರು ಎಲ್ಲಿದ್ದಾರೆ? ಇಂಥಾ ಪರಿಸ್ಥಿತಿ ಇರುವಾಗ ನೀವು ಇಲ್ಲಿ ಏನೋ ಬರೆದುಕೊಂಡಿದ್ದೀರಿ, ನಾನು ಮಂತ್ರಿ ಇದ್ದಾಗ ಈ ಕ್ಲಾಸ್ ಬರಬೇಕು, ಅದನ್ನು ಬಿಟ್ಟು ಬೇರೆ ಇನ್ನು ಯಾರು ಇದ್ದಾಗ ಬರಲಿಕ್ಕೆ ಸಾಧ್ಯ ಎನ್ನುವ ಹಾಗೆ ಬರೆದುಕೊಂಡಿದ್ದೀರಿ. ಅದೂ ಥಿಕ್ ಬೋಲ್ಡ್ ಲೆಟರ್ಸ್‌ನಲ್ಲಿ ಬರೆದುಕೊಂಡಿದ್ದೀರಿ.......

ಈ ಮಸೂದೆಯ 7ನೇ ಕ್ಲಾಸ್‌ನಲ್ಲಿ ವಿದ್ಯೆಗೆ ಸಂಬಂಧಪಟ್ಟಂತೆ ಇರತಕ್ಕಂಥಾದ್ದು 3-4-5-6-7 ಸೆಕ್ಷನ್ಸ್ ಮಾತ್ರ. ಬಾಕಿ ಎಲ್ಲಾ ನಿಯಂತ್ರಣಕ್ಕೆ ಸಂಬಂಧಪಟ್ಟಿದ್ದು. ಯಾರ ಯಾರ ಹತ್ತಿರ ಹೋಗಬೇಕು ಎನ್ನುವುದು ಇದೆ. ರೆಕಗ್ನೈಸ್ ಮಾಡುವುದಕ್ಕೆ, ಪುಸ್ತಕ ಆಗತಕ್ಕ ವ್ಯವಸ್ಥೆ ಎಲ್ಲಾ ಇದೆ. ಈ ಎಲ್ಲಾ ವ್ಯವಸ್ಥೆಯನ್ನು ನಿಯಂತ್ರಣ ಮಾಡತಕ್ಕ ಸೆಕ್ಷನ್ಸ್ ಇವು.

ಸರ್ಕಾರಿ ಶಾಲೆಗಳು ಜಾಸ್ತಿಯಾದರೆ ಆ ಶಾಲೆಗಳಲ್ಲಿ ಗುಣಮಟ್ಟ ಉತ್ತಮವಾದರೆ, ಕರ್ನಾಟಕದ ಜನರಿಗೆ ಅನುಕೂಲವಾಗುತ್ತದೆ ಎನ್ನುವುದು ನಾವು ಪ್ರಸ್ತಾಪ ಮಾಡತಕ್ಕಂಥ ಉದ್ದೇಶ. ಇದು ಇಲ್ಲದೇ ಇರುವಾಗ ಏನು ಪ್ರಯೋಜನವಾಗುತ್ತದೆ.

ಮಾನ್ಯ ಖರ್ಗೆಯವರು ಮಂತ್ರಿಗಳಾಗಿದ್ದಾಗ ನಿಮ್ಮ ವರ್ಗದವರು ಶಾಲೆಗಳನ್ನು ಮಾಡಿದರೆ ಮೊದಲನೇ ವರ್ಷದಲ್ಲಿ ಅನುದಾನ ಕೊಡಬೇಕು ಎಂದು ಮಾಡಿದ್ದರು. ಬರೀ ಅವರೇ ಆಗಿರಬೇಕು, ಮೂರನೇ ಎರಡು ಭಾಗ ನಿಮ್ಮ ವರ್ಗದವರು ಇರಬೇಕು, ಬೇರೆಯವರೂ ಕೂಡ ಮೂರನೇ ಒಂದು ಭಾಗ ಆಡಳಿತ ಮಂಡಳಿಯಲ್ಲಿ ಇರಬೇಕು ಎಂದು ಚೆನ್ನಾಗಿ ಮಾಡಿದರು. ಅದು ಮಂತ್ರಿಮಂಡಲಕ್ಕೆ ಬಂದಾಗ ಎಲ್ಲಾ ಅವರೇ ಇರಲಿ ಎಂದು ಮಾಡಿದರು. ನಮ್ಮಂಥ ಹೆಬ್ಬೆಟ್ಟು ಒತ್ತುವ ಜನರೂ ಇರುತ್ತಾರೆ, ಕೆಲವು ಕಡೆ ಏನು ಮಾಡುವುದು. ಹೋದ ವರ್ಷ ಶಾಲೆಗಳನ್ನು ಕೊಡುವಾಗ ಪ್ರೈವೇಟ್ ಇನ್‌ಸ್ಟಿಟ್ಯೂಷನ್‌ಗೆ ಚೆನ್ನಾಗಿ ಅವಕಾಶ ಕೊಟ್ಟಿರಿ. ಸರ್ಕಾರಕ್ಕೆ 5 ವರ್ಷ ಖರ್ಚಿಲ್ಲಾ ಮಿಗುತ್ತದೆ ಎಂಬ ಉದ್ದೇಶದಿಂದ ಕೊಡುತ್ತೀರಿ. ಸರ್ಕಾರಕ್ಕೆ Any Government or any Minister will have to lock into the financial position of the State. ಅದನ್ನು ನಾನು ಒಪ್ಪುತ್ತೇನೆ. ಆದರೆ ಇವತ್ತಿನ ದಿವಸ ಏನಾಗುತ್ತದೆ. ಇವರೂ ಕೂಡ ಆ ಒಂದು ಕೆಲಸದಲ್ಲಿ ಅಥವಾ ಕಾರ್ಯದಲ್ಲಿ ಮುಂದೆ ಬರಲಿ ಎಂದು ಮಾಡಿರತಕ್ಕಂಥಾದ್ದು, ಅದು ಇವತ್ತು ದುರುಪಯೋಗವಾಗುತ್ತಿದೆ. ನನ್ನ ಕ್ಷೇತ್ರದಲ್ಲಿ ವಾಣಿ ವಿಲಾಸಪುರ ಎಂಬ ಊರು ಇದೆ. ಅಲ್ಲಿ ಒಂದೂವರೆ, ಎರಡು ಸಾವಿರಕ್ಕಿಂತಲೂ ಹೆಚ್ಚು ಜನ ಇಲ್ಲ. ಅಲ್ಲಿ ಎರಡು ಹೈಸ್ಕೂಲು ಇದೆ. ಒಂದು ಸರ್ಕಾರಿ ಹೈಸ್ಕೂಲು, ಒಂದು ಪ್ರೈವೇಟ್ ಹೈಸ್ಕೂಲು, ಹೈಕೋರ್ಟಿಗೆ ಹೋಗಿ ಸ್ಟೇ ಆರ್ಡರ್ ತಂದು ಅಲ್ಲಿ ಖಾಸಗಿ ಶಾಲೆ ನಡೆಸುತ್ತಿದ್ದಾರೆ. ನಿಮ್ಮ ಅಧಿಕಾರಿಗಳಿಗೆ ಇಲ್ಲಿಯವರೆಗೆ ರಿಪೋರ್ಟ್ ಕೊಡಲಿಕ್ಕೆ ಸಾಧ್ಯವಾಗಲಿಲ್ಲ. ಸ್ಟೇ ಆರ್ಡರ್ ವಜಾ ಮಾಡುವುದಕ್ಕೆ ಸಾಧ್ಯವಾಗಲಿಲ್ಲವೆ? ಸಾರ್ವಜನಿಕರು ಕೊಡತಕ್ಕ ಹಣವನ್ನು ಈ ಸಂಸ್ಥೆಗಳಿಗೆ ಕೊಡುತ್ತೇವೆ. ಯಾರದೋ ಮುಲಾಜಿಗಲ್ಲ. ಇದು ತಮ್ಮ ಕಾಲದಲ್ಲಿ ಆಗಿಲ್ಲ, ನಾನು ಒಪ್ಪುತ್ತೇನೆ. ಅಲ್ಲಿ ಉಪಾಧ್ಯಾಯರಿಲ್ಲ, ನಾಲ್ಕು ದಿವಸ ಬರುತ್ತಾರೆ, ಹೋಗುತ್ತಾರೆ. ಒಂದು ಒಂದೂವರೆ, ಎರಡು, ಎರಡೂವರೆ ಮೈಲಿಗೆ ಒಂದೊಂದು ಶಾಲೆ ಇರುತ್ತದೆ. ಅಲ್ಲಿರತಕ್ಕ ಅಧಿಕಾರಿಗಳು, ಶಾಲೆ ಮಾಡಬಹುದು, ಆದರೆ ಅದು ಸರಿಯಾಗಿ ನಡೆಯುತ್ತಿದೆಯೇ? ಇವತ್ತಿನ ದಿವಸ 4 ಹೋಬಳಿ ಸೆಂಟರ್‌ನಲ್ಲಿ ಶಾಲೆ ಮಾಡಬಹುದು. ಹುಡುಗರ ಸಂಖ್ಯೆ ಜಾಸ್ತಿಯಾದರೆ ಸಾರ್ವಜನಿಕ ಹಾಸ್ಟೆಲುಗಳನ್ನು ಮಾಡಿ, ಅವರು ಓದಲಿ, ವಿದ್ಯೆ ಬೇಕಾದರೆ ಇರುತ್ತಾರೆ, ಬೇಡವಾದರೆ ಹೋಗುತ್ತಾರೆ. ಒಂದು ಒಂದೂವರೆ ಎರಡು, ಎರಡೂವರೆ ಮೈಲಿಗೆ ಒಂದೊಂದು ಹೈಸ್ಕೂಲು ಇದೆ. ಅಲ್ಲಿ ಬಿಲ್ಡಿಂಗ್ ಇಲ್ಲ, ಜನ ಇರುವುದಕ್ಕೆ ಮನೆ ಇಲ್ಲ : ಯಾವ ಬಿಲ್ಡಿಂಗ್ ತರಹ ಇಲ್ಲ, ಉಪಾಧ್ಯಾಯರು ಇರುವುದಿಲ್ಲ. ಅದೇತಾನೇ ಮದುವೆಯಾದವರನ್ನು ಸರ್ಕಾರಿ ಹೈಸ್ಕೂಲಿಗೆ, ಹಳ್ಳಿಗೆ ವರ್ಗ ಮಾಡಿದರೆ, ಅವನು ಎಲ್ಲಿ ಹೋಗಬೇಕು?

ಶ್ರೀ ಹೆಚ್.ಡಿ. ಚೌಡಯ್ಯ.- ಹೋಗುವ ಕಡೆ ಹೋಗುತ್ತಾನೆ.

ಶ್ರೀ ಕೆ.ಹೆಚ್. ರಂಗನಾಥ್.- ಮಾನ್ಯ ಚೌಡಯ್ಯನವರು ಹೋಗುವ ಕಡೆ ಹೋಗುತ್ತಾನೆ ಎಂದು ಹೇಳುತ್ತಾ ಇದ್ದಾರೆ, ಸ್ಕೂಲಿಗೆ ಹೋಗುವುದಿಲ್ಲ, ಸ್ವಾಮಿ, ಸೆಕೆಂಡರಿ ಎಜುಕೇಷನ್‌ಗೆ ಡೆಫಿನಿಷನ್ -- ಸಬ್‌ಕ್ಲಾಸ್ 31ರಲ್ಲಿ

"Secondary education" means education in and upto such class or standard as may be prescribed".

--- ಇದೆ. ಏಕೆ ಸ್ವಾಮಿ; ಈ ಸ್ಟಾಂಡರ್ಡ್‌ನಿಂದ ಈ ಸ್ಟಾಂಡರ್ಡ್‌ವರೆಗೆ ಎಂದು ಬರೆಯಲಿಲ್ಲ? ---ಕ್ಯೋಸ್ಕರ ಈ ರೀತಿ ಮಾಡಿದಿರಿ. ಇದರ ಬಗ್ಗೆ ದೂರಾಲೋಚನೆ ಮಾಡಬೇಕು ಎನ್ನುವುದು ನನ್ನ ಅಭಿಪ್ರಾಯ. ಇನ್ನು ಕ್ಲಾಸ್ 7 ಬಹಳ ಮುಖ್ಯವಾದಂಥ ಕ್ಲಾಸ್. ಅದರಲ್ಲಿ

"the curricula, syllabi and text book for any course of instruction".

--ಇದೆ, ಏಕೆ ಸ್ವಾಮಿ ಇದು, ಕನ್ನಡ ಮೀಡಿಯಂ ಎಂದು ಹೇಳುವುದಕ್ಕೆ ಬರುವುದಿಲ್ಲವೇ, ಇಂಗ್ಲೀಷ್ ಬರೆಯಬೇಕು ಅಂದರೆ ಅದಕ್ಕೆ ವ್ಯವಸ್ಥೆ ಮಾಡಲಿ, ಮೀಡಿಯಂ ಆಫ್ ಇನ್‌ಸ್ಟ್ರಕ್ಷನ್ ಕನ್ನಡ ಎಂದು --- ಬೈ ಆರ್ಡರ್ ಸ್ಪೆಸಿಫೈ ಮಾಡಿ, ಎಲ್ಲೆಲ್ಲಿ, ಯಾವ ಯಾವ ಶಾಲೆಗಳು ಇಂಗ್ಲೀಷ್ ಮೀಡಿಯಂ ಹೇಳಿ. ಬಾಕಿ ಎಲ್ಲಾ ಕನ್ನಡ ಶಾಲೆಗಳು ಎಂದು ಹೇಳಿ. ಹಳೇ ಮೈಸೂರಿನಲ್ಲಿ 35 ಹೈಸ್ಕೂಲು ಏನು ಇತ್ತು, ಅದರಲ್ಲಿ ಕನ್ನಡ ಮೀಡಿಯಂ ಇತ್ತು, ಒಂದೋ ಎರಡೋ ಇಂಗ್ಲಿಷ್ ಸೆಕ್ಷನ್ ಇರು-- ಎಲ್ಲಿ ಕನ್ನಡ ಮೀಡಿಯಂ ಇತ್ತು. ಕನ್ನಡದವರೇ ಬ್ರಿಲಿಯಂಟಾದವರು ಇಂಗ್ಲೀಷ್ ಮೀಡಿಯಂಗೆ ಸೇರುತ್ತಾ ಇದ್ದರು. ಕನ್ನಡದಲ್ಲೂ ಬ್ರಿಲಿಯಂಟಾದವರೂ ಇದ್ದಾರೆ. ಏತಕ್ಕೆ ನೀವು ಸ್ಪಷ್ಟವಾಗಿ --ಬಾರದು. ಆದುದರಿಂದ ಮೀಡಿಯಂ ಆಫ್ ಇನ್‌ಸ್ಟ್ರಕ್ಷನ್ ಸ್ಪೆಸಿಫೈ ಮಾಡುತ್ತೀರಾ. Scheme of examination and evaluation. ಇದು ಒಂದು ಹೊಸ ಅಬ್ಜೆಕ್ಟೀವ್ ಟೈಪ್ ಆಫ್ ಎಕ್ಸಾಮಿನೇಷನ್, ಸುಮ್ಮನೆ ಕಣ್ಮುಚ್ಚಿ ರೈಟ್ ಹಾಕಿಕೊಂಡು ಬಂದುಬಿಡುವುದು, ಓದಿ ಮಾಡಬೇಕು ಎಂದು ಇಲ್ಲ. 20 ನಂಬರ್ ಇರುತ್ತದೆ, ಎಸ್.ಎಸ್.ಎಲ್.ಸಿ, ಎಕ್ಸಾಮಿನೇಷನ್ ನ್ಯೂ ಟೈಪ್ ಕೊಶ್ಚನ್ಸ್‌ಗೆ ಅದಕ್ಕೆ ಬರೀ ರೈಟ್‌ಮಾರ್ಕ್ ಮಾಡುವುದು. ಕಣ್ಮುಚ್ಚಿಕೊಂಡು ರೈಟ್ ಹಾಕುತ್ತಾ ಹೋಗುವುದು, ಮೂರೆಲೆ ಇಸ್ಪೀಟ್ ಆಟದ ಹಾಗೆ, ನನಗೆ ಆಟ ಗೊತ್ತು, ಆಡುವುದಿಲ್ಲ ಅಷ್ಟೆ.

ಶ್ರೀ ಹೆಚ್.ಎ. ನಾರಾಯಣ ಗೌಡ.- ಅವರು ಕೆಟ್ಟ ಪಾಠ ಹೇಳುತ್ತಿದ್ದಾರೆ, ದಾರಿ ತಪ್ಪುತ್ತಿದ್ದಾರೆ.

ಶ್ರೀ ಕೆ.ಎಚ್. ರಂಗನಾಥ್.- ದಾರಿ ತಪ್ಪುವ ಹಾಗಿದ್ದರೆ ಎಂದೋ ತಪ್ಪುತ್ತಿದ್ದೆ. ಮೀಡಿಯಂ ಆಫ್ ಇನ್‌ಸ್ಟ್ರಕ್ಷನ್ ಯಾವುದು ಎಂದು ಹೇಳಿ, ಅದನ್ನು ಹಾಕದೇ ಇರುವುದಕ್ಕೆ

ಕಾರಣವೇನು? ಇಲ್ಲದೇ ಹೋದರೆ ಸರ್ಕಾರದ ನೀತಿಗೂ, ಮಾತಿಗೂ ಅಂತರ ಬರುತ್ತದೆ, ನಿಮ್ಮನ್ನು ಸಾರ್ವಜನಿಕರು ನಂಬುವುದಿಲ್ಲ. ಮೀಡಿಯಂ ಆಫ್ ಇನ್‌ಸ್ಟ್ರಕ್ಷನ್ ಕರ್ನಾಟಕದಲ್ಲಿ ಕನ್ನಡ ಎಂದು ಹೇಳಿ. ಇದನ್ನು ಸ್ಪಷ್ಟವಾಗಿ ಹೇಳುವುದು ಒಳ್ಳೆಯದು, ಇದರಲ್ಲಿ ಹೀಗೆ ಹೇಳಿದ್ದೀರಿ.

> at which tuition and other fees, building fund or other amount, by whatever name called, may be charged from students or on behalf of students."

ಇದು ಏಕೆ ಸ್ವಾಮಿ? ಇದರ ಉದ್ದೇಶ ಏನು? ಮೊನ್ನೆ ಒಂದು ಪ್ರಶ್ನೆ ಬಂದಾಗ ತಾವೇ ಕಾಮರ್ಸ್ ಟೈಪ್‌ರೈಟಿಂಗ್ ಇನ್‌ಸ್ಟಿಟ್ಯೂಷನ್ಸ್‌ದು ಸುಮಾರು 40 ಪರ್ಸೆಂಟ್ ಫೀಸ್ ಜಾಸ್ತಿಮಾಡತಕ್ಕ ಪರಿಸ್ಥಿತಿ ಬಂತು. ತಾವು ತಮ್ಮ ಉತ್ತರದಲ್ಲಿ ಹೇಳಿದ್ದೀರಿ.

> "The rates at which the tuition and other fees, building fund or other amount by whatever name called may be charged from the students or on behalf of the students by order specified."

ಏಕೆ? ಇಲ್ಲದಿದ್ದರೆ ಇದನ್ನು ಎಗ್ಸಿಬಿಟ್ ಮಾಡಬೇಡಿ. ಪ್ರತಿವರ್ಷ ಇಲ್ಲದೆ ಇದ್ದರೂ ಏಕಾಏಕಿ ಫೀಯನ್ನು ಹೆಚ್ಚು ಮಾಡುವುದಕ್ಕೆ ಅವಕಾಶ ಬರತಕ್ಕಂತಹದ್ದು ಇದರಿಂದ ಆಗುತ್ತದೆ. ಅದರ ಬದಲು ನಿಗದಿಪಡಿಸಿಬಿಡಿ. ಇಷ್ಟು ವರ್ಷದವರೆಗೆ ಇಂತಿಷ್ಟು ಫೀ ಅಂತ. ನಾಳೆ ಆ ಬಗ್ಗೆ ಸಾರ್ವಜನಿಕರ ಒತ್ತಾಯಬಂದಾಗ ಮಾಡಬಹುದು. ಇಲ್ಲದಿದ್ದರೆ ಅದೇ ನಡೆದುಕೊಂಡು ಹೋಗುತ್ತದೆ. ಇದನ್ನು ನೋಡಿದರೆ ತಾವು ಯಾರದೋ ಒತ್ತಾಯಕ್ಕೆ ಒಳಗಾಗಿ ಹೀಗೆ ಮಾಡಿದ್ದಿರೇನೋ ಎಂಬ ಅನುಮಾನ ಬರುವಂತಹ ಪರಿಸ್ಥಿತಿ ಇದೆ.

ಇನ್ನು ಮಾರಲ್ ಹಾಗೂ ಎಥಿಕಲ್ ಎಜುಕೇಷನ್ ಅಂತ ಹೇಳಿದ್ದೀರಿ. ಅದು ಯಾವ ತರಹ ಕೊಡುತ್ತೀರಿ? ನಿಮ್ಮ ಮಾನ್ಯ ಸದಸ್ಯರಾದ ಶ್ರೀಮಾನ್ ಕೃಷ್ಣನ್‌ರವರು ಹೊರಟುಹೋಗಿಬಿಟ್ಟರೇನೋ.

ಶ್ರೀ ಬಿ. ರಾಚಯ್ಯ.- ನೀತಿ ಬೋಧನೆ.

ಶ್ರೀ ಕೆ.ಎಚ್. ರಂಗನಾಥ್.- ನಾವು ಸಣ್ಣವರಿದ್ದಾಗ ನೀತಿ ಬಗ್ಗೆ ಒಂದು ಪುಸ್ತಕ ಇತ್ತು. ಅದರಲ್ಲಿ ಕೋಪದಲ್ಲಿ ಕಚ್ಚಿದ ಮೂಗು ಶಾಂತಿಯಾದ ಮೇಲೆ ಮತ್ತೆ ಬಂದೀತೆ; ಎನ್ನುವ, ಈ ರೀತಿಯ ಕತೆಗಳು ಬರುತ್ತಿದ್ದವು. ಇಂತಹ ಪುಸ್ತಕಗಳು ಇರುವ ಬದಲಾಗಿ ಇವರು ಮಾರಲ್ ಹಾಗೂ ಎಥಿಕಲ್ ಎಜುಕೇಷನ್ ಅಂತ ಅಂದಿದ್ದಾರೆ. ಇದು ಹೇಗೆ? ಯಾವ ಮಾರಲ್? ನಿಮಗೆ ಮಾರಲ್ ಆಗಿರುವಂತಹದು ನನಗೆ ಮಾರಲ್ ಆಗದೆ

ಇರಬಹುದು. ಡ್ರಿಂಕ್ಸ್ ಬಗ್ಗೆ ಹೇಳುತ್ತಾರೆ. ಊಟವಾಗುವುದಕ್ಕೆ ಮುಂಚೆ ಸ್ಮಾಲ್ ಡೋಸೇಜ್ ತೆಗೆದುಕೊಂಡರೆ ಒಳ್ಳೆಯದು ಅಂತ ಡಾಕ್ಟರ್ ಕೂಡ ಹೇಳುತ್ತಾರೆ. ಆದರೆ ನಾವು ಅಂತಹವರನ್ನು ಕುಡುಕ ಅಂತ, ಅವನು ಕುಡಿದು ವಾಲಾಡದಿದ್ದರೂ ಕುಡುಕ ಅಂತ ಹೇಳಿಬಿಡುತ್ತೇವೆ. ಮಾರಲ್ ಅನ್ನುವುದನ್ನು ಹೇಗೆ ನಿರ್ಮಾಣ ಮಾಡುತ್ತೀರಿ? ಮೈನಾರಿಟಿ ಕ್ರೈಟೇರಿಯಾ ನಿಗದಿ ಮಾಡುವುದಕ್ಕೆ ಕಷ್ಟವಾಗಿರುವಾಗ, ಯಾವ ರೀತಿ ಮಾರಲ್ ಎಜುಕೇಷನ್ ಕೊಡುತ್ತೀರಿ? ಮಾರಲ್ ಎಥಿಕಲ್ ಎಜುಕೇಷನ್ ಹೇಗೆ? ಯಾವ ತರಹ ನಿರ್ಣಯ ಮಾಡತಕ್ಕಂತಹದ್ದು? ಅದರಲ್ಲೂ ಇದು ಎರಡು-ಮೂರು ಸಾರಿ ಬಂದುಬಿಟ್ಟಿದೆ. ಜಾಯಿಂಟ್ ಸೆಲೆಕ್ಟ್ ಸಮಿತಿಯಲ್ಲಿ ಯಾರದೋ ಒತ್ತಾಯದ ಮೇಲೆ ಇದನ್ನು ಮಾಡಿದ್ದೀರೋ ಹೇಗೆ? ಯಾವ ಪುಸ್ತಕ ಇಡಿ ಅಂತ ಹೇಳುವುದಕ್ಕಾಗುವುದಿಲ್ಲವೇ?

"The curricula under sub-section I may also include schemes in respect of moral and ethical education."

ಯಾವ ಸ್ಕೀಂಗಳು ಬರುತ್ತವೆ? ಯಾವ ತರಹ ಬರುತ್ತವೆ? ಗರ್ಭದಲ್ಲಿ ಹೇಗೆ? ಅದರ ರೂಪ ಹೇಗೆ?

ಶ್ರೀ ಬಿ. ರಾಚಯ್ಯ.- ಅದೆಲ್ಲಾ ಆಮೇಲೆ ಬರುತ್ತದೆ.

ಶ್ರೀ ಕೆ.ಎಚ್. ರಂಗನಾಥ್- ಒಪ್ಪಿಗೆಯಾದ ಮೇಲೆ ಬರುತ್ತದೆ ಅಂತ ಹೇಳುತ್ತಿರೋ, ಇದು ಸರಿಯಲ್ಲ. ಡಾ|| ರಾಧಕೃಷ್ಣನ್‌ರವರು ಅವರ ವರದಿಯ ಪ್ರಿಯಾಂಬಲ್‌ನಲ್ಲಿ ಹೆಚ್ಚು ವ್ಯಾಖ್ಯಾನ ಮಾಡಿ ಒಂದು ಮಾತನ್ನು ಹೇಳಿದ್ದಾರೆ. 1948-49ನೇ ಇಸವಿಯಲ್ಲಿ ನಮ್ಮ ರಾಜ್ಯಾಂಗ ಒಪ್ಪಿಗೆಯಾಗುವುದಕ್ಕಿಂತ ಮುಂಚಿತವಾಗಿ ಬಂದ ಅವರ ಒಂದು ವರದಿ, ಯೂನಿವರ್ಸಿಟಿ ಎಜುಕೇಷನ್ ಸಂಬಂಧಪಟ್ಟಿದ್ದರೂ ಪ್ರಿಯಾಂಬಲ್‌ಗೆ ಅಷ್ಟೇ ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ. In order of the society which we are going to form ಎಂದು ಹೇಳಿದ್ದಾರೆ. ಪೂರ್ವಭಾವಿಯಾಗಿ ಸಿದ್ಧತೆಯನ್ನು ಮಾಡುವುದಕ್ಕೆ ವಿದ್ಯಾಭ್ಯಾಸದ ಕ್ರಮ ತರಬೇಕು ಎನ್ನುವ ಮಾತನ್ನು ಅವರೇ ಪ್ರಸ್ತಾಪ ಮಾಡಿದ್ದಾರೆ. ಇನ್ನೂ ಅಗ್ರಿಕಲ್ಚರಲ್ ಎಜುಕೇಷನ್‌ಗೆ ಪ್ರಾಮುಖ್ಯತೆಯನ್ನು ಕೊಡುವುದಕ್ಕೆ ಬದಲಾಗಿ ಇವರು ಮಾರಲ್-ಎಥಿಕಲ್ ಎಜುಕೇಷನ್‌ಗೆ ಬಂದು ಬಿಟ್ಟಿದ್ದಾರಲ್ಲ:

"Aims of the social order-We must have a conception of the social order for which we are educating our youths. we, know what Hitler did for six years to German youths. Russians are clear in their mind about the kind of the society for which they are educating and the qualities required in their citizens. They are striving to re-make man in a new

image." ಈ ಸಲಹೆ ಹೇಗಿದೆ? ಇದನ್ನು ಬಿಟ್ಟು ಇವರು ಮಾರಲ್ ಎಥಿಕಲ್ ಎಜುಕೇಷನ್‌ಗೆ ಹೋಗುತ್ತಿದ್ದಾರೆ. ಇವರ ಮಾರಲ್ ಯಾವುದು? ಭಾಷೆಯಲ್ಲಿ ಭಿನ್ನಭಿನ್ನವಾದಂತಹ, ವಿವಾದ ಇರತಕ್ಕಂತಹ ಜನ ನಾವು. ಅನೇಕ ಭಾಷೆಗಳು, ಅನೇಕ ಧರ್ಮ, ಅನೇಕ ತರಹದ ಜನ, ಮಿಕ್ಸ್ ಎಕಾನಮಿಗೆ ಒಪ್ಪಿಕೊಂಡಿರುವುದರಿಂದ, ಅಂತಹ ಒಂದು ವಿಚಾರ ಪರಿಸ್ಥಿತಿಯಲ್ಲಿ ಇರುವಾಗ ಈ ಮಾತನ್ನು ನಾವು ಬಳಸಿದರೆ, ನಾಳೆ ಅದು ಮಾರಕವಾಗಬಹುದು ಎನ್ನುವ ಹಿನ್ನೆಲೆಯಲ್ಲಿ ಈ ಮಾತನ್ನು ನಾನು ಹೇಳುತ್ತಿದ್ದೇನೆ.

"Russians are clear in their main about the kind of the society for which they are educating and the qualities required in their citizens. They are striving to re-make man in a new image. Our educational system must find this guiding principle in the aims of the social order for which it prepares in a nature of civilisation it hopes to build. Unless we know either we are tending we cannot decide what we should do and how we should do it. Societies like men need a clear purpose to keep them stable in a word of bewildering change."

ಇಡೀ ಪ್ರಪಂಚ ಆ ಒಂದು ಸಮಯದಲ್ಲಿ ತೊಂದರೆಗೆ ಒಳಗಾಗತಕ್ಕಂತಹ ಪರಿಸ್ಥಿತಿಯಲ್ಲಿತ್ತು. ಅಂತಹ ಒಂದು ಪರಿಸ್ಥಿತಿಯಲ್ಲಿದ್ದೇವೆ. ಹೀಗಿರುವಾಗ ನ್ಯಾಷನಲ್ ಇಂಟೆಗ್ರಿಟಿಗೆ ಬೇಕಾದ, ದೇಶದ ಬಗ್ಗೆ ವಿಚಾರ ಮಾಡತಕ್ಕಂತಹ ಜನರನ್ನು ನಾವು ತಯಾರು ಮಾಡಬೇಕಾಗುತ್ತದೆ; ಎಂಬ ಮಾತನ್ನು ಅಂದೇ ಹೇಳಿದ್ದಾರೆ.

"Unless we know either we are tending we cannot decide what we should do and how we should do it. Societies like men need clear purpose to keep them stable in a world of bewildering change. The outlines of the Social civilization we should govern all our institutions education as well as economic and political are indicated in the preamble to the draft constitution."

ಆ ರೀತಿ ಹೇಳುತ್ತಾ ಬಂದು ಅವರ ವರದಿಯನ್ನು ಅದರ ಮೇಲೆ ಪಾಸ್ ಮಾಡಿದ್ದಾರೆ. ಡೆಮಾಕ್ರಸಿ ಎನ್ನುವುದರ ಮೇಲೂ ಹೇಳಿದ್ದಾರೆ. ಅಂತಹ ಒಂದು ಸಮಾಜದ ರಚನೆಯಾಗುವಂತಹ ದೃಷ್ಟಿಯಲ್ಲಿ ಮಾಡಬೇಕು ಎನ್ನುವ ಮಾತನ್ನೂ ಪ್ರಸ್ತಾಪ ಮಾಡಿದ್ದಾರೆ. ಹೀಗಿರುವಾಗ ತಾವು ಏಕೆ ಇದನ್ನು ಸೇರಿಸಿದ್ದೀರಿ ಎನ್ನುವುದನ್ನು ಅವರು ಹೇಳಬೇಕು. ಸಬ್ ಕ್ಲಾಸ್ 'ಎ' ನಲ್ಲಿ ಒಂದು ಮಾತನ್ನು ಅಂದಿದ್ದೀರಿ. ಅದರ ಬಗ್ಗೆ ಮತ್ತೊಮ್ಮೆ ತಾವು

ಗಮನಹರಿಸುವುದು ಒಳ್ಳೆಯದು. ಸಬ್ ಕ್ಲಾಸ್ (ಜಿ) ಆದಮೇಲೆ ಒಂದು ಮಾತನ್ನು ತಾವು ಹೇಳಿದ್ದೀರಿ.

ನಮ್ಮ ಮಕ್ಕಳಿಗೆ ಕಲಿಸತಕ್ಕಂತಹದ್ದು ಹೇಗೆ ಇರುತ್ತದೆ? ಹೇಗೆ ಹೇಳಿಕೊಡುತ್ತಿದ್ದಾರೆಂಬುದು ತಮಗೆಲ್ಲಾ ಗೊತ್ತಿರಬಹುದು. ಅವರಿಗೆ ಕೊಡುವಂತಹ ಪಠ್ಯ ಪುಸ್ತಕಗಳನ್ನು ತಾವು ಓದಿದರೆ ತಿಳಿಯುತ್ತದೆ. ನಾವೆಲ್ಲ ಸಣ್ಣವರಾಗಿದ್ದಾಗ ಎಲ್.ಎಸ್. ಪರೀಕ್ಷೆಯಲ್ಲಿ ಹಿಂದೂಸ್ಥಾನ ಚರಿತ್ರೆಯನ್ನು ಎಷ್ಟರಮಟ್ಟಿಗೆ ಕಲಿಸುತ್ತಾ ಇದ್ದರು? ಎಷ್ಟರಮಟ್ಟಿಗೆ ಎಸ್.ಎಸ್.ಎಲ್.ಸಿ. ಬರುವವರೆಗೆ ವಿಷಯಗಳನ್ನು ತಿಳಿದುಕೊಂಡಿದ್ದೆವು. ಆದರೆ ಈಗಿನ ಮಕ್ಕಳಿಗೆ ಕೊಡುವಂತಹ ಸೋಷಿಯಲ್ ಸೈನ್ಸ್ ಪುಸ್ತಕವನ್ನು ತೆಗೆದು ನೋಡಿದರೆ ಅದರಲ್ಲಿ ಆ ಬಗ್ಗೆ ಎಳ್ಳಷ್ಟೂ ಇಲ್ಲ. ಕನ್ನಡದ ಬಗ್ಗೆ ಪ್ರಾಣವನ್ನೇ ಕೊಡುತ್ತೇವೆಂದು ಹೇಳುವವರೂ ಇದ್ದಾರೆ. ಆದರೆ ಆ ರೀತಿ ಪ್ರಾಣವನ್ನು ಯಾರೂ ಕೊಡಲಿಲ್ಲ. ಪ್ರಾಣ ಬಿಡುವವನು ಯಾರು ಎಂದರೆ ಆ ರೀತಿ ಹೇಳಿದವರ ಹಿಂದೆ ಬರತಕ್ಕಂತಹವನು. ಆದರೆ ಆ ರೀತಿ ಹೇಳಿದವನು ಮಾತ್ರ ಹೇಗೋ ತಪ್ಪಿಸಿಕೊಂಡು ಬಿಟ್ಟಿರುತ್ತಾನೆ.

ಶ್ರೀ ವಿಶ್ವನಾಥರೆಡ್ಡಿ.- ತಮ್ಮ ಪ್ರಾಣವನ್ನು ಕೊಡುತ್ತೇವೆಂದು ಅವರು ಹೇಳುತ್ತಾರೆಯೇ?

ಶ್ರೀ ಕೆ.ಎಚ್. ರಂಗನಾಥ್.- ಅದೂ ಗೊತ್ತಿದೆ ನಮ್ಮ ವಿಶ್ವನಾಥರೆಡ್ಡಿಯವರಿಗೆ. ತಾವು ಏನು ಹೇಳಿದ್ದೀರಿ ಅಂದರೆ "to cherish and follow the noble ideals which inspired our national struggle for freedom." ಈ ರೀತಿ ಎಲ್ಲಿದೆ ಸ್ವಾಮಿ? 7ನೇ ತರಗತಿ ಅಲ್ಲ, 10ನೇ ತರಗತಿಯವರೆಗೆ ಇರತಕ್ಕ ಪುಸ್ತಕಗಳು ಎಲ್ಲಿಯಾದರೂ ಇದರ ಬಗ್ಗೆ ಅರ್ಥಪೂರ್ಣವಾದ ವಿಚಾರ ಮಾಡತಕ್ಕ ಯಾವುದಾದರೂ ಪುಸ್ತಕ ಇದೆಯೇ? ಹಿಂದಿನ ಕಾಲದಲ್ಲಿ ಅಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ಮಹಾತ್ಮ ಗಾಂಧಿಯವರು ಬರೆದಂತಹ ಲೇಖನಗಳನ್ನು ಕೂಡ ಪಾಠದಲ್ಲಿ ಇಡುತ್ತಿದ್ದರು. ನೆಹರೂ-ಗಾಂಧಿಯವರ ಬರಹಗಳು ಪಾಠದಲ್ಲಿ ಇರುತ್ತಿದ್ದವು. ಇಂಗ್ಲೀಷ್ ಪಾಠದಲ್ಲಿ ಅವರ ಬರಹಗಳು ಬರುತ್ತಿದ್ದವು. ಇವತ್ತಿನ ದಿವಸ ಅದು ಯಾವುದೂ ಇಲ್ಲ. ಮೊನ್ನೆ ಗಾಂಧಿ ಚಲನ ಚಿತ್ರ ನೋಡಿದ ಮೇಲೆ ಮಹಾತ್ಮ ಗಾಂಧಿ ಎಂದರೆ ಯಾರು ಎಂಬುದು ಗೊತ್ತಾಯಿತು ಎಂದು ಬಹಳ ಜನ ಹೇಳುತ್ತಿದ್ದರು. ಇವತ್ತಿನ ಪರಿಸ್ಥಿತಿ ಈ ರೀತಿ ಇದೆ. ಅದನ್ನು ನೋಡಿದ ಮೇಲೆ ಜನರಿಗೆ ಇಂಥವರು ಇದ್ದರು, ಅವರ ಕಾಲದಲ್ಲಿ ಹೀಗೆ ಆಯಿತು ಎಂಬುದು ಗೊತ್ತಾಗುವಂಥ ಪರಿಸ್ಥಿತಿ ಮೂಡಿದೆ.

ಶ್ರೀ ಬಿ. ರಾಚಯ್ಯ.- 24ನೇ ಪುಟವನ್ನು ಪೂರ್ಣ ಓದಿ.

ಶ್ರೀ ಕೆ.ಎಚ್. ರಂಗನಾಥ್.- ಇನ್ನು ಹೇಗೆ ಓದುವುದು? ಇದರ ಬಗ್ಗೆ ನಾನು ಲಘುವಾಗಿ ಮಾತನಾಡುತ್ತಿಲ್ಲ. ತಮಗೆ ಗೊತ್ತಿರುವ ಹಾಗೆ ಎಸ್.ಎಸ್.ಎಲ್.ಸಿ.ಯವರೆಗೆ ಯಾವ ಪುಸ್ತಕದಲ್ಲಾದರೂ ಅಂಥ ಒಂದು ಪಾಠ ಇದೆಯೇ? ಹೀಗೆ ಎಷ್ಟು ದಿನಗಳಿಂದ

ನಡೆದುಕೊಂಡು ಬಂದಿದೆ? ಸುಮಾರು 15-20 ವರ್ಷಗಳಿಂದ ಈ ರೀತಿ ನಡೆದುಕೊಂಡು ಬಂದು ಹೊಸ ಪೀಳಿಗೆಗೆ ಏನೂ ಅರ್ಥವಾಗದ ಪರಿಸ್ಥಿತಿಯಲ್ಲಿದೆ. ತಮಗೆ ತಮ್ಮ ಅಭಿಪ್ರಾಯ ವ್ಯಕ್ತಮಾಡುವುದಕ್ಕೆ ಹಕ್ಕು ಇದೆ. ತಾವು ಹೇಳಿದ್ದೀರಿ.

**ಶ್ರೀ ಬಿ. ರಾಚಯ್ಯ.**- ಅದಕ್ಕೋಸ್ಕರ ಇದನ್ನೆಲ್ಲ ಸೇರಿಸಿದ್ದೇವೆ; ಮತ್ತು ಮುಂದೆ ಮಾಡತಕ್ಕದ್ದರಲ್ಲಿ ಮಾಡಿ ಎಂದು ಹೇಳಿದ್ದೇವೆ.

**ಶ್ರೀ ಎ. ಲಕ್ಷ್ಮೀಸಾಗರ್.**- ಇದರಲ್ಲಿ ನಮ್ಮ ಗುರಿ ಏನು? ನಿಜವಾದ ವಿದ್ಯಾಭ್ಯಾಸ ಆಗಬೇಕಾದರೆ ಯಾವ್ಯಾವ ಗುರಿಗಳು ವಿದ್ಯಾಭ್ಯಾಸದ ಕ್ರಮದಲ್ಲಿ ಇರಬೇಕೆಂಬುದನ್ನು ಸ್ವಲ್ಪ ವಿವರವಾಗಿ ಕ್ಲಾಸ್ 7ರಲ್ಲಿ ಹಾಕುವುದಕ್ಕೆ ಪ್ರಯತ್ನ ಮಾಡಿದ್ದೇವೆ. ವಿದ್ಯಾಭ್ಯಾಸದ ಮುಖ್ಯ ಲಕ್ಷಣಗಳು ಏನು ಇರಬೇಕು, ಅದರಲ್ಲಿ ಅಂತರ್ಗತವಾದ ವಿಚಾರಗಳು ಏನು ಇರಬೇಕು, ನಾವೆಲ್ಲ ಉಪಯುಕ್ತವಾದ ನಾಗರೀಕರು ಆಗಬೇಕಾದರೆ ಯಾವ ಯಾವ ವಿದ್ಯೆಯನ್ನು ಕಲಿಯಬೇಕಾದ ಅವಶ್ಯಕತೆ ಇದೆ ಎಂಬುದನ್ನು ಸೂತ್ರ ರೂಪವಾಗಿ ಕ್ಲಾಸ್-7ರಲ್ಲಿ ಹಾಕಿದ್ದೇವೆ. ಇದರ ಬಗ್ಗೆ ಜಂಟಿ ಸಲಹಾ ಸಮಿತಿಯಲ್ಲಿ ಸಾಕಷ್ಟು ವಿಚಾರ ವಿನಿಮಯವಾಗಿದೆ ಮತ್ತು ಇದರ ಬಗ್ಗೆ ಎವಿಡೆನ್ಸ್ ಕೊಡಲು ಅನೇಕ ಪಂಡಿತರು ನಮ್ಮ ಮುಂದೆ ಬಂದಿದ್ದರು. ಅವರ ಮಾತುಗಳನ್ನು ನಾವು ಕೇಳಿದ್ದೇವೆ. ಅದನ್ನು ಹೇಳಿದರೆ ಆಶ್ಚರ್ಯವಾಗುತ್ತದೆ. ಆದರೆ ಈಗ ಅದು ಬೇಡ. ನಾವು ಕಾನೂನಿನಲ್ಲಿ ಇದನ್ನು ತೋರಿಸಿದ್ದೇವೆ. ಇದರ ಬಗ್ಗೆ ತಾವು ಯೋಚನೆ ಮಾಡಿ ಸಲಹೆ ಕೊಡಿ. ಪಠ್ಯಪುಸ್ತಕಗಳನ್ನು ತಯಾರುಮಾಡಿ, ಏನು ಓದಬೇಕು, ಎಷ್ಟು ಓದಬೇಕು ಹಾಗೂ ವಿಷಯ ಎಷ್ಟಿರಬೇಕೆಂಬುದನ್ನು ರಾಜಕೀಯದಲ್ಲಿರತಕ್ಕ ನನ್ನಂಥವನು ಹೇಳುವುದು ಸರಿಯಲ್ಲ. ನಾನು ಉಪಾಧ್ಯಾಯನಾಗಿದ್ದರೂ ನಾನು ಆ ಕ್ಷೇತ್ರದಲ್ಲಿ ತಜ್ಞನಲ್ಲ. ಇದಕ್ಕೆ ಒಂದು ತಜ್ಞರ ಸಮಿತಿಯನ್ನು ನೇಮಿಸುವುದಕ್ಕೆ ಅವಕಾಶ ಇದೆ. ಅವರು ಇದರ ಬಗ್ಗೆ ತೀರ್ಮಾನಮಾಡಿ ಪಠ್ಯಪುಸ್ತಕಗಳ ಒಂದು ಅಗತ್ಯತೆ ಏನು, ವಿಷಯದ ಮೂಲ ಏನು, ಏನು ಇರಬೇಕು, ಏನು ಇರಬಾರದು ಎಂಬುದನ್ನು ಹೇಳಬೇಕು. ಯಾವ ತರಗತಿಯಲ್ಲಿ ಎಷ್ಟು ಓದಬೇಕು, ಏನು ಓದಬೇಕೆಂಬುದನ್ನು ತೀರ್ಮಾನ ಮಾಡತಕ್ಕದ್ದು ಪಂಡಿತ ಮಹಾಶಯರಿಗೆ ಬಿಟ್ಟ ವಿಚಾರ. ಕಾನೂನಿನಲ್ಲಿ ಅದರ ಬಗ್ಗೆ ಅದು ಯಾವ ಒಂದು ಚೌಕಟ್ಟಿನೊಳಗೆ ಇರಬೇಕೆಂಬುದನ್ನು ಸೂತ್ರ ರೂಪದಲ್ಲಿ ಮಾತ್ರ ಸೂಚಿಸಿದ್ದೇವೆಂದು ಹೇಳಬಯಸುತ್ತೇನೆ.

**ಶ್ರೀ ಕೆ.ಎಚ್. ರಂಗನಾಥ್.**- 25 ವರ್ಷಗಳ ಹಿಂದೆ ಪಠ್ಯಪುಸ್ತಕಗಳನ್ನು ಬರೆದವರು ಪಂಡಿತರೇ, ಸಿಲಬಸ್ ಮಾಡಿದವರು ಪಂಡಿತರೆ. ಮಾರಲ್ ಮತ್ತು ಎಥಿಕಲ್ ಎಜುಕೇಷನ್ ಅಂದರೆ ಏನು? ಇಂಥದ್ದೆಲ್ಲ ಏತಕ್ಕೆ ಇದರಲ್ಲಿ ಬಂತು? ಈ ಎಲ್ಲಾ ಅಭಿಪ್ರಾಯಗಳು ಇವೆ.

ಶ್ರೀ ಎ. ಲಕ್ಷ್ಮೀಸಾಗರ್.- ಮಾರಲ್ ಎಜುಕೇಷನ್ ಎಂಬುದು ಇರಬೇಕೇ ಬೇಡವೇ ಎಂಬ ಬಗ್ಗೆ ಸಾಕಷ್ಟು ಚರ್ಚೆಯಾಗಿ, ಕೊನೆಗೆ ಒಂದು ತೀರ್ಮಾನಕ್ಕೆ ಬಂದೆವು. ಮೊರಾಲಿಟಿ ಪ್ರಿನ್ಸಿಪಲ್ಸ್ ಇರಬೇಕೆಂಬುದು ಮುಖ್ಯ, ಇನ್ನೊಬ್ಬನ ಪುಸ್ತಕವನ್ನು ಕದಿಯಬಾರದು.....

ಶ್ರೀ ಕೆ.ಎಚ್. ರಂಗನಾಥ್.- ಮದುವೆ ಆಗದೆ ಇರುವುದು ಅಂಥ ಮಾರಲ್ ಏನೂ ಅಲ್ಲ. ಬ್ರಹ್ಮಚರ್ಯಾವಸ್ಥೆ ಆದಮೇಲೆ ಗೃಹಸ್ಥಾಶ್ರಮಕ್ಕೆ ಬರಬೇಕಾಗಿತ್ತು.

ಶ್ರೀ ಎ. ಲಕ್ಷ್ಮೀಸಾಗರ್.- 40-50 ವರ್ಷಗಳ ಕಾಲ ವಿದ್ಯಾಸಂಸ್ಥೆಗಳಲ್ಲಿ ಬಹಳ ವಿಪುಲವಾಗಿ ಸೇವೆ ಮಾಡಿದವರನ್ನು ಕೇಳಿದ್ದೇವೆ ಮತ್ತು ಅವರ ಸಲಹೆಗಳನ್ನು ತೆಗೆದುಕೊಂಡಿದ್ದೇವೆ. ಆದ್ದರಿಂದ ಇದು ಪರಿಪೂರ್ಣವಾಗಿದೆ ಎಂದು ನಮ್ಮ ಭಾವನೆ. ಆದರೆ ಮನುಷ್ಯ ಅಪಕ್ವವಾಗಿರುವ ಕಾರಣ, ಮನುಷ್ಯನ ಕೃತಿ ಕೂಡ ಅಪೂರ್ಣವಾಗಿದೆ ಎಂಬ ತಾತ್ವಿಕ ವಾದವನ್ನು ಒಪ್ಪುವುದಕ್ಕೆ ಸಿದ್ಧನಿದ್ದೇನೆ. ರಂಗನಾಥ್‌ರವರು ಏನು ಹೇಳುತ್ತಿದ್ದಾರೆಂದರೆ, ಇಲ್ಲಿ ಹೇಳಿರುವುದು ಸರಿ; ಆದರೆ ಪಠ್ಯಪುಸ್ತಕದಲ್ಲಿ ಏಕೆ ಈ ಸಾರಾಂಶವನ್ನು ಎತ್ತಿ ತೋರಿಸಿ, ನಮ್ಮ ದೇಶದ ಹಿರಿಮೆ ಇಂಥದ್ದು, ಇಂಥದ್ದನ್ನು ನಾವು ಗಳಿಸಬೇಕೆಂಬುದನ್ನು ಹೇಳಿಲ್ಲ; ಅದನ್ನು ಹೇಳಿದ್ದರೆ ನಮ್ಮ ಮಕ್ಕಳಿಗೆ ಪ್ರಯೋಜನವಾಗುತ್ತಿತ್ತು ಎಂದು ಹೇಳಿದ್ದಾರೆ. ಅವರ ಎರಡನೇ ಪ್ರಶ್ನೆಗೆ ನಾನು ಉತ್ತರಿಸುವುದಕ್ಕೆ ಇಷ್ಟಪಡುತ್ತೇನೆ.

ಶ್ರೀ ಕೆ.ಎಚ್. ರಂಗನಾಥ್.- ತಾವು ಬರುವುದಕ್ಕೆ ಮುಂಚೆ ಡಾ|| ರಾಧಾಕೃಷ್ಣನ್ ವರದಿಯನ್ನು ಓದಿ ಹೇಳಿದೆ. ಅಂಥದ್ದು ಈಗ ಇಲ್ಲವೆಂದು ಹೇಳಿದೆ. ಈ ಪ್ರಕಾರ ಕಳೆದ 20-30 ವರ್ಷಗಳಿಂದ ಮಾಡಿಕೊಂಡು ಬಂದಿದ್ದಾರೆಂದು ಹೇಳುತ್ತಿದ್ದೇನೇ ಹೊರತು ಹಾಕಿದ್ದು ತಪ್ಪು ಎಂದು ಹೇಳಲಿಲ್ಲ. ರಷ್ಯದಲ್ಲಿ one chapter on Lenin is a must right upto 11th standard. One should know it. 11ನೇ ತರಗತಿಯವರೆಗೆ ಲೆನಿನ್ ಬಗ್ಗೆ, ಮಾರ್ಕ್ಸ್ ಬಗ್ಗೆ ಕಲಿಯಲೇಬೇಕಾಗುತ್ತದೆ. ಏತಕ್ಕೆಂದರೆ ರಾಧಾಕೃಷ್ಣನ್ ಅವರು 'they are clear in their directions and clear in their minds' ಎಂಬ ಮಾತನ್ನು ಹೇಳಿದ್ದಾರೆ. ಸ್ವಾತಂತ್ರ್ಯ ಬರುವಾಗ ಏನು ಒಂದು ಅಭಿಪ್ರಾಯ ಇತ್ತು: ಏನು ಒಂದು ವಿಚಾರ ಇತ್ತು, ಯಾವ ರೀತಿ ಸಮಾಜವನ್ನು ರೂಪಿಸಬೇಕೆಂಬ ವಿಚಾರವನ್ನು ಸ್ಪಷ್ಟಪಡಿಸುವುದಕ್ಕೆ ಹೇಳಿದೆ. ಇದರ ಬಗ್ಗೆ ನಾನು ಕಾಮೆಂಟ್ ಮಾಡುತ್ತಿಲ್ಲ. 20-25 ವರ್ಷಗಳಿಂದ ಇದೇ ರೀತಿ ನಡೆದುಕೊಂಡು ಬಂದೆವು ಎಂಬುದು ಕೂಡ ಸರಿಯಿಲ್ಲ. ನಾನು ಆಗಲೇ ಹೇಳಿದ ಹಾಗೆ ಅಂಥದ್ದೆಲ್ಲ ಇರಲೇಬೇಕಾಗುತ್ತದೆ.

ಶ್ರೀ ಎ. ಲಕ್ಷ್ಮೀಸಾಗರ್.- ನಾನು ಅದನ್ನೇ ಹೇಳಿದ್ದು. ಇದನ್ನು ವಿವರವಾಗಿ ಹೇಳುವುದಕ್ಕೆ ತೊಂದರೆಯಾಗುತ್ತದೆಂದು ಸೂತ್ರ ರೂಪದಲ್ಲಿ ಹೇಳಿದ್ದೇನೆ. ಇದಕ್ಕೆ ಒಂದು

ಚೌಕಟ್ಟು ಮಾಡಿ ವಿವರವಾಗಿ ಹೇಳುವುದಕ್ಕೆ ಬರುತ್ತದೆ. ನಾವು ಸೂತ್ರ ತೋರಿಸಿದ್ದೇವೆ. ಅದಕ್ಕೆ ಜ್ಞಾನಕೊಟ್ಟು, ಬುದ್ಧಿಕೊಟ್ಟು, ರಕ್ತನಾಳಗಳನ್ನು ಕೊಟ್ಟು ಜೀವ ತುಂಬಿಸಬೇಕಾಗಿದೆ. ಎರಡನೆಯದಾಗಿ ಇದು ಅಸ್ತಿತ್ವದಲ್ಲಿ ಇಲ್ಲ ನಮ್ಮ ದೇಶದ ಹಿರಿಮೆ, ನಮ್ಮ ದೇಶದ ನಾಯಕರ ಬಗ್ಗೆ ಕಡ್ಡಾಯವಾಗಿ ಕಲಿಯತಕ್ಕ ಪಠ್ಯ ಪುಸ್ತಕಗಳು ನಮ್ಮಲ್ಲಿ ಬಂದಿಲ್ಲವೆಂದು ಹೇಳಿದ್ದಾರೆ. ಇದು ಸ್ವಲ್ಪಮಟ್ಟಿಗೆ ನಿಜ. ನಾನು ಪ್ರೌಢಶಾಲೆಗಳಲ್ಲೂ ಕೂಡ ಉಪಾಧ್ಯಾಯನಾಗಿ ಕೆಲಸಮಾಡಿದವನು. ಅಲ್ಲಿ ಚರಿತ್ರೆ-ಭೂಗೋಳಗಳನ್ನು ಹೇಳಿಕೊಟ್ಟವನು. ಅಲ್ಲಿ ಪಾಠ ಹೇಳುವಾಗ ಚರಿತ್ರೆ ಭೂಗೋಳ ಬೇಕಾಗುತ್ತದೆ. ಇದರಿಂದ ಏನು ಪರಿಣಾಮವಾಗುತ್ತದೆಂಬುದನ್ನು ತಿಳಿದುಕೊಳ್ಳಬೇಕು.

ವರ್ಣಾಶ್ರಮ ಧರ್ಮದ ಬಗ್ಗೆ ಅಥವಾ ಬೆಳವಣಿಗೆಯಲ್ಲಿ ರೂಪಾಂತರಗೊಳ್ಳುವ ಅವಸ್ಥೆಗಳ ಬಗ್ಗೆ ವಾದ ಮಾಡುವುದಾದರೆ ನಾನೂ ಆ ವಾದವಿವಾದಕ್ಕೆ ಸಿದ್ಧನಾಗಿದ್ದೇನೆ. ಆದರೆ ಆ ವಿಚಾರ ಈಗ ಇಲ್ಲ. ಮೊರಾಲಿಟಿ ಎಂಬುದನ್ನು ಯಾರೂ ಡಿಫೈನ್ ಮಾಡಿಲ್ಲ. ಮೊರಾಲಿಟಿ ಇದೆಯೇ ಎಂದು ಒಂದು ಕಾಲದಲ್ಲಿ ಚರ್ಚೆ ಇತ್ತು. ಆದರೆ ಇಂಗ್ಲೆಂಡಿನಲ್ಲಿ ಈ ಬಗ್ಗೆ ಒಂದು ಕಾನೂನು ಮಾಡಿದರು. ಅದು ಇದು ಎರಡನ್ನೂ ಸೇರಿಸಿ ಇದರಲ್ಲಿ ಅಳವಡಿಸಲಾಗಿದೆ. ಇದರಲ್ಲಿ ಮೊರಾಲಿಟಿ ಈಕ್ವಾಲಿಟಿ ಈಕ್ವಿಟಿ ಇದೆ. ಸಾಲ ಕೊಟ್ಟವನಿಗೆ ಸಾಲ ವಾಪಸ್ ಕೊಡಬೇಡ ಎಂದು ಕಾನೂನು ಮಾಡಿದ್ದೇವೆ. ಇದು ಈಕ್ವಿಟಿಯೆ? ಇದೆಲ್ಲಾ ಬರುತ್ತದೆ. ಮೊರಾಲಿಟಿ ಎಂಬುದಕ್ಕೆ ಸಾಮಾನ್ಯವಾದ ಅರ್ಥ I am only speaking of extrinsic manner of the expression of moral education. ರೂಢಮೂಲವಾದ ಸಮಾಜದಲ್ಲಿ ಮನುಷ್ಯನಾಗಿ ಬದುಕಬೇಕು.

ಶ್ರೀ ಕೆ.ಎಚ್. ರಂಗನಾಥ್.- ಮೋಕ್ಷ, ನರಕ, ಪಾತಾಳ ಈ ಶಬ್ದಗಳು.....

ಶ್ರೀ ವಿಶ್ವನಾಥರೆಡ್ಡಿ ಮುದ್ನಾಳ್.- ಹಾಗಲ್ಲ.....

ಶ್ರೀ ಕೆ.ಎಚ್. ರಂಗನಾಥ್.- ಮಾನ್ಯ ಪಶುಸಂಗೋಪನೆ ಮತ್ತು ತೋಟಗಾರಿಕೆ ಇಲಾಖೆ ಮಂತ್ರಿಗಳು ಮಾತನಾಡುವುದೇ ಕಡಿಮೆ. ಮೊರಾಲಿಟಿ ಬಗ್ಗೆ ಅವರ ವ್ಯಾಖ್ಯಾನವೂ ಆಗಲೀ ಕೇಳೋಣ.

ಉಪಾಧ್ಯಕ್ಷರು.- ಈಗ ವಿಷಯಕ್ಕೆ ಬನ್ನಿ.

ಶ್ರೀ ಕೆ.ಎಚ್. ರಂಗನಾಥ್.- ವಿಷಯ ವ್ಯಾಪ್ತಿ ಬಹಳ ದೊಡ್ಡದಾಗಿದೆ. ಇದು ಬೇಗ ಮುಗಿಯುವುದಿಲ್ಲ. ನಾನು ಏತಕ್ಕೆ ಹೇಳುತ್ತಿದ್ದೇನೆಂದರೆ ಇದರಲ್ಲಿ ಅಸಂಬದ್ಧತೆ ಇದೆ ಎಂಬುದನ್ನು ಹೇಳುತ್ತಿದ್ದೇನೆ. ಪಂಪಾಪತಿಯವರು ಇದನ್ನು ಒಪ್ಪುತ್ತಾರಾ ಕೇಳಿ. ಸರ್ಕಾರಕ್ಕೆ ಸಹಾಯ ಮಾಡತಕ್ಕ ಜನರೇ ಒಪ್ಪುವುದಿಲ್ಲ ಎಂದು ಹೇಳುತ್ತಿದ್ದಾರೆ. ಇಲ್ಲಿ ನನ್ನ ಕಡೆಗೆ ಎರಡು ಓಟ್ ಬಂತು.

ಶ್ರೀ ತಿಪ್ಪಯ್ಯ.- ಈ ವಿಷಯಕ್ಕೆ ಮಾತ್ರ ಅವರು ಹೇಳಿದ್ದಾರೆ. ಬೇರೆ ವಿಷಯಕ್ಕೆ ತೆಗೆದುಕೊಳ್ಳಬೇಡಿ.

ಶ್ರೀ ಕೆ.ಎಚ್. ರಂಗನಾಥ್.- ಸಿಲಬಸ್‌ನಲ್ಲಿ....

ಶ್ರೀ ಬಿ. ರಾಚಯ್ಯ.- ಎಲ್ಲ ತರಹದ ಜನರೂ ಇದ್ದಾರೆ. ಆದ್ದರಿಂದ ಎಲ್ಲರನ್ನೂ ಸೇರಿಸಿ ಹಾಕಿದ್ದೇವೆ.

ಶ್ರೀ ಕೆ.ಎಚ್. ರಂಗನಾಥ್.- ಹಾಗಾದರೆ ನಿಮ್ಮ ಸರ್ಕಾರಕ್ಕೆ ವಿದ್ಯಾಭ್ಯಾಸದ ಬಗ್ಗೆ ಸ್ಪಷ್ಟ ನೀತಿ ಇಲ್ಲ ಎಂದು ಹೇಳಿದ ಹಾಗಾಗುತ್ತದೆ. ನಾನು ಆ ರೀತಿ ಅಭಿಪ್ರಾಯ ಪಡಬೇಕಾಗುತ್ತದೆ. ಮುಂದೆ ಏನಿದೆ ಎಂಬುದನ್ನು ನೋಡಿ. I am not finding fault with syllabus, "to uphold and protect the soverignity, unity and integrity of India to defend the country and render national service when called upon told do so" ಇದೆಲ್ಲಾ ಸಿಲಬಸ್‌ನಲ್ಲಿ ಬರುತ್ತದೆಯೆ?

ಶ್ರೀ ಬಿ. ರಾಚಯ್ಯ.- ಎಲ್ಲಾ ಸೇರಿಸಿದ್ದೇವೆ.

ಶ್ರೀ ಕೆ.ಎಚ್. ರಂಗನಾಥ್.- ತಾವು ಸ್ವಲ್ಪ ಜಬರ್ದಸ್ತಾಗಿ ಅಸರ್ಟ್ ಮಾಡಿಕೊಂಡಿದ್ದರೆ ಎಲ್ಲ ಸರಿಹೋಗುತ್ತಿತ್ತು. ಈ ರೀತಿ ಬಿಡಿಬಿಡಿಯಾಗಿ ಬರುವುದನ್ನು ತಾವು ಒಪ್ಪುತ್ತೀರಾ? ಪ್ರಕಾಶ್ ಅವರು ಒಪ್ಪುತ್ತಾರಾ?

ಶ್ರೀ ಎ. ಲಕ್ಷ್ಮೀಸಾಗರ್.- ಈ ಸಂದರ್ಭದಲ್ಲಿ ನನಗೆ ಕಥೆ ಜ್ಞಾಪಕಕ್ಕೆ ಬರುತ್ತದೆ (ಅಕ್ಬರ್ ಹೇಳಿದ ಮಾತುಗಳನ್ನು ಉರ್ದುವಿನಲ್ಲಿ ಹೇಳಿದರು).

ಶ್ರೀ ಕೆ.ಎಚ್. ರಂಗನಾಥ್.- ಯಾವ ಚೋಕ್ರಾ ಅಚ್ಚಾ ಹೈ? ಈ ಚೋಕ್ರಾನಾ? (ಲಕ್ಷ್ಮೀಸಾಗರ್ ಅವರನ್ನು ತೋರಿಸಿ) ಮಹಾಭಾರತದಲ್ಲಿ ಈ ಚೋಪ್ರಾ ಅಚ್ಚಾ ಹೈಯಾ?

ಉಪಾಧ್ಯಕ್ಷರು.- ತಮಗೆ ಇನ್ನೂ ಎಷ್ಟು ನಿಮಿಷ ಬೇಕು?

ಶ್ರೀಕೆ.ಎಚ್. ರಂಗನಾಥ್.- ಇವತ್ತು ಐದು ಗಂಟೆಯವರೆಗೂ ಮಾತನಾಡುತ್ತೇನೆ.

ಶ್ರೀ ಸೂರ್ಯನಾರಾಯಣ ರಾವ್.- ನಮ್ಮ ಪಾರ್ಟಿಯವರೂ ಮಾತನಾಡುತ್ತಾರೆ ಸ್ವಾಮಿ.

ಶ್ರೀ ಎಂ. ವೀರಪ್ಪ ಮೊಯಿಲಿ.- ನಾಳೆ ಮುಗಿಸಬಹುದು.

ಶ್ರೀ ಬಿ. ರಾಚಯ್ಯ.- ಬಂಗಾರಪ್ಪನವರೂ ಹೇಳಿದರು ಇವತ್ತು ಎಷ್ಟು ಹೊತ್ತಾದರೂ ಕುಳಿತಿದ್ದು ಮುಗಿಸೋಣ ಎಂದು. ಇವತ್ತು ಮುಗಿಸೋಣ.

ಶ್ರೀ ಕೆ.ಎಚ್. ರಂಗನಾಥ್.- ನಮ್ಮ ನಾಯಕರು ಬಹಳ ಸಹಕಾರ ಕೊಟ್ಟಿದ್ದಾರೆ. 12 ದಿವಸದಲ್ಲಿ ಡಿಮ್ಯಾಂಡ್‌ಗಳನ್ನು ಪಾಸ್ ಮಾಡಿಕೊಟ್ಟಿದ್ದಾರೆ. We would not have forgone the non-official day. ಅಂಥದ್ದರಲ್ಲಿ ಇದನ್ನೂ ಮಾಡಬೇಕೆಂದರೆ ಹೇಗೆ? ನಾವು ಅನಾವಶ್ಯಕವಾಗಿ ಮಾತನಾಡುವುದಿಲ್ಲ. ನಮಗೆ ಸ್ವಲ್ಪ ಅವಕಾಶ ಕೊಡಿ. ಈ ಮಸೂದೆಯಲ್ಲಿ "to above by the constitution and respect its ideals and institutions, the National Anthem; to cherish and follow the noble ideals which inspired our national struggle for freedom; to uphold and protect the sovereignty. Unity and integrity of India." ಈ ದೇಶದ ನಾಗರೀಕ ಎಂದ ತಕ್ಷಣ ಇವನ್ನು ಕಲಿಸತಕ್ಕ ವ್ಯವಸ್ಥೆ ಇರಬೇಕು. ಇದು ಬರೆದುಕೊಳ್ಳತಕ್ಕದ್ದಲ್ಲ. My point was you need not write these things. It is not a good act on our part to write these things. We are Indians. We have accepted the citizenship of India. We will have to do all these things. We will have to teach....... ಇದನ್ನೆಲ್ಲಾ ಬರೆದುಕೊಂಡು ಕುಳಿತರೆ ಯಾವ ರೀತಿ ಸಿಲಬಸ್ ತಯಾರು ಮಾಡುತ್ತೀರಿ? ಇವನ್ನೆಲ್ಲಾ ಯಾವ ರೀತಿ ಅಳವಡಿಸುತ್ತಿದ್ದೀರಿ? ಮಹಾತ್ಮ ಗಾಂಧಿಯವರ ಒಂದು ವಾಕ್ಯವನ್ನು ಹಾಕಿ ಇದು ಭಾರತದ ಭಾವೈಕ್ಯತೆಯನ್ನು ಕಾಪಾಡಿಸುವುದಕ್ಕೆ ಹಾಕಿದ್ದೇವೆ ಎಂದು ಹೇಳುತ್ತೀರಾ? ಅದು ಆಗುವುದಿಲ್ಲ. ರಾಜ್ಯಾಂಗದ ಪ್ರಿಯಾಂಬಲ್‌ನಲ್ಲಿ ಅರ್ಥವ್ಯಾಪ್ತಿ ಏನಿದೆ ಅದು ಪೂರ್ಣವಾಗಿ ಜಾರಿಗೆ ಬರುವ ರೀತಿಯಲ್ಲಿ ಪಠ್ಯಪುಸ್ತಕಗಳು ರಚನೆ ಮಾಡಬೇಕಾಗುತ್ತದೆ. ಆ ದೃಷ್ಟಿಯಿಂದ ಈಗ ಮಾಡಿರುವುದು ಸರಿಯಲ್ಲ. ತಮ್ಮ ಉದ್ದೇಶವೇನೋ ಘನವಾಗಿದೆ. ತಡವಾಗಿಯಾದರೂ ಇದು ಬಂತಲ್ಲ ಎಂದು ಇದಕ್ಕೆ ನಾನು ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಆದರೆ ಒಂದು ವಾಕ್ಯದಲ್ಲಿ ಬರೆಯುವುದು ಆಗಬಾರದು. ಮಕ್ಕಳು ರಾಜ್ಯದ ಉತ್ತಮ ಪ್ರಜೆಗಳಾಗಲು ಅನುಕೂಲವಾಗುವ ರೀತಿಯಲ್ಲಿ ಇದು ಬರಬೇಕು ಎಂದು ಹೇಳುತ್ತೇನೆ. ಮಹಿಳೆಯರ ಬಗ್ಗೆ ಹೇಳಿದ್ದೀರಿ ಮಾತೃದೇವೋಭವ ಎಂದು ಹೇಳಿದ ಈ ದೇಶದಲ್ಲಿ ಇದನ್ನು ಬರೆದುಕೊಳ್ಳಬೇಕಾ ಸ್ವಾಮಿ?

ಶ್ರೀ ಬಿ. ರಾಚಯ್ಯ.- ಇದನ್ನೆಲ್ಲಾ ಮರೆಯುತ್ತಿರುವುದರಿಂದ ಹಾಕಿದ್ದೇವೆ.

**Sri K.H. Ranganath.-** "to promote harmony and the spirit of common brotherhood amongst all the people of India transcending religious, linguistic and regional or sectional diversities to resource practices deorgatory to the dignity of women ; (vi) to value and preserve the rich heritage of our composite culture ; (vii) to protect and impreve the natural environment including forests, lakes, rivers and wild life, and to have compassion for living creatures....." ಇದರಲ್ಲಿ ಜೀ ವಿಜಯ ಅವರ ಇಲಾಖೆ ವಿಷಯ ಬಂದಿದೆ. ವಿಶ್ವನಾಥರೆಡ್ಡಿಯವರ ಇಲಾಖೆ ವಿಷಯ ಬಂದಿದೆ.

ಶ್ರೀ ತಿಪ್ಪಯ್ಯ.- ಇದನ್ನೆಲ್ಲಾ ಕಲಿಯಬೇಕು ಸ್ವಾಮಿ.

ಶ್ರೀ ಕೆ.ಎಚ್. ರಂಗನಾಥ್.- ಇದೆಲ್ಲಾ ತಮಗೆ ಗೊತ್ತಿಲ್ಲ. ಇಟ್ಟ ಪುಸ್ತಕದಲ್ಲಿ ಪಾಠ ಹೇಳಿದವರು ತಾವು.

ಶ್ರೀ ತಿಪ್ಪಯ್ಯ.- ಹಿಂದೆಯೂ ನೀತಿ ಚಿಂತಾಮಣಿ ಇದನ್ನೆಲ್ಲಾ ನಾವು ಓದಿದ್ದೇವೆ.

ಶ್ರೀ ಕೆ.ಎಚ್. ರಂಗನಾಥ್.- ತಮಗೆ ನಾನು ಹೇಳಿದ್ದು ಗೊತ್ತಾಗಲಿಲ್ಲ ಎಂದು ಕಾಣುತ್ತದೆ. ಸ್ಕ್ರಿಟ್ ಮಾಡಿದ ಪಠಪುಸ್ತಕದಲ್ಲಿ ಪಾಠ ಹೇಳಿದವರು ತಾವು ಎಂದು ಹೇಳಿದೆ. ಆದರೆ ನಾನು ಹೇಳುವ ವಿಚಾರ ಬೇರೆ. "to develop the scientific temper, humansim and spirit of inquiry and reform....." Scientific temper, moral, ethical ----------- ಇದಕ್ಕೆ ನಾವು ಒತ್ತುಕೊಡಬೇಕಾಗಿದೆ. ಇದೆಲ್ಲಾ ಬಂದಾಗ ತನ್ನಷ್ಟಕ್ಕೆ ತಾನೇ ಕಲಿತುಕೊಳುತ್ತಾ ಬರುತ್ತಾರೆ. To safeguard public property and to ad-jure violence; ಎಂದು ಹೇಳಿದ್ದೀರಿ. ಕಲ್ಲು ಹೊಡೆಯಬೇಡ ಎಂದು ಪ್ರೈಮರಿ ಶಾಲೆ ಹುಡುಗರಿಗೆ ಹೇಳಿ ಕೂಡ. ಆರ್.ವಿ. ಕಾಲೇಜು ಎಂದು ಬರೆದಿರುತ್ತಾರೆ. ಬಸವೇಶ್ವರ ಸರ್ಕಲ್ ಎಂದು ಬರೆದಿರುತ್ತಾರೆ. ಅದರ ಮೇಲೆ ಪೋಸ್ಟರ್ ಹಚ್ಚುತ್ತಾರೆ. ನೀವು ಕಾರಿನಲ್ಲಿ ಬರುವಾಗ ನೋಡಿ. To strive towards excellence in all sphers of individual and collective activity so that the nation constantly rises to higher levels of endeavour and achievement. The prescription under sub section (1) may be different for the different categories of educational institutions....." ಇದು ಏತಕ್ಕೆ ಸ್ವಾಮಿ? "The objectives of education at the primary level shall be universalisation of education at the primary level by comprehensive access by both formal and non-formal means and by improving retention and completion rates with curriculam development and teacher education to help children attain the required level of achievement in the following basic purpose...." ಎಂದು ಹೇಳಿದ್ದಾರೆ. ಇದನ್ನು ವಿಷದೀಕರಿಸಬೇಕು. ಸಬ್‌ಕ್ಲಾಸ್ -4ರ ಅರ್ಥವ್ಯಾಪ್ತಿ ಏನು ಎಂದು ಮಾನ್ಯ ಮಂತ್ರಿಗಳನ್ನು ಕೇಳುತ್ತೇನೆ.

*****

## ವಿವಿಗಳಿಗೆ ಧನಸಹಾಯ : ಒಂದು ಚರ್ಚೆ

19 ಮಾರ್ಚ್ 1992

ಶ್ರೀ ಕೆ.ಎಚ್. ರಂಗನಾಥ್.- ನಾವು ಎಲ್.ಎಸ್. ಪರೀಕ್ಷೆ ಎಂದರೆ ಲೋಯರ್ ಸೆಕೆಂಡರಿ ಪರೀಕ್ಷೆಗೆ ಕುಳಿತುಕೊಳ್ಳುತ್ತಿದ್ದಾಗ ಏನಯ್ಯ ನಿಮ್ಮ ಸ್ಕೂಲ್‌ಗೆ ಎಷ್ಟು ರಿಸಲ್ಟ್ ಎಂದರೆ, 100% ಎಂದು ಹೇಳುತ್ತಿದ್ದರು. ಅದು ಹೇಗೆ ಎಂದರೆ ಪರೀಕ್ಷೆಗೆ ಕುಳಿತಿದ್ದವನು ಒಬ್ಬನೇ; ಪಾಸ್ ಆದವನೂ ಒಬ್ಬನೇ. ನೀವು ಪರ್ಸೆಂಟ್ ಹೇಳತಕ್ಕಂಥದ್ದು ಕೇಳಿದರೆ ಹೀಗೆ ಆಗುತ್ತದೆ ಎಂದರೆ ಈ ಡಿಪಾರ್ಟ್‌ಮೆಂಟ್‌ಗೆ ಹಣ ಜಾಸ್ತಿ ಬೇಕಾಗುತ್ತದೆ; ತುಂಬಾ ಹಣಬೇಕು. ಬಹಳವಾಗಿ ಹಾಳಾಗಿರುವ ಡಿಪಾರ್ಟ್‌ಮೆಂಟ್ ಎಂದರೆ ಎಜುಕೇಶನ್ ಡಿಪಾರ್ಟ್‌ಮೆಂಟ್, ನಿಮಗೆ ಒಂದು ಮೇನಿಯಾ ಶುರುವಾಗಿದೆ. ಯೂನಿವರ್ಸಿಟಿ ಪ್ರಾರಂಭ ಮಾಡುವುದು? ಏತಕ್ಕೆ ಯೂನಿವರ್ಸಿಟಿ ಪ್ರಾರಂಭ ಮಾಡುವುದು? ತಾವು ಎಷ್ಟು ಯೂನಿವರ್ಸಿಟಿಗಳನ್ನು ಪ್ರಾರಂಭ ಮಾಡಿ ಹಣ ಕೊಟ್ಟಿರುವುದು ಎಷ್ಟು? ಮೈಸೂರ್ ಯೂನಿವರ್ಸಿಟಿಗೆ 40 ಲಕ್ಷ ಏತಕ್ಕೆಂದರೆ, construction work such as extension of the Yuvaraj's College; Karnataka University-Rs. 66.00 lakhs for construction of boys hostel, ladies hostel, ಇದರಿಂದ ಯೂನಿವರ್ಸಿಟಿ ಇಂಪ್ರೂವ್‌ಮೆಂಟ್ ಆಗುತ್ತದೆಯಲ್ಲಾ Bangalore University Rs. 40.00 Lakhs for Class-III and Class-IV employees quarters, Gulbarga University Rs. 90.00 lakhs for construction work of Institution of Kannada Studies, ಮಂಗಳೂರು ಯೂನಿವರ್ಸಿಟಿಗೆ 100 ಕೋಟಿ ಕೊಟ್ಟಿದ್ದೀರಿ. ಏತಕ್ಕೆಂದರೆ, ಊರಿಗೆ ಹೋದರೆ ಬಯ್ಯುತ್ತಾರೆಂದು ಒಂದು ಕೋಟಿ ಜಾಸ್ತಿ ಮಾಡಿಕೊಂಡಿರುತ್ತೀರಿ. Establishment of Centre for Ecology and environment. ಅಲ್ಲಿ ಹೊಸ ಸಬ್ಜೆಕ್ಟ್ ಇಂಟ್ರಡ್ಯೂಸ್ ಆಗಿದೆ.

ಕುವೆಂಪು ಯೂನಿವರ್ಸಿಟಿಗೆ 130 ಲಕ್ಷ ಕೊಟ್ಟಿದ್ದೀರಿ. ಕುವೆಂಪು ಯೂನಿವರ್ಸಿಟಿ ಹೊಸದಾಗಿ ಪ್ರಾರಂಭವಾಯಿತು. ವೈಸ್‌ಚಾನ್ಸಲರ್ ವಗೈರೆ ಅಲ್ಲಿಗೆ ಕೊಟ್ಟ ಹಣವನ್ನು ಖರ್ಚು ಮಾಡಲೇ ಇಲ್ಲ. ಅಲ್ಲಿ ಬರೀ ಅಕಾಡೆಮಿಕ್ ಕೌನ್ಸಿಲ್ ಮೀಟಿಂಗ್, ಸಿಂಡಿಕೇಟ್ ಮೀಟಿಂಗ್ ವಗೈರೆ ವಗೈರೆ ನಡೆಯುತ್ತದೆಯೇ ವಿನಹ ಇನ್ನೂ ಏನೂ ಕೆಲಸ ನಡೆಯುತ್ತಿಲ್ಲ. ಮತ್ತೆ ಕನ್ನಡ ಯೂನಿವರ್ಸಿಟಿಯನ್ನು ಈಗ ಪ್ರಾರಂಭ ಮಾಡಿದ್ದೀರಿ. ಟೆಕ್ನಿಕಲ್ ಯೂನಿವರ್ಸಿಟಿ ಬರುತ್ತದೆ. ಮೆಡಿಕಲ್ ಯೂನಿವರ್ಸಿಟಿ ಬರುತ್ತದೆ ಎಂದು ಬೇರೆ ಹೇಳುತ್ತಿದ್ದೀರಿ. ಇದು ಯಾರೋ ರಿಟೈರ್ ಆಗಿರುವವರು ನನ್ನನ್ನು ವೈಸ್‌ಚಾನ್ಸಲರ್ ಮಾಡಿ ಎಂದು ಓಡಾಡುತ್ತಿದ್ದಾರೆಯೇ ವಿನಹ ಯೂನಿವರ್ಸಿಟಿಯಲ್ಲಿ ಆಗತಕ್ಕಂಥ ಅನುಕೂಲ ಏನೂ

ಇರುವುದಿಲ್ಲ. ಯ.ಜಿ.ಸಿ. ಯಿಂದ ವಗೈರೆ ವಗೈರೆ ಸ್ವಲ್ಪ ಹಣ ಬರಬಹುದು. ಆದರೆ ನಮ್ಮಿಂದ ಏನು ಮಾಡುತ್ತೀರಿ. ತಾವು ಅವರಿಗೆ ದೊಡ್ಡ ಜವಾಬ್ದಾರಿಯನ್ನು ಕೊಡುತ್ತೇವೆಂದು ಹೇಳಿದಿರಿ. ಈಗ ಹತ್ತು ವರ್ಷಗಳ ಪ್ರಾಸ್ಪೆಕ್ಟೀವ್ ಪ್ಲಾನಿಂಗ್ ಅನ್ನು ವಿಚಾರ ಮಾಡಿ ಎಂದು ಹೇಳಿದಿರಿ. ಅದಕ್ಕೆ ಇದರಲ್ಲಿ ದುಡ್ಡು ಎಲ್ಲಿದೆ?

ಶ್ರೀ ಎಂ. ವೀರಪ್ಪ ಮೊಯಿಲಿ.- ದುಡ್ಡು ಸಾಕಾಗುವುದಿಲ್ಲ, ಅದನ್ನು ನಾನು ಒಪ್ಪುತ್ತೇನೆ. ಆದರೆ ಹೋದವರ್ಷಕ್ಕಿಂತ ಈ ವರ್ಷಕ್ಕೆ 100 ಕೋಟಿ 1 ಲಕ್ಷ ರೂಪಾಯಿ ಹೆಚ್ಚು ಮಾಡಿದ್ದೇವೆ. That is an increase which we have provided, that is a big jump, 108% jump.

ಶ್ರೀ ಕೆ.ಎಚ್. ರಂಗನಾಥ್.- ಮೈಸೂರು ಅರಮನೆಗೆ 500 ಕೋಟಿ ಕೊಡುತ್ತೀರಿ, ಈಗ ಇದಕ್ಕೆ 100 ಕೋಟಿ ಕೊಟ್ಟುಬಿಟ್ಟಿದ್ದೇವೆಂದು ನೀವು ಹೇಳಿ ಭುಜ ತಟ್ಟಿಕೊಂಡು ಬಿಟ್ಟರೆ ಆಯಿತೆ? ತಾವು ಕೊಟ್ಟಿರುವ 500ನ್ನು 5 ವರ್ಷಕ್ಕೆ ಲೆಕ್ಕಹಾಕಿಬಿಟ್ಟು 1500 ಎಂದು ಒಂದೊಂದು ಸಾರಿ ಹೇಳಿಬಿಡುತ್ತೀರಿ.

ಶ್ರೀ ಎಂ. ವೀರಪ್ಪ ಮೊಯಿಲಿ.- ಹಣ ಸಾಕಾಗುವುದಿಲ್ಲ. ಇನ್ನೊಂದು 500 ಕೋಟಿ ರೂಪಾಯಿಗಳನ್ನು ಕೊಟ್ಟರೂ ಸಾಕಾಗುವುದಿಲ್ಲ. ಎಜ್ಯುಕೇಷನ್ ಡಿಪಾರ್ಟ್‌ಮೆಂಟ್ ಆ ರೀತಿ ಇದೆ.

ಶ್ರೀ ಕೆ.ಎಚ್. ರಂಗನಾಥ್.- ಹೀಗಿರುವಾಗ why that craze to establish universities?

ಶ್ರೀ ಎಂ. ವೀರಪ್ಪ ಮೊಯಿಲಿ.- ಉದಾಹರಣೆಗೆ ಹೇಳುವುದಾದರೆ, ಯೂನಿವರ್ಸಿಟಿ ಎಜ್ಯುಕೇಷನ್‌ಗೆ 59 ಕೋಟಿ ಇದ್ದುದ್ದು 60 ಕೋಟಿ ಆಗಿದೆ. ತಮಗೆ ಗೊತ್ತಿರುವ ಪ್ರಕಾರ, that is the increase we have provided. ತಾವು ಹೇಳಿದ ಹಾಗೆ ಸಾಕಾಗಲಿಲ್ಲ. ಯೂನಿವರ್ಸಿಟಿಯನ್ನು ಏತಕ್ಕೆ ಮಾಡಿದಿರಿ ಎಂದು ಕೇಳಿದಿರಿ.

ಶ್ರೀ ಕೆ.ಎಚ್. ರಂಗನಾಥ್.- ನಾವು ಮಾಡಬಾರದು ಎಂದು ಹೇಳುವುದಿಲ್ಲ; ಮಾಡೋಣ. ನಾವೇ ಎಲ್ಲ ಮಾಡಿಬಿಟ್ಟರೆ, ನಮ್ಮ ಮಕ್ಕಳು ದಡ್ಡರೇನು ಅಲ್ಲ. ಅವರು ಮಾಡುವುದಿಲ್ಲವೆಂದು ಹೇಳುವುದಕ್ಕೆ ಅವರು ಮಾಡುತ್ತಾರೆ. ಆದರೆ ಇರುವಂಥದ್ದನ್ನು ವ್ಯವಸ್ಥಿತವಾಗಿ ಮಾಡಿ ಎಂದು ಹೇಳುತ್ತಿದ್ದೇನೆ.

*****

# ಹಾಸ್ಟೆಲ್ ವಿದ್ಯಾರ್ಥಿಗಳ ಮೇಲೆ ಪೊಲೀಸ್ ದೌರ್ಜನ್ಯ

23 ಸೆಪ್ಟೆಂಬರ್ 1970

**ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ).**- ಸ್ವಾಮಿ, ತಾವು ಇದಕ್ಕೆ ಸ್ವಲ್ಪ ಅವಕಾಶಕೊಡಬೇಕು. ಏತಕ್ಕೆ ಎಂದರೆ ಹಾಸ್ಟಲ್‌ನಲ್ಲಿ ಇರತಕ್ಕಂಥ ಹುಡುಗರನ್ನು ಹಾಸ್ಟೆಲ್ ಒಳಗೆ ನುಗ್ಗಿ ಹೊಡೆಯುವುದು ಎಂದರೆ ಏನು ಅರ್ಥ? ನೀವು ಕಾರ್‌ನಲ್ಲಿ ಓಡಾಡುತ್ತೀರಿ. ನೀವು ನಡೆದುಕೊಂಡು ಹೋದರೆ ಹುಡುಗರು ಕಲ್ಲು ಹೊಡೆಯುತ್ತಾರೆ. ಪೊಲೀಸಿನವರು ಮನೆಗೆ ನುಗ್ಗಿ ಹೊಡೆಯುವುದು, ಹಾಸ್ಟಲ್‌ನೊಳಕ್ಕೆ ನುಗ್ಗಿ ಹೊಡೆಯುವುದು ಈ ಹವ್ಯಾಸ ನಡೆಯುತ್ತಾ ಇದೆ. ಚಿತ್ರದುರ್ಗದಲ್ಲಿ ಹಾಸ್ಟಲ್ ಒಳಗೆ ನುಗ್ಗಿ ಊಟಮಾಡುವ ಹುಡುಗರಿಗೆ ಹೊಡೆದಿದ್ದಾರೆ. ಮೂರು ಹಲ್ಲು ಉದುರಿಹೋಗಿವೆ. ಮೈಸೂರಿನಲ್ಲಿ ಹಾಸ್ಟಲ್‌ಗೆ ನುಗ್ಗಿ ಹೊಡೆದಿದ್ದಾರೆ. ಎಲ್ಲಾ ಊರಿನಿಂದಲೂ ಹುಡುಗರು ಬಂದು ಹೇಳಲಿಲ್ಲ. ಸಿದ್ಧವೀರಪ್ಪನವರನ್ನು ಹುಡುಕಿಕೊಂಡು ಬಂದ ಹುಡುಗರಿಗೆ ಎಲ್ಲಿ ಗಾಯವಾಗಿದೆ ಎಂದು ತಮ್ಮ ಕಣ್ಣಿಗೆ ಕಂಡಿದ್ದನ್ನು ನೋಡಿ ನೋಟೀಸ್ ಕೊಟ್ಟಿದ್ದಾರೆ.

ಈ ಹೊತ್ತು ನಮ್ಮ ಓಡಾಟವನ್ನು ಗಮನಿಸುವುದಕ್ಕೆ ಪೊಲೀಸಿನವರನ್ನು ಗೃಹ ಮಂತ್ರಿಗಳು ಹಾಕಿದ್ದಾರೆ.

**ಅಧ್ಯಕ್ಷರು.**- ಮಾನ್ಯ ಸದಸ್ಯರು ಬೇರೆ ವಿಷಯಕ್ಕೆ ಹೋಗುತ್ತಿದ್ದಾರೆ. ಅದಕ್ಕೆಲ್ಲ ಪ್ರೊಸೀಜರ್ ಇದೆ. ಈಗ ಮುಖ್ಯಮಂತ್ರಿಗಳು ಮಾತನಾಡಲು ಅವಕಾಶ ಕೊಡಿ. ಕ್ಲಾರಿಫಿಕೇಷನ್ ಬೇಕಾದರೆ ಆಮೇಲೆ ಕೇಳಬಹುದು.

**ಶ್ರೀ ವೀರೇಂದ್ರ ಪಾಟೀಲ್.**- ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ಸಿದ್ಧವೀರಪ್ಪನವರು ಈ ಹೊತ್ತು ಬೆಳಿಗ್ಗೆ ಏನು ನಡೆದಿದೆ ಎನ್ನುವುದರ ಬಗ್ಗೆ ಪ್ರಸ್ತಾಪಮಾಡಿ, ಸರ್ಕಾರದವರು ಶಾಂತ ವಾತಾವರಣ ಕಾಪಾಡಿಕೊಳ್ಳುವುದಕ್ಕೆ ಪ್ರಯತ್ನ ಮಾಡಬೇಕು, ನಾವೇನೂ ಹುಡುಗರಿಗೆ ಪ್ರೇರೇಪಿಸಬೇಕು ಎನ್ನುವ ವಿಚಾರದವರಲ್ಲ, ರಾಜ್ಯದಲ್ಲಿ ಸ್ಥಾಪನೆ ಆಗಬೇಕು ಎನ್ನುವ ವಿಚಾರದವರಿದ್ದೇವೆ ಎಂದು ಕೆಲವು ವಿಚಾರಗಳನ್ನು ಹೇಳಿದರು. ಎಕ್ಸ್‌ಪೋ ಬಗ್ಗೆ ಸರ್ಕಾರದವರು ಏನು ಹೇಳಬೇಕು ಎನ್ನುವುದನ್ನು ಹೇಳಿ ಒಂದು ಸಮಾಧಾನ ತಂದಿದ್ದರೆ ಈ ಪರಿಸ್ಥಿತಿಯುಂಟಾಗುತ್ತಿರಲಿಲ್ಲ ಎಂದು ಹೇಳಿದರು.

**ಶ್ರೀ ಕೆ.ಎಚ್. ರಂಗನಾಥ್.**- ಪೊಲೀಸಿನವರು ಹುಡುಗರು ಕಟ್ಟಡದೊಳಗಿದ್ದರೂ ಅಲ್ಲಿಗೆ ನುಗ್ಗಿ ಹೊಡೆಯುತ್ತಾರೆ, ಅದಕ್ಕೇನು ಹೇಳುತ್ತೀರಿ? ಅವರು ನಾವು ಕೆಲವರು ಸರಕಾರದ ಹೆಸರಿಗೆ ಮಸಿ ಬಳಿಯಲು ಪ್ರಯತ್ನಮಾಡುತ್ತಿದ್ದೇವೆಂದು ಅರ್ಥ ಬರುವ ರೀತಿಯಲ್ಲಿ ಹೇಳುತ್ತಿದ್ದಾರೆ.

**ಅಧ್ಯಕ್ಷರು.**- ತಾವು ಅದನ್ನು ಆಮೇಲೆ ಕೇಳಿ.

ಶ್ರೀ ಕೆ.ಎಚ್. ರಂಗನಾಥ್.- ಅವರು ಬಹಳ ಹುಷಾರಾಗಿ ಪದಗಳನ್ನು ಉಪಯೋಗಿಸುತ್ತಿದ್ದಾರೆ. ಶ್ರೀ ವೀರೇಂದ್ರ ಪಾಟೀಲರು ಪೊಲೀಸರನ್ನು ಉಪಯೋಗ ಮಾಡಿಕೊಂಡು ರಾಜ್ಯಭಾರ ಮಾಡುತ್ತಿದ್ದಾರೆಂದು ಜನರಿಗೆ ತಿಳಿಸಲು ಪ್ರಯತ್ನ ನಾವು ಮಾಡುತ್ತಿದ್ದೇವೆ ಎಂದು ಹೇಳುತ್ತಿದ್ದಾರೆ. ಮೈಸೂರು, ಚಿತ್ರದುರ್ಗ. ಬೆಂಗಳೂರು ಮುಂತಾದ ಕಡೆಗಳಲ್ಲಿ ಹಿಂದೆ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳ ಹಾಸ್ಟಲುಗಳಿಗೆ ಪೊಲೀಸರು ನುಗ್ಗಿ ಹುಡುಗರನ್ನು ಹೊಡೆದಿದ್ದಾರೆ, ಆದರೆ ಅದು ಈ ದಿವಸದ ಪ್ರಶ್ನೆ ಅಲ್ಲ. ಹಿಂದಿನಿಂದ ಈ ರೀತಿ ಅಚಲವಾಗಿ ನಡೆಯುತ್ತಿದೆ. ನನ್ನ ಮನೆಯೆದುರಿಗೆ ಪೊಲೀಸರು ಬಾರಿಸಿದ್ದನ್ನು ಹೊಡೆದದ್ದನ್ನು ನಾನು ನೋಡಿದ್ದೇನೆ. ಅದು ಆ ದಿವಸದಿಂದ ಇಂದಿನವರೆಗೆ ನಡೆಯುತ್ತಿವೆ. ನನಗೆ ಮುಖ್ಯಮಂತ್ರಿಗಳ ಬಗ್ಗೆ ಗೌರವವಿದೆ.

ಅಧ್ಯಕ್ಷರು.- ಅದನ್ನು ಅವರ ಸ್ಟೇಟ್‌ಮೆಂಟ್ ಆದನಂತರ ಹೇಳಿ.

ಶ್ರೀ ಕೆ.ಎಚ್. ರಂಗನಾಥ್.- ಬರೀ ವಿದ್ಯಾರ್ಥಿಗಳು ಕಲ್ಲು ತೂರಿದರೆಂದು ಹೇಳುತ್ತಿದ್ದಾರೆ. ಅದಕ್ಕೇನು ರಿಕಾರ್ಡಿದೆ? ಚಿತ್ರದುರ್ಗದಲ್ಲಿ ಕಾಲೇಜು ಹುಡುಗರು ಊಟ ಮಾಡುತ್ತಿದ್ದರೆ ಅಲ್ಲಿಗೆ ಹೋಗಿ ಹೊಡೆದಿದ್ದಾರೆ.

*****

## ಉಪನ್ಯಾಸಕರಿಗೆ ಯುಜಿಸಿ ವೇತನ

12 ಏಪ್ರಿಲ್ 1979

**Sri K.H. Ranganath.-** U.G.C. recommendation were made some time in 1974-75 and the Government took a decision in 1977, From 1st January 1977 U.G.C. scales, were given effect to. Before answering other questions, I would like to bring to the notice of this august House the pay scales of teachers.

1. An instructor is started with a pay of 660 p.m. with other allowances and the total salary comes to about RS. 800 p.m.
2. Lectures scale of pay is Rs. 900-1750 plus other allowances which comes to 1100-1200.
3. Associate Professors: 1300-1900 plus other allowances which comes to 1450-1550.
4. Professors : 1500 plus other allowances.

These salaries cannot be called as low. As regards the other question asking whether it has been implemented in other Universirsities or not; my information is that other Universities have not implemented.

In addition to other aspects the basic salary has got other wider implementation. It also got certain implications on the other sector viz., Government servants.

That is why on these four questions we are going to consider and a decision will be taken. But the question of giving effect to from 1st January 1973 does not arise at all. The leader of the opppsotion has asked whether in has been implemented in over Universities, which I will have to enquiry into. Because, I have not done anything behind the back. I had discussed with them in my chamber and even now also I am inviting them to discuss. The salary they are getting is not a small salary. But the time they chase to resort to this method was not the proper time. They started it when the first semester is about to commence when I required nearly about 500 graduates in May or June. These students who would have taken examination were prevented marketing the examination. I would request whether this House would take this action on the part of the Teachers Association. During in convocotion, I requested the members of the Association to forget these things for the moment and allow some time. Can I not request you to wait for three months? They were not prepared to even make this much of sacrifice. When this is the attitude of the teachers, Sir, I think I have not does anything wrong. If I am permitted to quote from the Presidents Address of 25th January he has said; "In the welfer of demands and agiation by the urban pressure groups for an ever-increasing share in the national cake, the needs of the poor farmer, the real producer of wealth in our country are apt to be overlooked. ವಿದ್ಯಾರ್ಥಿಗಳಿಗೆ ಇನ್ನು ಮೂರು ತಿಂಗಳು ಪರೀಕ್ಷೆ ಇದೆ. ಪರೀಕ್ಷೆಗೆ ಹೋಗತಕ್ಕ ವಿದ್ಯಾರ್ಥಿಗಳನ್ನು ನಿಲ್ಲಿಸಿ ಚಳುವಳಿ ಮಾಡುತ್ತೇವೆಂದು ಹೇಳುವುದನ್ನು ತಾವು ಒಪ್ಪುತ್ತೀರಾ? ತಾವು ಹೇಳಿರತಕ್ಕ ವಿಚಾರಗಳನ್ನು ತರಿಸಿ ನೋಡುತ್ತೇನೆ. 71ರಿಂದ ಯು.ಜಿ.ಸಿ. ಸ್ಕೇಲ್ ಕೊಡುವುದಕ್ಕೆ ಸಾಧ್ಯವಿಲ್ಲ. ಬೇರೆ ಯೂನಿವರ್ಸಿಟಿಗಳಲ್ಲಿ ಕೂಡ ಕೊಟ್ಟಿಲ್ಲ ಎನ್ನುವುದು ನನ್ನ ಅಭಿಪ್ರಾಯ. ಅದನ್ನು ಕೂಡ ವಿಚಾರ ಮಾಡುತ್ತೇನೆ. ಬೋರ್ಡ್ ಆಫ್ 'ಏಜೆನ್ಸಿ ಮತ್ತು ಕೌನ್ಸಿಲ್‌ನಲ್ಲಿನ ಆಕ್ಟ್ ಅಮೆಂಡ್‌ಮೆಂಟ್ ಮಾಡುವ ವಿಷಯವನ್ನು ಕೂಡ ಹೇಳಿದ್ದೇನೆ. ಇಷ್ಟಾದರೂ ಕೂಡ ಪರೀಕ್ಷೆಗೆ ಹೋಗುವವರು ನಿಲ್ಲಿಸಿ ಚಳುವಳಿ ಮಾಡುತ್ತೇವೆನ್ನುವ ಒಂದು ಧೋರಣೆಯನ್ನು ಅನುಸರಿಸುತ್ತಿದ್ದಾರೆ. ಮಾನ್ಯ ಅಧ್ಯಕ್ಷರೇ, ಸಮಾಜದ ಹಿತದೃಷ್ಟಿಯಿಂದ, ವಿದ್ಯಾರ್ಥಿಗಳ ಭವಿಷ್ಯದ ದೃಷ್ಟಿಯಿಂದ ಹಾಗೂ ರಾಜ್ಯದ ಹಿತದೃಷ್ಟಿಯಿಂದ ಸರ್ಕಾರ ಇದರ ಬಗ್ಗೆ ದೃಢವಾಗಿ ವರ್ತಿಸಬೇಕಾಗುತ್ತದೆ. ಎನ್ನುವುದು ನನ್ನ ವೈಯಕ್ತಿಕ ಅಭಿಪ್ರಾಯ.

ಶ್ರೀ ಎಸ್.ಆರ್. ಬೊಮ್ಮಾಯಿ.- ಯು.ಜಿ.ಸಿ. ಸ್ಕೇಲ್ ಕೊಟ್ಟಿಲ್ಲ ಎನ್ನುವ ತಮ್ಮ ಅಭಿಪ್ರಾಯ ಸರಿಯಲ್ಲ.

ಶ್ರೀ ಕೆ.ಎಚ್. ರಂಗನಾಥ್.- ಅದಕ್ಕೆ ವಿಚಾರಿಸುತ್ತೇನೆಂದು ಹೇಳಿದ್ದೇನೆ.

ಶ್ರೀ ಎಸ್.ಆರ್. ಬೊಮ್ಮಾಯಿ.- ತಾವು ಹೇಳಿದ ವಿಚಾರದಲ್ಲಿ ಭಿನ್ನಾಭಿಪ್ರಾಯವಿಲ್ಲ. ವಿದ್ಯಾರ್ಥಿಗಳಿಗೆ ಪರೀಕ್ಷೆ ಹತ್ತಿರಕ್ಕೆ ಬಂದಾಗ ಉಪಾಧ್ಯಾಯರುಗಳು ಚಳುವಳಿ ಮಾಡುವುದಕ್ಕೆ ಬೆಂಬಲ ನಾವು ಕೊಡುವುದಿಲ್ಲ. ಸರ್ಕಾರದವರು ಕೂಡ ಸರ್ಕಾರಿ ನೌಕರರ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬೇಕು. ಯು.ಜಿ.ಸಿ. ಯವರು ಸಲಹೆ ಕೊಟ್ಟಂತಹ ಶಿಫಾರಸ್ಸುಗಳನ್ನು ಜಾರಿಗೆ ತರುವುದಕ್ಕೆ 4 ವರ್ಷಗಳು ಬೇಕೆ? 6 ತಿಂಗಳು ಅಥವಾ ಒಂದು ವರ್ಷದೊಳಗೆ ತೀರ್ಮಾನ ತೆಗೆದುಕೊಂಡಿದ್ದರೆ ಇಂಥ ಒಂದು ಪರಿಸ್ಥಿತಿ ಇವೊತ್ತು ಬರುತ್ತಿರಲಿಲ್ಲ. ಸರ್ಕಾರ ಕೆಲಸ ಮಾಡತಕ್ಕ ನೌಕರರ ಬಗ್ಗೆ ಮತ್ತು ಅವರ ಒಂದು ಬೇಡಿಕೆಗಳ ಬಗ್ಗೆ ಅಲಕ್ಷ್ಯ ಭಾವನೆಯಿಂದ ಇದ್ದಾಗ ನೌಕರರು ಇಂಥ ಕ್ರಮಕ್ಕೆ ಇಳಿಯುತ್ತಾರೆ. ಅದುದರಿಂದ ಈ ವಿಚಾರದಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಕೆ.ಎಚ್. ರಂಗನಾಥ್.- ಸ್ವಾಮಿ, ಈ ವಿಚಾರದಲ್ಲಿ ಸರ್ಕಾರದ ಗಮನಕ್ಕೆ ಮುಖ್ಯಮಂತ್ರಿಗಳ ಗಮನಕ್ಕೆ ಚಾನ್ಸ್‌ಲರ್‌ರವರು ಅಕ್ಟೋಬರ್‌ನಲ್ಲಿಯೇ ಪತ್ರ ಬರೆದಿದ್ದಾರೆ. ಬಹುಬೇಗ ಈ ಸಮಸ್ಯೆಯನ್ನು ತೀರ್ಮಾನ ಮಾಡುವ ವಿಚಾರ ಸರ್ಕಾರದ ಪರಿಶೀಲನೆಯಲ್ಲಿದೆ. ಶಾಸನ ಸಭೆ ಪ್ರಾರಂಭವಾಗುವುದಕ್ಕೆ ಮುಂಚೆ ವೈಸ್ ಚಾನ್ಸ್‌ಲರ್‌ರವರು ಪತ್ರ ಬರೆದಿದ್ದಾರೆ. 6 ತಿಂಗಳೊಳಗೆ ಪರಿಹಾರ ಮಾಡುತ್ತೇವೆಂದು ಪತ್ರ ಬರೆದಿದ್ದಾರೆ. ಪುನಃ ಕರ್ಟನ್ ಮಾಡುವುದಾದರೆ ಸಮಂಜಸವಾಗುವುದಿಲ್ಲ. ಅತಿ ಜಾಗ್ರತೆಯಾಗಿ ಕ್ರಮ ತೆಗೆದುಕೊಳ್ಳುತ್ತೇವೆ. ಸಂಪು ವಗ್ಯೆರೆ ಮಾಡುವುದು ಸರಿಯಲ್ಲ ಎನ್ನುವ ಬಗ್ಗೆ ಮಾನ್ಯ ಸದಸ್ಯರುಗಳು ಪ್ರಸ್ತಾಪ ಮಾಡಿದ್ದಾರೆ. ಇದರ ಬಗ್ಗೆ ನಾನು ಅವರುಗಳಿಗೆ ದನ್ಯವಾದಗಳನ್ನು ಅರ್ಪಿಸುತ್ತೇನೆ. ಸರ್ಕಾರ ಕೂಡ ಹೆಚ್ಚು ಸಮಯ ತೆಗೆದುಕೊಳ್ಳುವುದಕ್ಕೆ ಇಷ್ಟ ಇಲ್ಲ. ಚಾನ್ಸ್‌ಲರ್‌ರವರ ಅಭಿಪ್ರಾಯ ತೆಗೆದುಕೊಂಡಿದ್ದೇವೆ. ವೈಸ್‌ಚಾನ್ಸ್‌ಲರ್‌ರವರಿಗೆ ಪತ್ರ ಬರೆದಿದ್ದೇವೆ. ಇನ್ನು 2 ತಿಂಗಳಲ್ಲಿ ಎಲ್ಲಾ ವ್ಯವಸ್ಥೆ ಮಾಡುವುದಕ್ಕೆ ಪ್ರಯತ್ನಪಡುತ್ತೇನೆ.

ಶ್ರೀ ಭಾವುರಾವ್ ದೇಶಪಾಂಡೆ.- ಯು.ಜಿ.ಸಿ. ಶಿಫಾರಸ್ಸಿನ ಪ್ರಕಾರ ಅವರ ಸ್ಕೇಲನ್ನು ಯಾವಾಗಿನಿಂದ ಜಾರಿಗೆ ತರುತ್ತೀರಾ? 8ನೇ ಅಕ್ಟೋಬರ್‌ನಲ್ಲಿ ಕೊಟ್ಟಂತಹ ಅವರ ಬೇಡಿಕೆಗಳು ಯಾವಾಗ ತಮ್ಮ ಗಮನಕ್ಕೆ ಬಂದವು?

ಶ್ರೀ ಕೆ.ಎಚ್. ರಂಗನಾಥ್.- ಸ್ವಾಮಿ, ಈಗಾಗಲೇ ಎಲ್ಲಾ ಹೇಳಿದ್ದೇನೆ. 8ನೇ ಜನವರಿಯಲ್ಲಿ ಬೇಡಿಕೆಗಳು ಬಂದವು. ಅವರೂ ಅದೇ ಕಾಲಕ್ಕೆ ಬಂದಿದ್ದರು. ಅವರ ಬೇಡಿಕೆಗಳನ್ನು ಪರಿಶೀಲನೆಗೆ ಕಳುಹಿಸಿದ್ದೇನೆ. ನವೆಂಬರ್ ಡಿಸೆಂಬರ್‌ನಲ್ಲಿ ಮತ್ತೆ ಪ್ರಸ್ತಾಪ ಮಾಡಿದ್ದೇನೆ. ಬೇರೆ ವಿಶ್ವವಿದ್ಯಾನಿಲಯಗಳವರು ಯು.ಜಿ.ಸಿ. ವೇತನ ಕೊಟ್ಟಿದ್ದಾರೆಯೇ ಎನ್ನುವ ಬಗ್ಗೆ ವಿಚಾರ ಮಾಡಬೇಕು. ಹಣಕಾಸಿನ ವಿಚಾರವಾಗಿರುವುದರಿಂದ ಸರ್ಕಾರ ತೀರ್ಮಾನ ಮಾಡುವ ಮುನ್ನ ಯೋಚನೆ ಮಾಡಬೇಕಾಗಿದೆ.

*****

# ಅಂಬೇಡ್ಕರ್ ಸ್ಥಾಪಿಸಿ ಹೊರಟ ಸರ್ವಧರ್ಮ ಸಂಸ್ಥೆ

**4 ಫೆಬ್ರವರಿ 1970**

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ).- ಸ್ವಾಮಿ, ನಾನು ಹೆಚ್ಚು ಸಮಯ ತೆಗೆದುಕೊಳ್ಳುವುದಿಲ್ಲ. ಮೂಲ ಪ್ರಶ್ನೆಯಲ್ಲಿ (ಡಿ) ಭಾಗದಲ್ಲಿ whether it is a fact that the Chairman, City Improvement Trust Board is trying to form sites in this land, the property of late Dr. Ambedkar ಎಂದು ಕೇಳಿದ್ದಕ್ಕೆ ಮಾನ್ಯ ಮಂತ್ರಿಗಳು 'Yes' ಎಂದು ಉತ್ತರ ಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಒಂದು ಅಂಶವನ್ನು ನಾನು ತಮ್ಮ ಮೂಲಕ ಸಭೆಯ ಮತ್ತು ಸರ್ಕಾರದ ಗಮನಕ್ಕೆ ತರುವುದಕ್ಕೆ ಇಚ್ಛೆಪಡುತ್ತೇನೆ. ದಿವಂಗತ ಡಾಕ್ಟರ್ ಅಂಬೇಡ್ಕರ್ ಅವರು 1951ರಲ್ಲಿ ಬೆಂಗಳೂರಿಗೆ ಬಂದಾಗ ಶ್ರೀಮಾನ್ ಜಯಚಾಮರಾಜ ಒಡೆಯರ್ ಅವರನ್ನು ಭೇಟಿಯಾಗಿ "ವಿಶ್ವದ ಎಲ್ಲ ಧರ್ಮಗಳನ್ನು ಬೋಧನೆ ಮಾಡತಕ್ಕ ಒಂದು ಸಂಸ್ಥೆಯನ್ನು ಸ್ಥಾಪನೆ ಮಾಡುತ್ತೇನೆ. ಅದರಲ್ಲಿ ಎಲ್ಲ ಧರ್ಮಗಳೂ ಬೋದಿಸಲ್ಪಡಬೇಕು ಹೆಚ್ಚಾಗಿ ಬೌದ್ಧ ಮತವನ್ನು ಪ್ರಚಾರ ಮಾಡಲು ಅವಕಾಶವಾಗತಕ್ಕ ಒಂದು ಸಂಸ್ಥೆಯನ್ನು ಮಾಡತಕ್ಕುದು ನನ್ನ ಉದ್ದೇಶ, ತಾವು ಜಮೀನನ್ನು ಕೊಡಬೇಕು" ಎಂದು ಕೇಳಿದಾಗ ಜಯಚಾಮರಾಜ ಒಡೆಯರ್ ಅವರು ಈ ಭೂಮಿಯನ್ನು ಡಾಕ್ಟರ್ ಬಾಬಾಸಾಹೇಬರಿಗೆ ಕೊಟ್ಟಿದ್ದಾರೆ. ಡಾಕ್ಟರ್ ಅಂಬೇಡ್ಕರ್ ಅವರು ಒಂದು ಸಂಸ್ಥೆಯನ್ನು ಮಾಡುವುದಕ್ಕೆ ಟ್ರಸ್ಟ್ ಮಾಡಬೇಕೆಂದು ಇದ್ದ ಸಮಯದಲ್ಲಿ ಅವರು ತೀರಿಹೋದರು. ಆದ್ದರಿಂದ ಅವರ ಉದ್ದೇಶ ಈಡೇರದೆ ಹಾಗೆಯೇ ಉಳಿದಿದೆ.

ಬೆಂಗಳೂರಿನಲ್ಲಿ ಒಂದು ಸಂಸ್ಥೆಯನ್ನು ಮಾಡಿ ಎಲ್ಲ ಧರ್ಮಗಳನ್ನೂ ಬೋದಿಸಲು ಅವಕಾಶ ಮಾಡಬೇಕು ಎನ್ನುವ ಉದ್ದೇಶ ಡಾಕ್ಟರ್ ಅಂಬೇಡ್ಕರ್ ಅವರದು ಏನಿತ್ತು. ಅದನ್ನು ನೆರವೇರಿಸಬೇಕು ಎನ್ನುವ ಅಭಿಪ್ರಾಯವನ್ನು ಬೊಂಬಾಯಿ ಪೀಪಲ್ಸ್ ಎಜುಕೇಷನ್ ಸೊಸೈಟಿಯವರು ಇಟ್ಟುಕೊಂಡಿದ್ದಾರೆ. ಆದರೆ ಟ್ರಸ್ಟ್ ಬೋರ್ಡಿನವರ ಕಣ್ಣು ಈ ಜಾಗದ ಮೇಲೆ ಏಕೆ ಬಿತ್ತೋ ಗೊತ್ತಿಲ್ಲ.

ಈ ಜಾಗ ಡಾಕ್ಟರ್ ಅಂಬೇಡ್ಕರ್ ಅವರಿಗಾಗಲೀ ಅಥವಾ ಅವರ ಮಕ್ಕಳಿಗಾಗಲೀ ಅಥವಾ ಮೈಸೂರು ರಾಜ್ಯದಲ್ಲಿರುವ ಹರಿಜನರಿಗಾಗಲೀ ಸೇರುವುದಿಲ್ಲ. ಇದು ಒಂದು ಸಂಸ್ಥೆಗೆ ಸೇರುವುದಾಗಿದೆ. ಆ ಸಂಸ್ಥೆಯಲ್ಲಿ ಎಲ್ಲ ಧರ್ಮಗಳನ್ನೂ ಬೋಧನೆ ಮಾಡತಕ್ಕ ವ್ಯವಸ್ಥೆಯಾಗುತ್ತದೆ. ಹೆಚ್ಚಾಗಿ ಬೌದ್ಧ ಮತವನ್ನು ಶಾಸ್ತ್ರೀಯವಾಗಿ ತಿಳಿಸತಕ್ಕ ವ್ಯವಸ್ಥೆ ಮಾಡಬೇಕು ಎನ್ನುವುದು ದಿವಂಗತ ಅಂಬೇಡ್ಕರ್ ಅವರ ಉದ್ದೇಶವಾಗಿತ್ತು. ಅದು ನೆರವೇರಬೇಕು

ಎನ್ನುವ ಉದ್ದೇಶವಿದ್ದರೆ ಟ್ರಸ್ಟ್ ಬೋರ್ಡಿನವರು ಅಕ್ವಿಜಿಷನ್ ಹಿಂದಕ್ಕೆ ತೆಗೆದುಕೊಂಡು ಜಮೀನನ್ನು ಆ ಸಂಸ್ಥೆಗೆ ವಾಪಸುಕೊಡುವುದಕ್ಕೆ ಸಾಧ್ಯವಿದೆ. ಟ್ರಸ್ಟ್ ಬೋರ್ಡ್ ಆಕ್ಟಿನ 18ನೇ ಸೆಕ್ಷನ್ ಪ್ರಕಾರ ಅಥವಾ ಟ್ರಸ್ಟ್ ಬೋರ್ಡ್ ಯಾವುದೇ ಕಾಲದಲ್ಲಿ ಅಕ್ವೈರ್ ಆಗಿರತಕ್ಕುದನ್ನು ವಿತ್‌ಡ್ರಾ ಮಾಡಿ ಪುನಃ ಅದರ ಮಾಲೀಕರಿಗೆ ಸ್ವಾಧೀನಕ್ಕೆ ಕೊಡಲು ಸಾಧ್ಯವಿದೆ.

ಮೇಲಾಗಿ ಮಾನ್ಯ ಅರಕೇರಿ ಅವರು ಹೇಳಿದ ಹಾಗೆ ಲೀಗಲ್ ಕಾಂಪ್ಲಿಕೇಷನ್ ಬಹಳವಿವೆ. ಯಾರಿಗೆ ನೋಟೀಸ್ ಸರ್ವ್ ಆಗಬೇಕಾಗಿತ್ತೋ ಅವರಿಗೆ ಆಗಿಲ್ಲ. ಮೈಸೂರು ರಾಜ್ಯದಲ್ಲಿರತಕ್ಕ 42 ಲಕ್ಷ ಹರಿಜನರಿಗೆ ಈ ಆಸ್ತಿ ಹೋಗುತ್ತದೆ ಎಂದು ಯಾರೂ ತಿಳಿಯಬಾರದು. ಇದು ಒಂದು ಸಂಸ್ಥೆಗೆ ಉಳಿಯುತ್ತದೆ. ಒಂದು ವೇಳೆ ಸರ್ಕಾರ ತಪ್ಪು ಮಾಡಿದ್ದರೆ ಅಪಖ್ಯಾತಿಗೆ ಗುರಿಯಾಗುತ್ತದೆ. ಯಾವುದೇ ಸಂಘ ಸಂಸ್ಥೆಗಳಿಗೆ ಸೇರಿದಂಥ ಜಾಗಗಳನ್ನು ಇಲ್ಲಿಯವರೆಗೂ ಕೂಡ ಸರ್ಕಾರ ಅಕ್ವೈರ್ ಮಾಡಿಕೊಂಡಿಲ್ಲ. ಶಂಕರಾಚಾರ್ಯರಿಗೆ ಸೇರಿದ್ದು, ಮುಸಲ್ಮಾನರಿಗೆ ಸೇರಿದ್ದು, ಕ್ರಿಶ್ಚಿಯನ್ನರಿಗೆ ಸೇರಿದ್ದು ಅಥವಾ ಬೇರೆ ಯಾರಿಗೆ ಸೇರಿದ್ದು ಆಗಲಿ, ಗೊತ್ತಿದ್ದೂ, ಗೊತ್ತಿದ್ದೂ ಬುದ್ಧಿಪೂರ್ವಕವಾಗಿ ಅಕ್ವೈರ್ ಮಾಡಿಕೊಂಡಿಲ್ಲ. ಒಂದು ವೇಳೆ ಈ ಜಮೀನನ್ನು ಅಕ್ವೈರ್ ಮಾಡುವುದಾದರೆ ಅಷ್ಟು ಚೆನ್ನಾಗಿ ಕಾಣುವುದಿಲ್ಲ.

ಇದು ಸರ್ಕಾರಕ್ಕೆ ಯಾವ ವಿಧವಾದ ಗೌರವವನ್ನೂ ತರತಕ್ಕುದಲ್ಲ. ಈಗಲಾದರೂ ಕಾಲ ಮಿಂಚಿ ಹೋಗಿಲ್ಲ. ದಯಮಾಡಿ ಸರ್ಕಾರದವರು, ಈ ವಿಚಾರದಲ್ಲಿ ಟ್ರಸ್ಟ್ ಬೋರ್ಡಿನವರು ಮಾಡಿರತಕ್ಕ ಅಕ್ವಿಜಿಷನ್‌ನ್ನು ವಿತ್‌ಡ್ರಾ ಮಾಡಿ ಜಮೀನನ್ನು ಈ ಒಂದು ಸಂಸ್ಥೆಯ ಸ್ವಾಧೀನಕ್ಕೆ ಕೊಡತಕ್ಕ ವ್ಯವಸ್ಥೆಯನ್ನು ಮಾಡಬೇಕು. ಈಗ ಏನೊಂದು ನೋವಾಗುವುದಕ್ಕೆ ಅವಕಾಶ ಮಾಡಿದ್ದಾರೆ ಆ ನೋವು ಆಗದ ಹಾಗೆ ಅದನ್ನು ನಿವಾರಣೆ ಮಾಡಬೇಕೆಂದು ನಾನು ಸರ್ಕಾರವನ್ನು ತಮ್ಮ ಮೂಲಕ ಕಳಕಳಿಯಿಂದ ಕೇಳಿಕೊಳ್ಳುತ್ತಿದ್ದೇನೆ. ಏಕೆಂದರೆ ನ್ಯಾಯ ಧರ್ಮ ಎಲ್ಲರಿಗೂ ಸಂಬಂಧಪಟ್ಟ ವಿಷಯ. ಇದು ಸಾರ್ವಜನಿಕರಿಗೆ ಸಂಬಂಧಪಟ್ಟ ವಿಷಯವಾಗಿದೆಯೇ ಹೊರತು ಕೇವಲ ಹರಿಜನ ಗಿರಿಜನರಿಗೆ ಸಂಬಂಧಪಟ್ಟದಲ್ಲ. ಇದು ಪ್ರಪಂಚದಲ್ಲಿಯ ಸರ್ವ ಧರ್ಮ ಸಂಸ್ಥೆಯಾಗಿದೆ ಎನ್ನುವುದು ಸ್ಪಷ್ಟವಾಗಿದೆ. ಅಕ್ವಾಯರ್ ಮಾಡುವುದಕ್ಕೆ ಸರಕಾರಕ್ಕೆ ಅಧಿಕಾರ ಇದೆ. ಆದರೆ ಈ ಸಂದರ್ಭದಲ್ಲಿ ಇದು ನ್ಯಾಯವೇ; ಧರ್ಮವೇ ? ಆಳುವ ಮಹಾ ಸ್ವಾಮಿಗಳವರ ದಾನಕ್ಕೂ ಕೂಡ ಅಪಚಾರ ಮಾಡಿದಂತಾಗುತ್ತದೆ. ಅಂಬೇಡ್ಕರ್ ಸಂಸ್ಥೆಗೆ ಅಗೌರವ ಸೂಚಿಸಿದಂತಾಗುತ್ತದೆ. ಆದುದರಿಂದ ಇದು ನ್ಯಾಯವಲ್ಲ ಧರ್ಮವಲ್ಲ. ಇದರಿಂದ ಸಾರ್ವಜನಿಕರು ಸಂತೋಷಪಡುವುದಿಲ್ಲ. ದಯವಿಟ್ಟು ವಿಶಾಲ ಹೃದಯದಿಂದ ಅಕ್ವಾಯರ್ ಮಾಡಿರುವುದು ರದ್ದುಪಡಿಸಿ ಈ ಸಂಸ್ಥೆಯನ್ನು ಉಳಿಸಬೇಕು. ಇದೊಂದು ಸಾರ್ವಜನಿಕ ಸಂಸ್ಥೆ ಎಂದು ಭಾವಿಸಿ ಸರ್ಕಾರದ ಪರವಾಗಿ ಮಾನ್ಯ ಮಂತ್ರಿಗಳು ಬಡವರಿಗೆ ಸಹಕಾರ ನೀಡುತ್ತೇವೆ, ಅವರ ಉದ್ಧಾರ ಆಗುವುದಕ್ಕೆ ಸಹಾಯ ಮಾಡುತ್ತೇವೆ ಎಂದು ಭರವಸೆ ಕೊಟ್ಟು ಸೂಕ್ತವಾದ ರೀತಿಯಲ್ಲಿ ವರ್ತಿಸಲಿ ಎಂದು ಕೇಳಿಕೊಳ್ಳುತ್ತೇನೆ.

*****

## ಜಾತಿವಾರು ಜನಗಣತಿ ಏಕೆ?

25 ಜುಲೈ 1972

**ಶ್ರೀ ಎಚ್.ಡಿ. ದೇವೇಗೌಡ.-** ಸಂಬಂಧಪಟ್ಟ ಮಂತ್ರಿಗಳೇ ಬಂದು ಉತ್ತರವನ್ನು ಹೇಳಬೇಕೆಂದು ಹವಣಿಕೆ ಇಲ್ಲ. ಈ ಪೋರ್ಟ್‌ಫೋಲಿಯೋ ಮಂತ್ರಿಗಳು ಯಾರಿದ್ದಾರೆ ಅವರ ನೇತೃತ್ವದಲ್ಲಿಯೇ ರೆಜಲ್ಯೂಷನ್ ಪಾಸ್ ಮಾಡಿದ್ದಾರೆ. ಕ್ಯಾಸ್ಟ್‌ವೈಜ್ ಸೆನ್ಸ್‌ಸ್ ಮಾಡಬೇಕೆಂದು ಪ್ರಧಾನ ಮಂತ್ರಿಗಳ ಸಮ್ಮುಖದಲ್ಲಿ ಮುಖ್ಯಮಂತ್ರಿಗಳ ಸಮ್ಮುಖದಲ್ಲಿಯೇ ಸದರನ್ ಜೋನಲ್ ಕಾನ್‌ಫೆರೆನ್ಸ್ ಲಾಲ್‌ಬಾಗ್‌ನಲ್ಲಿ ಆದಾಗ ಈ ರೆಜಲ್ಯೂಷನನ್ನು ಓದಿ ಕೇಳಿದ್ದಾರೆ.

**Sri H. SIDDAVEERAPPA.-** In that case your object is reserved.

**ಶ್ರೀ ಕೆ.ಎಚ್. ರಂಗನಾಥ್.-** ಅದು ಪಾರ್ಟಿ ಕಾನ್‌ಫೆರೆನ್ಸ್ ಅಲ್ಲ. We have not passed a resolution in our party. If the Leader of Opposition were to agree for a catseless society it is a different question. But if the Leader of Opposition wants to have a caste-ridden society then we may think of all these things ಹಳೆ ಮೈಸೂರಿನಲ್ಲಿ ಬ್ರಾಹ್ಮಣರನ್ನು ಬಿಟ್ಟು ಬಾಕಿ ಎಲ್ಲಾ ಬ್ಯಾಕ್‌ವರ್ಡ್ ಕ್ಲಾಸ್ ಎಂದು ಆಗಿತ್ತು. ಇದಕ್ಕೆ ಕಾರಣವಿಷ್ಟೆ, ಇದರಿಂದ ಅವರೆಲ್ಲರಿಗೂ ಕನ್‌ಸಿಷನ್ ಸಿಗುತ್ತಿತ್ತು. ಅದು ಸರ್ಕಾರದಿಂದ ಕೆಲವು ಫೆಸಿಲಿಟೀಸ್‌ನ್ನು ಪಡೆದುಕೊಳ್ಳುವುದಕ್ಕಾಗಿ ಈ ರೀತಿ ಮಾಡಿಕೊಂಡಿದ್ದು. ಇವತ್ತು ಸುಪ್ರೀಂ ಕೋರ್ಟಿನಲ್ಲಿ ತೀರ್ಮಾನ ಕೊಟ್ಟಿರುವ ಪ್ರಕಾರ ಕ್ಯಾಸ್ಟ್ ಕನ್‌ಸಿಡರ್ ಮಾಡಿ ಎಂದು ಹೇಳುತ್ತಾರೆ. ಇವತ್ತು ಅಗಸರ ಜಾತಿಯವನೊಬ್ಬನು ಎಂ.ಎ. ಪಾಸ್ ಮಾಡಿ ಬ್ಯಾರಿಸ್ಟರ್ ಆಗಿ ಬರುತ್ತಾನೆ. ಅವನನ್ನು ನಾವು ಅಗಸರ ಜಾತಿಯವನು ಎಂದು ಹೇಳಿದರೆ ಅವನ ಮನಸ್ಸಿಗೆ ವೇದನೆಯಾಗುತ್ತದೆ, ಇದರಿಂದ ತೊಂದರೆಯಾಗುತ್ತದೆ. ಈ ಒಂದು ಸೈಕಾಲಜಿಕಲ್ ತೊಂದರೆ ಏನು ಆಗುತ್ತದೆ ಅದನ್ನು ನಿವಾರಣೆ ಮಾಡುವುದಕ್ಕೋಸ್ಕರ ಬ್ಯಾಕ್‌ವರ್ಡ್ ಕ್ಲಾಸ್ ಎಂದು ಹೇಳಿ ಗೊತ್ತು ಮಾಡಿಕೊಂಡು ಅವನಿಗೆ ಸ್ವಲ್ಪ ಆದ್ಯತೆ ಕೊಟ್ಟು We have to see that he is also involved. ಸಮಾಜದಲ್ಲಿ, ಸರ್ಕಾರದಲ್ಲಿ ನನ್ನನ್ನು ಬಳಸಿಕೊಂಡಿರುತ್ತಾರೆ ಎನ್ನುವಂಥ ದೃಷ್ಟಿಯಿಂದ, ಹಾಗೂ sense of participation ದೃಷ್ಟಿಯಿಂದಲೂ ನಾವು ಇದನ್ನು ಮಾತನಾಡುತ್ತಿದ್ದೇವೆ. ಒಬ್ಬರ ಮೇಲೆ ಮತ್ತೊಬ್ಬರನ್ನು ಎತ್ತಿ ಕಟ್ಟಿ ಇವತ್ತು ಮಾತನಾಡುವಂಥ ಕಾಲವಲ್ಲ. ಮಾನ್ಯ ವಿರೋಧ ಪಕ್ಷದ ನಾಯಕರು ಕ್ಯಾಸ್ಟ್ ರಿಡ್ಡನ್ ಸೊಸೈಟಿ ಇರಬೇಕು ಎಂದು ಒಪ್ಪುವುದಾದರೆ We can think of all these things. ಇಲ್ಲ ಕ್ಯಾಸ್ಟ್ ಸೊಸೈಟಿ ಇರಬೇಕು ಎಂದು ಹೇಳುವುದಾದರೆ ಆ ವಿಷಯವೇ ಬೇರೆಯಾಗುತ್ತದೆ.

ಶ್ರೀ ಎಚ್.ಡಿ. ದೇವೇಗೌಡ.- ಮಾನ್ಯ ರಂಗನಾಥ್‌ರವರು ಏನು ಅಭಿಪ್ರಾಯವನ್ನು ವ್ಯಕ್ತಪಡಿಸಿದರು ಅದಕ್ಕೆ ನನ್ನ ಪೂರ್ಣ ಸಮ್ಮತಿ ಇದೆ. ಅದರ ಬಗ್ಗೆ ನನ್ನ ಅಭ್ಯಂತರವೇನೂ ಇಲ್ಲ. ಆದರೆ ಒಂದು ಮಾತು ಏನು ಹೇಳಿದರು. ಅದು ಸರಿಯಲ್ಲ. ಆ ಪಾರ್ಟಿಯಲ್ಲಿ ಪ್ರಧಾನ ಮಂತ್ರಿಗಳು, ಮುಖ್ಯ ಮಂತ್ರಿಗಳು ಭಾಗವಹಿಸಿದ್ದರು.

**Sri K.H. RANGANATH.-** That was not a conference organised by the Congress Party. ಕಾಂಗ್ರೆಸ್ ಪಾರ್ಟಿಯ ವತಿಯಿಂದ ನಡೆದಂಥ ಬ್ಯಾಕ್ ವರ್ಡ್ ಕ್ಲಾಸ್ ಮೀಟಿಂಗ್ ಅಲ್ಲ ಅದು. ನಾನು ಕಾಂಗ್ರೆಸ್ ಪಾರ್ಟಿಯ ಅಧ್ಯಕ್ಷನಾದುದರಿಂದ ಈ ಮಾತನ್ನು ಹೇಳುತ್ತಿದ್ದೇನೆ. ಅದರಲ್ಲಿ ಎಲ್ಲಾ ಪಾರ್ಟಿಯವರೂ ಇದ್ದರು. It was not a conference organised by the Congress party.

ಶ್ರೀ ಎಚ್.ಡಿ. ದೇವೇಗೌಡ.- ಯಾವ ಯಾವ ಪಾರ್ಟಿಗಳು ಇದ್ದವು ಎಂಬುದನ್ನು ಹೇಳಿ.

ಶ್ರೀ ಕೆ.ಎಚ್. ರಂಗನಾಥ್.- ಎಲ್ಲಾ ಜಾತಿಗೆ ಸೇರಿದಂಥವರೂ ಅಲ್ಲಿ ಸೇರಿದ್ದರೆಂದು ನಾನು ಕಾಂಗ್ರೆಸ್ ಅಧ್ಯಕ್ಷನಾಗಿ ಹೇಳುತ್ತಿದ್ದೇನೆ. ಅಲ್ಲಿಗೆ ಯಾರು ಯಾರು ಬಂದಿದ್ದರು ಎಂಬುದು ನನಗೆ ಸಂಬಂಧಪಟ್ಟಿಲ್ಲ. It is not a resolution passed by the Congress Party.

*****

## ಜಾತಿ ವರ್ಗರಹಿತ ಸಮಾಜ : ನನ್ನ ಕನಸು

1963

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರ): ಸ್ವಾಮಿ, ಈ ಸಭೆಯ ಮುಂದೆ ಮಾನ್ಯ ಸರ್ವೇಶ್ ಅವರು ತಂದಿರುವ ನಿರ್ಣಯವರನ್ನು ನಾನು ಅನುಮೋದಿಸುತ್ತಾ ನಾಲ್ಕು ಮಾತುಗಳನ್ನು ಹೇಳಬೇಕೆಂದು ಬಯಸುತ್ತೇನೆ.

ಈ ನಿರ್ಣಯ ಬರೀ ಹರಿಜನರ, ಗಿರಿಜನರ ಬಗ್ಗೆ ಅಲ್ಲ. ಈ ನಿರ್ಣಯ ಹಿಂದುಳಿದ ವರ್ಗಗಳ ಬಗ್ಗೆಯೂ ಇದೆ. ಆದ್ದರಿಂದ ಈ ಮಾನ್ಯ ಸಭೆ ಈ ವಿಷಯವನ್ನು ವಿಶೇಷ ಗಮನಕೊಟ್ಟು ವಿಚಾರ ಮಾಡಬೆಕೆಂದು ನಾನು ಬಯಸುತ್ತೇನೆ. ಏಕೆಂದರೆ ನಮ್ಮ ರಾಜ್ಯಾಂಗ ಬಂದಮೇಲೆ ಅದರ ಪ್ರಕಾರ ಸಾಧ್ಯವಾದಷ್ಟು ಮಟ್ಟಿಗೆ ಜಾತಿ ಪಂಥಗಳ ಮಾತನ್ನು ತೆಗೆದು Casteless Society ನಿರ್ಮಾಣ ಮಾಡಬೇಕು; ಆ ಒಂದು ಸದುದ್ದೇಶದಿಂದ ಕೆಲವು ಪ್ರಕರಣಗಳು ರಾಜ್ಯಾಂಗದಲ್ಲಿ ಇವೆ.

ಈ ವಿಷಯವು ರಾಜ್ಯಾಂಗದಲ್ಲಿರುವಾಗ ಅದರ ಹಿನ್ನೆಲೆಯನ್ನು ಕೂಡ ವಿಚಾರ ಮಾಡಬೇಕಾದಂಥ ಪರಿಸ್ಥಿತಿ ಇದೆ. ಏಕೆಂದರೆ ರಾಜ್ಯಾಂಗ ಬರುವುದಕ್ಕೆ ಮುಂಚೆ ಸಂಸ್ಥಾನಗಳಲ್ಲಿ

ಜಾತಿಗಳು, ಮತಗಳು ಇದ್ದುವು. ಕೆಲವು ವರ್ಷಗಳು, ಕಾರಣಾಂತರದಿಂದ ಸಮಾಜದ ಕೆಲವೇ ಜನಗಳಿಗೆ ಎಲ್ಲ ಅನುಕೂಲಗಳೂ ದೊರೆತು ಮುಂದುವರಿಯುವುದಕ್ಕೆ ಸಮಾಜದ ಕೆಲವೇ ಜನಗಳಿಗೆ ಎಲ್ಲ ಅನುಕೂಲಗಳೂ ದೊರೆತು ಮುಂದುವರಿಯುವುದಕ್ಕೆ ಅನುಕೂಲವಾದ ವಾತಾವರಣ ಕಲ್ಪನೆಯಾಗಿತ್ತು. ಆ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಇವತ್ತಿನ ದಿವಸ ರಾಜ್ಯಾಂಗ ಬಂದಿದೆ. ಇದು ಬಂದ ತಕ್ಷಣವೇ ಸಮಾಜದಲ್ಲಿದ್ದಂಥ ಎಲ್ಲ ವರ್ಗಗಳೂ ನಾಶವಾಗುತ್ತವೆ ಎಂದು ಭಾವನೆ ಮಾಡುವುದಾದರೆ ಅದು ಸ್ವಲ್ಪ ತಪ್ಪು ಆದೀತು. ಆದ್ದರಿಂದ ಇವತ್ತಿನ ದಿವಸ ವಸ್ತುಸ್ಥಿತಿಯನ್ನು ನೋಡಬೇಕಾದ ಪರಿಸ್ಥಿತಿ ಇದೆ. ಹಿಂದುಸ್ಥಾನದಲ್ಲಿ ಮತ್ತು ನಮ್ಮ ಮೈಸೂರು ಸಂಸ್ಥಾನದಲ್ಲಿ ಬರೀ ಹರಿಜನರೆ ಹಿಂದುಳಿದಿಲ್ಲ, ಅನೇಕ ಇತರೆ ವರ್ಗದವರೂ ಹಿಂದುಳಿದಿದ್ದಾರೆ. ಕಾರಣಾಂತರದಿಂದ ಕೆಲವು ಜಾತಿಯವರು ಮುಂದುವರಿಯಲು ಸಾಧ್ಯವಾದುದಕ್ಕೆ ಆ ಕಾಲವನ್ನು ಟೀಕೆ ಮಾಡುವುದಕ್ಕೆ ಬಯಸುವುದಿಲ್ಲ. ಪ್ರಜಾಪ್ರಭುತ್ವದಲ್ಲಿ ಪ್ರತಿಯೊಬ್ಬ ಪ್ರಜೆಗೂ ಮುಂದುವರಿಯಲು ಅವಕಾಶ ದೊರೆಯಬೇಕು. ನಾನು ಜಾತಿ, ಮತ ಹೆಚ್ಚಾಗಬೇಕು, ಜಾತಿ ಎನ್ನತಕ್ಕದ್ದು ಇರಬೇಕು ಎಂದು ಹೇಳುವ ಮನುಷ್ಯನಲ್ಲ. ಜಾತಿರಹಿತ ಸಮಾಜವಾಗಬೇಕು ಎನ್ನುವುದರಲ್ಲಿ ನಾನು ಮೊದಲನೆಯವನು. ಮೊದಲಿನಿಂದಲೂ ಪ್ರತಿಯೊಬ್ಬನಿಗೂ ಮುಂದುವರಿಯುವುದಕ್ಕೆ ಒಂದು ಅವಕಾಶವನ್ನು ಕಲ್ಪಿಸಿಕೊಡದೆ ಯಾರೂ ಮುಂದುವರಿಯುವುದಕ್ಕೆ ಸಾಧ್ಯವಿಲ್ಲ. ಬ್ರಾಹ್ಮಣರು, ಲಿಂಗಾಯತರು, ಸಾಧ್ಯವಾದಷ್ಟು ಮುಂದುವರಿದಿದ್ದಾರೆ. ನನಗೆ ಅವರ ಬಗ್ಗೆ ಏನೂ ದ್ವೇಷವಿಲ್ಲ. ಆದರೆ ಬಾಕಿಯ ಜಾತಿಗಳವರು ಎಂದರೆ ನಾಯಕರು, ಗೊಲ್ಲರು, ಕುರುಬರು ಇಂಥ ಜನಗಳನ್ನು ಹಳ್ಳಿಗಳಲ್ಲಿ ನೋಡುವುದಾದರೆ ಅವರ ಸಾಂಸ್ಕೃತಿಕ ಸ್ಥಿತಿಯಲ್ಲಾಗಲಿ, ಆರ್ಥಿಕ ಸ್ಥಿತಿಯಲ್ಲಾಗಲಿ ಹರಿಜನರಿಗೂ ಅವರಿಗೂ ಯಾವ ವಿಧವಾದ ಭೇದವೂ ಇಲ್ಲ. ಹರಿಜನರಿಗೆ ಅಸ್ಪೃಶ್ಯರು ಎನ್ನತಕ್ಕ ಒಂದು ಸೋಂಕು ಇರಬಹುದೇ ವಿನಾ ಅವರ ಸಾಂಸ್ಕೃತಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ನೋಡುವುದಾದರೆ ಅದರಲ್ಲಿ ಯಾವ ವಿಧವಾದ ಭೇದವೂ ಕಾಣುವುದಿಲ್ಲ. ಅಂಥ ವಸ್ತುಸ್ಥಿತಿಯನ್ನು ಗಣನೆಗೆ ತೆಗೆದುಕೊಂಡು ರಾಜ್ಯಾಂಗದ 16(4)ನೆಯ ವಿಧಿಯಲ್ಲಿ ಹೀಗೆ ಹೇಳುತ್ತಾರೆ:

"Nothing in this article shall prevent the State Government from making any provision for reservation of appointments or posts in favour of any backward class of citizens; which in the opinion of the State, is not adequately represented in the service under the State."

ಈ ಪ್ರಶ್ನೆ ಬರೀ ಹರಿಜನ ಗಿರಿಜನರ ಪ್ರಶ್ನೆಯಿಲ್ಲ. ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಯಾವ ಯಾವ ಜಾತಿಗಳವರು ಎಂದರೆ ಯಾವ ಯಾವ ಪ್ರಜೆ ಎಷ್ಟರ ಮಟ್ಟಿಗೆ

ಹಿಂದುಳಿದಿದ್ದಾನೆ ಎನ್ನತಕ್ಕ ವಾಸ್ತವಾಂಶವನ್ನು ಗಣನೆಗೆ ತೆಗೆದುಕೊಂಡು ಅವನಿಗೆ ಮುಂದುವರೆಯುವುದಕ್ಕೆ ಅವಕಾಶವನ್ನು ಕಲ್ಪಿಸಿ ಕೊಡುವುದಕ್ಕೋಸ್ಕರವೇ ರಾಜ್ಯಾಂಗದ ಆರ್ಟಿಕಲ್ 16(4) ರಲ್ಲಿ ಈ ಅವಕಾಶವನ್ನು ಒದಗಿಸಿದೆ. ಇದನ್ನು ನಾವು ವಿಚಾರ ಮಾಡೋಣ. ಹರಿಜನರಲ್ಲಿ (Scheduled Castes) ಅಂಕಿ ಅಂಶಗಳ ಪ್ರಕಾರ ಅಕ್ಷರಸ್ಥರ ಸಂಖ್ಯೆ ಇವತ್ತಿನ ದಿವಸ ಶೇಕಡ 4.6 ಇದೆ, Scheduled Tribes ನಲ್ಲಿ ಶೇಕಡ 0.2 ಇದೆ. ಇದು ಒಂದು ಪರಿಸ್ಥಿತಿ. ಇನ್ನು ಹರಿಜನರು ಗಿರಿಜನರನ್ನು ಬಿಟ್ಟು ಬೇರೆ ಜನಾಂಗಗಳಲ್ಲಿ ನೋಡಿದರೆ, ನಾನು ಮೊದಲೇ ಹೇಳಿದಂತ ಕೋಮುಗಳಲ್ಲಿ ಯಾವ ವಸ್ತು ಸ್ಥಿತಿ ಇದೆ ಎನ್ನತಕ್ಕ ಅಂಕಿ ಅಂಶಗಳನ್ನು ನೋಡಿದರೆ ಅವರಿಗೆ ಸಂಬಂಧಪಟ್ಟ ಅಂಕಿ ಅಂಶಗಳು ಇನ್ನೂ ತಿಳಿಯದೆ ಇವೆ. ಇಂಥ ಪರಿಸ್ಥಿತಿ ಇರುವಾಗ ಎಲ್ಲ ಪ್ರಜೆಗಳಿಗೂ ಮುಂದುವರಿಯಲು ಅವಕಾಶ ಕಲ್ಪಿಸಿ ಕೊಡುತ್ತೇವೆಂದು ಬಾಯಲ್ಲಿ ಹೇಳಿದ ಮಾತ್ರಕ್ಕೆ ಸಾಧ್ಯವಾಗುವುದಿಲ್ಲ. ಅವರಿಗೆ ಸಂಬಂಧಪಟ್ಟ ಅಂಕಿ ಅಂಶಗಳನ್ನೆಲ್ಲಾ ಶೇಖರಣೆ ಮಾಡಿ ಪ್ರತಿಯೊಬ್ಬ ಪ್ರಜೆಗೂ ಯಾವ ರೀತಿ ಮುಂದುವರಿಯುವುದಕ್ಕೆ ಅವಕಾಶ ಮಾಡಿಕೊಡಬೇಕು ಎನ್ನತಕ್ಕದ್ದನ್ನು ಮುಂದಿಟ್ಟುಕೊಂಡು ಅದನ್ನು ಕಾರ್ಯರೂಪಕ್ಕೆ ತಂದರೆ ಮಾತ್ರ ಎಲ್ಲ ಪ್ರಜೆಗಳೂ ಉಳಿಯಲಿಕ್ಕೆ ಸಾಧ್ಯ. ಅದನ್ನು ಬಿಟ್ಟು ಹೇಳುವುದೊಂದು ಮಾಡುವುದೊಂದು ಆದರೆ ನಮ್ಮ ಗುರಿ ಏನಿದೆ casteless and classless society ಮಾಡಬೇಕು ಎನ್ನುವುದು ಅದು ನಿಜವಾಗಿಯೂ ಸಾಧ್ಯವಾಗುವುದಿಲ್ಲ. ಇದನ್ನು ಮಾಡದೆ ಹೋದರೆ ಅದರ ದುಷ್ಪರಿಣಾಮವೇನೆಂಬುದನ್ನು ನಾವು ಗಂಭೀರವಾಗಿ ವಿಚಾರ ಮಾಡತಕ್ಕ ಪರಿಸ್ಥಿತಿ ಇದೆ. ನಾವು ಕಾನೂನಿನಲ್ಲಿ ಮಾಡಿದ್ದೇವೆಂದು ಹೇಳಿದ ಮಾತ್ರಕ್ಕೆ ಏನೂ ಪ್ರಯೋಜನವಿಲ್ಲ. ನಾವು ಒಪ್ಪಿಕೊಂಡಿರುವಂಥ ಒಂದು ತತ್ವವನ್ನು ಅಭ್ಯಾಸ ಮಾಡದೆ ಹೋದರೆ, ಅದರ ನಿವಾರಣೆಗೆ ನಿಷ್ಠೆಯಿಂದ ಕಾರ್ಯಕ್ರಮವನ್ನು ಹಾಕಿಕೊಳ್ಳದೆ ಹೋದರೆ, ಹಾಕಿಕೊಂಡ ಕಾರ್ಯಕ್ರಮವನ್ನು ನಿಷ್ಠೆಯಿಂದ ಆಚರಿಸದೆ ಹೋದರೆ ಅದರ ದುಷ್ಪರಿಣಾಮವೇನಾಗಬಹುದೋ ಅದಕ್ಕೆ ನಾವೆಲ್ಲರೂ ಹೊಣೆಯಾಗಬೇಕು ಎಂದು ನಾನು ಹೇಳಬಯಸುತ್ತೇನೆ.

ಮುಂದೆ ಮತ್ತೊಂದು ಪ್ರಶ್ನೆ ಉದ್ಭವಿಸುತ್ತದೆ; ಸರ್ಕಾರದವರು ಕೆಲಸಗಳಿಗೆ ರಿಸರ್ವೇಷನ್ ಇಟ್ಟ ಮಾತ್ರಕ್ಕೆ ಅವರು ಮುಂದೆ ಬರುವುದಕ್ಕೆ ಸಾಧ್ಯವೇ ಎಂದು. ಅದು ಜನಾಂಗವನ್ನು, ಪ್ರತಿಯೊಬ್ಬ ಪ್ರಜೆಯನ್ನು, ಮುಂದುವರಿಸುವ ಕ್ರಮದಲ್ಲಿ ಒಂದು ಕ್ರಮವೆಂದು ನಾನು ಭಾವಿಸುತ್ತೇನೆ. ವಿದ್ಯಾವಂತನಾಗಬೇಕು, ವಿದ್ಯಾವಂತನಾದವನು ಸರ್ಕಾರಿ ಕ್ಷೇತ್ರದಲ್ಲಿ ಆಗಲಿ, ಖಾಸಗಿ ಕ್ಷೇತ್ರದಲ್ಲಿ ಆಗಲಿ ಪಾತ್ರ ವಹಿಸುವುದಕ್ಕೆ ಅವಕಾಶವಾಗಲೇಬೇಕು. ಈ ಒಂದು ದೃಷ್ಟಿಯಿಂದಲೇ ಸುಪ್ರೀಂ ಕೋರ್ಟಿನವರು ಏನೊಂದು ತೀರ್ಪು ಕೊಟ್ಟಿದ್ದಾರೆಯೋ

ಅದರಲ್ಲಿ ಕೆಲವು ಅಂಶಗಳನ್ನು ಗಣನೆಗೆ ತೆಗೆದುಕೊಂಡಿದ್ದಾರೆ. ಪ್ಯಾರಾ 24 ರಲ್ಲಿ ಅವರು ಹೀಗೆ ಹೇಳುತ್ತಾರೆ:

Supreme Court Judgement:

para 24 "Therefore we are disposed to take the view that the power of reservation which is conferred on the States under article 16(4) of the Constitution can be exercised in appropriate cases not only by providing for reservation of appointments but also by providing for reservation of selection posts. This construction in our opinion would serve to give effect to the intention of the constitution-makers to make adequate safeguards for the advancement of the backward class and sections for which adequate representation is not afforded in the services."

ಮುಂದೆ ಪ್ಯಾರಾ 26 ರಲ್ಲಿ ಅದರ ಆಗು ಹೋಗುಗಳನ್ನು ಕೂಡ ವಿಚಾರ ಮಾಡಿದ್ದಾರೆ.

"any reservation of appointment of posts may result in the impairment of efficiency. But the risk involved in securing efficiency of administration must also be borne in mind when any State sets about making provision for the reservation of appointments or posts."

ಇಂಥ ಒಂದು ಪರಿಸ್ಥಿತಿ ಇದೆ; ದಕ್ಷತೆಗೆ ಭಂಗ ಬರತಕ್ಕ ಪರಿಸ್ಥಿತಿ ಇದೆ. ಆದರೆ ದಕ್ಷತೆಗೆ ಭಂಗ ಬರಬಾರದು ಎನ್ನತಕ್ಕ ಒಂದೇ ಉದ್ದೇಶದಿಂದ ಸಾವಿರಾರು ಜನಗಳನ್ನು ಮುಂದುವರಿಯುವುದಕ್ಕೆ ಅವಕಾಶ ಮಾಡಿ ಕೊಡದೆ ಹೋದರೆ ಅದು ಒಳ್ಳೆಯ ಕ್ರಮವಾಗಲಾರದು. ಆ ಒಂದು ದೃಷ್ಟಿಯಿಂದಲೇ ದಕ್ಷತೆಗೆ ಸಲ್ಪ ಭಂಗ ಬಂದಾಗ್ಯೂ ಎಲ್ಲ ಪ್ರಜೆಗಳಿಗೂ ಮುಂದುವರಿಯುವುದಕ್ಕೆ ಅವಕಾಶ ಮಾಡಿಕೊಡಬೇಕು ಎನ್ನುವ ಸದುದ್ದೇಶದಿಂದಲೇ ರಾಜ್ಯಾಂಗವನ್ನು ನಿರ್ಮಾಣ ಮಾಡಿದಂಥ ಜನ ರಾಜ್ಯಾಂಗವನ್ನು ರೂಪಿಸುವುದರಲ್ಲಿ ಹೆಚ್ಚು ವಿಚಾರ ಮಾಡಿ ಕೊನೆಗೆ ಆ ನಿರ್ಮಾಣಕ್ಕೆ ಬಂದು 16(4)ನೆಯ ವಿಧಿಯಲ್ಲಿ ಈ ವಿಷಯವನ್ನು ಸೇರಿಸಿದ್ದಾರೆ. ಇವತ್ತಿನ ದಿವಸ ನಮ್ಮ ಪರಿಸ್ಥಿತಿ ಏನಾಗಿದೆ ಎಂದರೆ ನಮ್ಮ ಎಲ್ಲ ಕಾರ್ಯಕ್ರಮಗಳೂ ವಿಫಲವಾಗುವುದಕ್ಕೆ ಕಾರಣ ಕೆಲವಾರು ಜನ, ಕೆಲವಾರು ಅಧಿಕಾರಿಗಳು, ಆ ಅಲ್ಪ ಸಂಖ್ಯೆಯ ಜನಕ್ಕೆ, ನನ್ನ ದೃಷ್ಟಿಯಲ್ಲಿ ಬಹಳ ಅಲ್ಪಸಂಖ್ಯರು.

ಅವರಿಗೆ ದೇಶದ ಸಮಗ್ರ ಹಿತದೃಷ್ಟಿಯಾಗಲಿ, ಎಲ್ಲ ಪ್ರಜೆಗಳ ಹಿತದೃಷ್ಟಿಯಾಗಲಿ ಗಮನದಲ್ಲಿಲ್ಲ. ಅವರ ದೃಷ್ಟಿ ಬಾವಿಯ ಕಪ್ಪೆಯ ದೃಷ್ಟಿಯಂತೆ ಇದೆ. ಅವರದು ಎಲ್ಲವೂ ತಮ್ಮ ಮನಾಪಲಿಯಾಗಿರಬೇಕು ಎನ್ನುವ ದೃಷ್ಟಿ. ದೇಶದ ಸಮಗ್ರ ದೃಷ್ಟಿಯಿಂದ ಇದು ಯೋಗ್ಯವಾದುದಲ್ಲ. ಅವರು ಇವತ್ತಿನ ದಿವಸ ಇದನ್ನು ಬಿಡಬೇಕು. ಅದನ್ನು ಬಿಟ್ಟರೆ ಮಾತ್ರ ದೇಶದ ಕಲ್ಯಾಣವಾದೀತು, ಇಲ್ಲದಿದ್ದರೆ ಇಲ್ಲ. ಸ್ವಾತಂತ್ರ್ಯ ಬರುವ ಪೂರ್ವದಲ್ಲಿ ಇವರು ಅಧಿಕಾರಿಗಳಾಗಿದ್ದರು. ಪ್ರಜೆಗಳ ಮೇಲೆ ಅಧಿಕಾರ ಮಾಡಬೇಕೆಂಬ ಮನೋಭಾವನೆ ಅವರಿಗಿದೆ. ಸ್ವಾತಂತ್ರ್ಯ ಹೋರಾಟ ಕೆಲವು ಜನರಿಗಾಗಿ ನಡೆಯಲಿಲ್ಲ. ದೇಶದ ಎಲ್ಲಾ ಜನರಿಗಾಗಿ ಹೋರಾಟ ನಡೆಯಿತು. ಈ ದೃಷ್ಟಿಯಿಂದ ಬಹಳ ವಿಶಾಲ ಮನೋಭಾವನೆಯಿಂದ ಇದನ್ನು ನೋಡಬೇಕು. ಇದರಲ್ಲಿ ಸಂಕುಚಿತ ಮನೋಭಾವನೆ ಇರಕೂಡದು. ಹರಿಜನ ಗಿರಿ ಜನರ ಸಂಬಂಧದಲ್ಲಿ ಒಂದು ಆರ್ಡರ್ ಬಂದಿದೆ. ವಾರ್ಷಿಕ ಉತ್ಪತ್ತಿ 1,200 ರೂಪಾಯಿ ಮೇಲೆ ಇದ್ದವರು ಮುಂದುವರಿದವರು, 1,200 ರೂಪಾಯಿ ಕೆಳಗೆ ಇರತಕ್ಕವರು ಹಿಂದುಳಿದವರು ಎಂದು ಇದೆ. ಇದು ಸರಿಯಾದುದಲ್ಲ. ಇದು ಬರೀ ಹರಿಜನ ಗಿರಿಜನರ ಪ್ರಶ್ನೆಯಲ್ಲ. ಸಾವಿರಾರು ವರ್ಷಗಳಿಂದ ಯಾವುದೇ ವಿಧವಾದ ಅವಕಾಶ ದೊರೆಯದೆ ಈ ರೀತಿಯಾಗಿ ಈ ಜನ ಹಿಂದುಳಿದಿದ್ದಾರೆ ಎಂಬುದನ್ನು ಗಮನಿಸಬೇಕು. ಕುರುಬರು, ಬೇಡರು ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿದ್ದಾರೆ. ಈ ಹಿಂದುಳಿದವರಲ್ಲಿ ವಿದ್ಯಾವಂತರ ಸಂಖ್ಯೆ ತೀರ ಕಡಿಮೆಯಾಗಿದೆ. ಕೆಲವರು ಖಾಸಗೀ ಪ್ರಯತ್ನದಿಂದ ಅವಕಾಶ ದೊರಕಿಸಿಕೊಂಡು ಮುಂದೆ ಬಂದಂಥವರಿಗೆ ಪ್ರೋತ್ಸಾಹಕೊಡದೆ ಹೋದರೆ ಏನು ದುಷ್ಪರಿಣಾಮ ಉಂಟಾಗುತ್ತದೆ ಎಂಬುದನ್ನು ವಿಚಾರ ಮಾಡತಕ್ಕ ಪರಿಸ್ಥಿತಿ ಬಂದಿದೆ. ಆದುದರಿಂದ ಈ ವಿಷಯವನ್ನು ಸಂಕುಚಿತ ದೃಷ್ಟಿಯಿಂದ ನೋಡಬಾರದು. ಶೇಕಡ 70 ಅಥವಾ 80 ರಷ್ಟು ಜನ ಹಿಂದುಳಿದ ವರ್ಗಕ್ಕೆ ಸೇರಿದವರು. ಸರಕಾರಿ ನೌಕರಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಮುಂದುವರಿದ ಜನ ಇದ್ದಾರೆ, ಆದುದರಿಂದ ಹಿಂದುಳಿದ ವರ್ಗದವರ ಬಗ್ಗೆ ಸರಕಾರಿ ಹುದ್ದೆಯಲ್ಲಿ ಸೇರುವಾಗ ಪ್ರಮೋಷನ್ ಕೊಡುವಾಗ ಹೆಚ್ಚಿನ ಆದ್ಯತೆ ಕೊಡಬೇಕಾದುದು ಅಗತ್ಯ. ಮತ್ತು ಅವರ ಉತ್ಸಾಹಕ್ಕೆ ಕುಂದು ಬಾರದ ಹಾಗೆ ಪ್ರೋತ್ಸಾಹ ಕೊಡಬೇಕು. ಈ ಉದ್ದೇಶದಿಂದ ಈ ನಿರ್ಣಯ ಬಂದಿದೆ. ಬರೀ ಆರ್ಥಿಕ ದೃಷ್ಟಿಯಿಂದ ಕೆಲವರು ಮುಂದುವರಿದರೆ ಅಂಥವರು ಪೂರ್ತಿಯಾಗಿ ಮುಂದುವರಿದವರು ಎಂದು ಹೇಳಲು ಶಕ್ಯವಿಲ್ಲ. ಅವರು ಸಾಂಸ್ಕೃತಿಕ ದೃಷ್ಟಿಯಿಂದಲೂ ಮುಂದುವರಿಯಬೇಕು. ಇಲ್ಲದಿದ್ದರೆ ನಮ್ಮ ಮುಂದಿರುವ ದುಷ್ಟಶಕ್ತಿಯಾದ ಕಮ್ಯುನಿಜಂಗೆ ಬಲಿಯಾಗುತ್ತಾರೆಂಬುದನ್ನು ವಿಚಾರ ಮಾಡಬೇಕು. ಅವರ ಸ್ಲೋಗನ್ನಿಗೆ ಬಲಿಯಾಗುತ್ತಾರೆ.

*****

# ಪುರಿ ಶಂಕರಾಚಾರ್ಯ ಮತ್ತು ಅಸ್ಪೃಶ್ಯತೆ

1969

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ): ಸ್ವಾಮಿ, ಪುರಿ ಶಂಕರಾಚಾರ್ಯರು ಹೇಳಿರುವ ವಿಚಾರಗಳು ಪತ್ರಿಕೆಗಳಲ್ಲಿ ಬಂದಿದೆ. ಅವರು ಒಂದು ಪತ್ರಿಕಾ ಸಮ್ಮೇಳನ ಕರೆದು ಒಂದು ಹೇಳಿಕೆ ಕೊಟ್ಟು ಒಂದು ಎಕ್ಸ್‌ಟ್ರೀಮ್ ಸ್ಟಾಂಡ್ ತೆಗೆದುಕೊಂಡಿದ್ದಾರೆ. ಏನು ಹೇಳಬೇಕು, ಏನು ಹೇಳಬಾರದು ಎನ್ನುವುದು ಅವರ ಹಕ್ಕು. ಅವರ ಬಾಯಿ ಮುಚ್ಚಿಸತಕ್ಕ ಅಧಿಕಾರ ನಮಗೆ ಇಲ್ಲ. ಸರ್ಕಾರ ಈ ದಿವಸ ನನ್ನನ್ನು ನೇಣು ಹಾಕಬಹುದು ಎನ್ನುವ ಮಾತನ್ನು ಅವರು ನಮಗೆ ಏಕೆ ಹೇಳಿದ್ದಾರೆ ಎನ್ನುವುದರ ಅರ್ಥವನ್ನು ಗಮನಿಸುವುದಾದರೆ, ಭಾರತದಲ್ಲಿ ಇಂಥ ಒಂದು ನಿಲುವನ್ನು ಒಬ್ಬ ದೊಡ್ಡ ಅಥವಾ ಸಣ್ಣ ವ್ಯಕ್ತಿ ತೆಗೆದುಕೊಂಡರೆ, ಜಾತಿ ಜಾತಿಗಳಲ್ಲಿ ವೈಷಮ್ಯ ಪ್ರತಿಪಾದನೆ ಮಾಡಿದರೂ ಕೂಡ ಯಾವ ಸರ್ಕಾರ ನನ್ನ ಮೇಲೆ ಕ್ರಮ ತೆಗೆದುಕೊಳ್ಳುವುದಿಲ್ಲ, ಎನ್ನುವ ದಿಟ್ಟತನದಿಂದ ಅವರು ಆ ಹೇಳಿಕೆ ಕೊಟ್ಟಿರಬಹುದು, ಎಂದು ನಾನು ಭಾವಿಸುತ್ತೇನೆ. ಆದರೆ ಅವರು ನಾನು ಸೇರಿರತಕ್ಕ ವರ್ಗವನ್ನು ಅಸ್ಪೃಶ್ಯರು ಎಂದು ಕರೆದಾಗ, ಅಸ್ಪೃಶ್ಯನೆಂದು ನಾನು ತಿಳಿದುಕೊಳ್ಳುವುದಿಲ್ಲ. ಅವರು ಆ ರೀತಿ ಪ್ರತಿಪಾದನೆ ಮಾಡಿರುವುದಕ್ಕೆ ಹಿಂದೂ ಧರ್ಮ ಶಾಸ್ತ್ರದಲ್ಲಿ ಕೆಲವು ಉಲ್ಲೇಖಗಳಿವೆ, ಆ ಆಧಾರದ ಮೇಲೆ ಮಾತನಾಡುತ್ತಿದ್ದೇನೆಂದು ಅವರು ಹೇಳುತ್ತಾರೆ. ಅಸ್ಪೃಶ್ಯತಾ ವಿಚಾರಣಾ ಕಾನೂನು ಪ್ರಕಾರ ಅಬೆಟಿಂಗ್ ಎಂದು ಏನು ಹೇಳುತ್ತಾರೆ, ಪ್ರತಿಪಾದನೆ ಮಾಡುವ, ಅದಕ್ಕೆ ಪುಷ್ಟೀಕರಣ ಮಾಡುವ ಸಾಹಿತ್ಯ ವಗೈರೆ ಎಲ್ಲವೂ ಏನಿದೆ ಅವು ಕಾನೂನು ಬದ್ಧವಾಗಿ ಬಹಿಷ್ಕಾರಕ್ಕೆ ಯೋಗ್ಯವಾದ ವಸ್ತುಗಳು. ನಾನು ತಮ್ಮ ಮೂಲಕ ಸರ್ಕಾರವನ್ನು ಪ್ರಾರ್ಥನೆ ಮಾಡಿಕೊಳ್ಳುವುದು ಏನೆಂದರೆ ಹಿಂದೂ ಧರ್ಮದ ಎಲ್ಲ ಶಾಸ್ತ್ರಗಳ ಪರಿಣತನೂ ನಾನಲ್ಲ. ಶಂಕರಾಚಾರ್ಯರು ಒಂದು ವೇಳೆ ಹಾಗೆ ಭಾವಿಸಿದ್ದರೆ ಅದೂ ತಪ್ಪು ಎಂದು ನನ್ನ ಭಾವನೆ. ಒಂದು ವೇಳೆ ಅದು ಇದ್ದು, ಅವರು ಏನು ಉಲ್ಲೇಖ ಮಾಡಿರುತ್ತಾರೆ ಅದನ್ನು ಅವರು ಪುಷ್ಟೀಕರಿಸುವುದಾದರೆ, ಅದು ನಿಜವಾಗಿದ್ದರೆ, ಸರ್ಕಾರ ಅದನ್ನು ಪತ್ತೆ ಹಚ್ಚಿ, ಯಾವ ಬಗೆಯ ಆಧಾರವಿದೆ ಎನ್ನುವುದನ್ನು ಸಾರ್ವಜನಿಕರ ಮುಂದೆ ಇಟ್ಟು ಒಂದು ವೇಳೆ ಅಸ್ಪೃಶ್ಯತೆಯನ್ನು ಪುಷ್ಟೀಕರಿಸುವುದಾದರೆ ಅದನ್ನು ದೇಶಾದ್ಯಂತ ಬ್ಯಾನ್ ಮಾಡುವುದಕ್ಕೆ ಸಲಹೆ ಮಾಡಬೇಕೆಂದು ತಮ್ಮ ಮೂಲಕ ಕೇಳಿಕೊಳ್ಳುತ್ತೇನೆ.

*****

# ಕತ್ತೆ ನಾಯಿಗೆ ಜನಿವಾರ

**1984**

ಶ್ರೀ ಟಿ.ಎಂ. ಮಂಜುನಾಥ್: ಕನ್ನಡ ಪ್ರಭದಲ್ಲಿ ಒಂದು ಸುದ್ದಿ ವರದಿಯಾಗಿದೆ. ಮಾನ್ಯ ಮಂತ್ರಿಗಳಾದ ರಂಗನಾಥ್‌ರವರು ಮಂಗಳೂರಿಗೆ ಹೋದಾಗ ಅಲ್ಲಿಯ ಜನಸಂಘದವರು ಅವರ ಕಾರಿನ ಮೇಲೆ ಕಲ್ಲನ್ನು ಒಗೆದರು ಎಂದು ಸುದ್ದಿ ಬಂದಿದೆ. ಅದರ ವಿರುದ್ಧ ಒಂದು ಪ್ರತೀಕಾರವನ್ನು ತೆಗೆದುಕೊಳ್ಳುವುದಕ್ಕೋಸ್ಕರ ಆಡಳಿತ ಕಾಂಗ್ರೆಸ್ಸಿನ ದಲಿತ ವರ್ಗದ ಯುವಕ ಮುಖಂಡರು ಕತ್ತೆಗಳಿಗೆ, ನಾಯಿಗಳಿಗೆ ಜನಿವಾರವನ್ನು ಹಾಕಿ ಬ್ರಾಹ್ಮಣರ ಜಾತಿಗೆ ಅವಮಾನ ಮಾಡಿ ಪ್ರತಿಕಾರವನ್ನು ಮಾಡುತ್ತೇವೆಂದು ಹೇಳಬೇಕಾದರೆ ಯಾವ ಒಂದು ಪರಿಸ್ಥಿತಿಯಲ್ಲಿ ಈ ಒಂದು ಜಾತಿ ಪಿಡುಗು ಎಷ್ಟರಮಟ್ಟಿಗೆ ಸಮಾಜದಲ್ಲಿ ಹರಡುತ್ತಿದೆ ಎನ್ನುವುದನ್ನು ನಾವು ನೋಡಬಹುದು.

ಶ್ರೀ ಕೆ.ಎಚ್. ರಂಗನಾಥ್: ಮಾನ್ಯ ಸದಸ್ಯರು ಯೀಲ್ಡ್ ಆಗುವುದಾದರೆ, ಒಂದು ಮಾತನ್ನು ಹೇಳುತ್ತೇನೆ. ನಮ್ಮ ಪಾರ್ಟಿಯಿಂದ ಈ ತರಹ ಕತ್ತೆ, ನಾಯಿಗಳಿಗೆ ಜನಿವಾರವನ್ನು ಹಾಕುತ್ತೇವೆಂದು ಹೇಳಿಲ್ಲ.

ಶ್ರೀ ಟಿ.ಎಂ. ಮಂಜುನಾಥ್ : ನಿಮ್ಮ ಪಕ್ಷದ್ದು ಅಂತ ಹೇಳಲಿಲ್ಲ. ಕಾಂಗ್ರೆಸ್‌ನ ದಲಿತ ವರ್ಗದ ಯುವ ನಾಯಕರು...........

ಶ್ರೀ ಕೆ.ಎಚ್. ರಂಗನಾಥ್: ಆ ರೀತಿ ಯಾರೋ ಬರೆದುಕೊಳ್ಳುತ್ತಾರೆ. ಆದರೆ ನಾನು ಕೆ.ಎಚ್. ರಂಗನಾಥ್ ಪಕ್ಷದ ಅಧ್ಯಕ್ಷನಾಗಿದ್ದೇನೆ. ನನ್ನ ಅಧ್ಯಕ್ಷತೆಯಲ್ಲಿ ಅಂಥದ್ದಕೆ ಅವಕಾಶ ಕೊಡುವುದಿಲ್ಲ.

ಶ್ರೀ ಟಿ.ಎಂ. ಮಂಜುನಾಥ್: ಅಂಥವರನ್ನು ತಮ್ಮ ಪಕ್ಷದಿಂದ ಈಗಲೇ ಹೊರಗೆ ಹಾಕುತ್ತೇನೆಂದು ಹೇಳಿ.

ಶ್ರೀ ಕೆ.ಎಚ್. ರಂಗನಾಥ್: ಹೊರಗೆ ಹಾಕುವುದು ಬಿಡುವುದು ಬೇರೆ ಪ್ರಶ್ನೆ. ಜನ ಸಂಘದವರಿಗೆ ದಿನಾ ಕಲ್ಲು ಹೊಡೆಯುವುದೇ ಉದ್ಯೋಗವಾಗಿರುವಾಗ, ಅದನ್ನು ಪ್ರತಿಭಟನೆ ಮಾಡಬೇಕಾಗಿಲ್ಲ. ಅದನ್ನು ಪ್ರತಿಭಟನೆ ಮಾಡಬೇಕೆಂದು ನಮ್ಮ ಪಕ್ಷದಿಂದ ಆದೇಶ ಕೊಟ್ಟಿಲ್ಲ. ಏತಕ್ಕೆ ಬರೆದಿದ್ದಾರೆ, ಯಾರ ಮೇಲೆ ಬರೆದಿದ್ದಾರೆ ಎಂಬುದು ನನಗೆ ಗೊತ್ತಿಲ್ಲ. ಆದರೂ ಕೂಡ ಇದನ್ನು ಏತಕ್ಕೆ ಪ್ರಸ್ತಾಪ ಮಾಡುತ್ತಿದ್ದೀರೂ ನನಗೆ ಅರ್ಥವಾಗಲಿಲ್ಲ.

ಶ್ರೀ ಟಿ.ಎಂ. ಮಂಜುನಾಥ್: ಸನ್ಮಾನ್ಯ ರಂಗನಾಥ್‌ರವರು ಪಕ್ಷದ ಅಧ್ಯಕ್ಷರಾಗಿ ಯಾವ ವಿಧವಾದಂಥ ನಿರ್ದೇಶನವನ್ನು ಕೊಟ್ಟಿಲ್ಲವೆಂದು ಹೇಳಿದ ಮೇಲೆ ಕಾಂಗ್ರೆಸ್ಸಿನ ಯುವಕರು ಈ ಕಾರ್ಯಕ್ರಮವನ್ನು ಹಾಕಿಕೊಂಡಿರುವುದರಿಂದ, ತಮ್ಮ ಪಕ್ಷಕ್ಕೆ ಮಸಿ ಬಳಿಯುವ ಸಂದರ್ಭ ಇರುವುದರಿಂದ ಅವರ ಬಗ್ಗೆ ಎಚ್ಚರಿಕೆಯನ್ನು ವಹಿಸಿ ಎನ್ನತಕ್ಕಂಥ ಮಾತನ್ನು ಹೇಳಬಯಸುತ್ತೇನೆ.

ಶ್ರೀ ಕೆ.ಎಚ್. ರಂಗನಾಥ್: ಇಂಥದಕ್ಕೆ ಅವಕಾಶ ಕೊಡುವುದಿಲ್ಲ. ನಮ್ಮ ಪಕ್ಷದ ಕಾರ್ಯಕರ್ತರಿಗೆ ಇಂಥದ್ದು ಮಾಡಕೂಡದು ಎಂದು ನಿರ್ದೇಶನ ಕೊಡುತ್ತೇನೆ.

*****

# ಶೂದ್ರಮುಂಡೇಗಂಡ ಮತ್ತು ಸಂಸ್ಕೃತ!

**1984**

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ): ಸ್ವಾಮಿ, ಸಂಸ್ಕೃತ ಎಂದರೆ ಅದು ಒಂದು ಸತ್ತ ಭಾಷೆ, ಆದರಿಂದ ಏನು ಪ್ರಯೋಜನವಿಲ್ಲವೆಂದು ಪಟೇಲರು ಹೇಳಿದರು. ನನಗೆ ಭಾಷೆಯೆಂದರೆ ಬಹಳ ಪ್ರೇಮ, ವ್ಯಾಮೋಹ ಇದೆ. ಆದರೆ ಅದನ್ನು ಅವಶ್ಯಕವಾಗಿ ಕಲಿಸತಕ್ಕಂಥವರಲ್ಲಿ ನಿಷ್ಠೆ ಇಲ್ಲ : ಆದ್ದರಿಂದ ಅದು ಒಂದು ವಿಧವಾದ ಭಾಷೆಯಾಗಿದೆ. ಈವತ್ತಿನ ದಿವಸ ಹೈಸ್ಕೂಲಿನಲ್ಲಿ ಇಟ್ಟಿದ್ದಾರೆ. ಅ ಆ ಇ ಈ ಕಲಿಸಿಬಿಟ್ಟು ನೂರಕ್ಕೆ ನೂರು ನಂಬರನ್ನು ಕೊಟ್ಟುಬಿಡುತ್ತಾರೆ. ನಾವು ಅವಾಗ ಮೂರು ಜನ ಇದ್ದೆವು. ಎಲ್ಲಾ ಸೆಕ್ಷನ್ ಹುಡುಗರನ್ನು ಸೇರಿಸಿ ಒಂದೇ ಸೆಕ್ಷನ್ ಮಾಡಿಬಿಡುತ್ತಿದ್ದರು. ಹೀಗೆ ಮಾಡಿಬಿಡುತ್ತಿದ್ದುದರಿಂದ ಸ್ವಲ್ಪ ತೊಂದರೆಯಾಗುತ್ತಿತ್ತು. ಕೆಲವು ಉಪಾಧ್ಯಾಯರು ನಮ್ಮನ್ನು ಕಂಡರೆ ಶೂದ್ರಮುಂಡೇಗಂಡ ನಿನಗೇತಕ್ಕೋ ಸಂಸ್ಕತ ಎಂದೂ ಕೂಡ ಹೇಳುತ್ತಿದ್ದರು. ನಾನು ಅತಿಶೂದ್ರ ಎಂದು ಒಂದು ಹೆಚ್ಚಿನ ಹಂತಕ್ಕೆ ಏರಿಸಿ ನಿನಗೇತಕ್ಕೋ ಎಂದು ಬೈಯ್ದದ್ದು ಉಂಟು. ಇಂಥ ಪ್ರವೃತ್ತಿ ಇರುವುದಾದರೆ ಈ ಪುಸ್ತಕ ಅನಾವಶ್ಯಕ.

ಶ್ರೀ ಜೆ.ಎಚ್ ಪಟೇಲ್: ಸಂಸ್ಕೃತವನ್ನು ಕಲಿಯಬೇಕಾದುದರ ಬಗ್ಗೆ, ಬರೆಯಬೇಕಾದುದರ ಬಗ್ಗೆ ನನ್ನ ಭಿನ್ನಾಭಿಪ್ರಾಯವಿಲ್ಲ. ಆದರೆ ಮಾನ್ಯ ಸದಸ್ಯರಾದ ರಂಗ ನಾಥ್‌ರವರು ಹೇಳಿದ ಪ್ರಕಾರ ಶೂದ್ರಮುಂಡೇಗಂಡ ಎಂದು ಹೇಳುವ ಸಂಸ್ಕೃತಿ ಸಂಸ್ಕೃತವನ್ನು ಓದುವುದರಿಂದ ಬರುವುದಾದರೆ ಅದನ್ನು ನಾನು ಖಂಡಿಸುತ್ತೇನೆ.

ಶ್ರೀ ಎ. ಲಕ್ಷ್ಮೀಸಾಗರ್: ಆ ಸಂಸ್ಕೃತವನ್ನು ಹೇಳಿಕೊಡತಕ್ಕಂಥವನು ಆ ರೀತಿ ಹೇಳಿದ್ದರೆ, ಅವನು ಸಂಸ್ಕೃತವನ್ನೇ ಓದಿರಲಿಲಲ್ಲವೆಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ.

ಶ್ರೀ ಕೆ.ಎಚ್. ರಂಗನಾಥ್: ಆ ರೀತಿಯ ಭಾವನೆ ಇದ್ದರೂ ಅದನ್ನು ಎತ್ತಿಹೇಳಿ ತೋರಿಸತಕ್ಕಂಥ ಪರಿಸ್ಥಿತಿಯಲ್ಲಿ ನಾವಿರಲಿಲಲ್ಲ. ಏನೋ ನನ್ನ ತಂದೆತಾಯಿಗಳು ನನ್ನ ಹೆಸರನ್ನು ರಂಗನಾಥ್ ಎಂದು ಇಟ್ಟಿದ್ದಿರಿಂದ ಅವರಿಗೆ ನನ್ನ ಜಾತಿ ಗೊತ್ತಾಗುತ್ತಿರಲಿಲ್ಲ. ಮಾದ, ಸಿದ್ದ ಎಂದು ಹೆಸರೇನಾದರೂ ಇಟ್ಟುಬಿಟ್ಟಿದ್ದರೆ ಗೊತ್ತಾಗಿಬಿಡುತ್ತಿತ್ತು. ಆಗ ನಾವು ಕೊಡತಕ್ಕಂಥ ಪೀಸ್ ಕಡಿಮೆ ಇದ್ದುದ್ದರಿಂದ ನಮ್ಮ ಹೆಸರಿನ ಮುಂದೆ ಕೆಂಪು ಶಾಯಿಯಿಂದ ಗುರುತು ಮಾಡಿಕೊಳ್ಳುತ್ತಿದ್ದರು. ಅದರ ಮೇಲೆ ಅವರಿಗೆ ಗೊತ್ತಾಗುತ್ತಿತ್ತು. ಅವರಿಗೆ ನಾವು ಮುಖವನ್ನೇ ತೋರಿಸುತ್ತಿರಲಿಲ್ಲ. ಹಾಜರಾತಿ ತೆಗೆದುಕೊಳ್ಳುವಾಗ ನಮ್ಮ ಪಕ್ಕದಲ್ಲಿ ಕುಳಿತ್ತಿದ್ದವರು ಯಾರಾದರೂ 'ಎಸ್ ಸಾರ್'ನೆಂದು ಹೇಳಿಬಿಡುತ್ತಿದ್ದರು.

* * * *

# ಗ್ರಾಮಾಧಿಕಾರ: ಕೆಲವು ತಾತ್ವಿಕ ಜಿಜ್ಞಾಸೆಗಳು

21 ಮಾರ್ಚ್ 1984

ಶ್ರೀ ಕೆ.ಎಚ್. ರಂಗನಾಥ್ (ಹಿರಿಯೂರು).- ಸನ್ಮಾನ್ಯ ಅಧ್ಯಕ್ಷರೇ, ಸದನದ ಮುಂದಿನ ಕರ್ನಾಟಕ ಜಿಲ್ಲಾ ಪರಿಷತ್, ತಾಲ್ಲೂಕ್ ಪಂಚಾಯತ್ ಸಮಿತಿ, ಮಂಡಲ್ ಪಂಚಾಯತ್, --ಪಂಚಾಯತ್ ಮಸೂದೆ ಬಗ್ಗೆ ಜಂಟಿ ಸಲಹಾ ಸಮಿತಿಯಿಂದ ಏನು ವರದಿ ಬಂದಿದೆ ಅದರ ಬಗ್ಗೆ ಸರ್ವ ಸದಸ್ಯರು ಬಹಳ ದೀರ್ಘವಾಗಿ ಮಾತನಾಡಿದ್ದಾರೆ. ನನ್ನ ಅಭಿಪ್ರಾಯಗಳನ್ನು ಒಂದೆರಡು ಮಾತಿನಲ್ಲಿ ಹೇಳುವುದಕ್ಕಿಂತ ಮುಂಚಿತವಾಗಿ ಮಂತ್ರಿಗಳ ಬಗ್ಗೆ ಒಂದು ಮಾತನ್ನು ಹೇಳಿದರೆ ತಪ್ಪಾಗಲಾರದು. ಮಂತ್ರಿಗಳಿಗೆ ಇದು ಬಹಳ ಆತ್ಮೀಯವಾಗಿರತಕ್ಕ ಮಸೂದೆ ಎಂದು ಕಾಣುತ್ತದೆ. ಅವರು ಬಹಳ ಶ್ರಮಪಟ್ಟು ಆಸ್ಥೆ ವಹಿಸಿ ರಾಜ್ಯದ ಜನತೆಯ ಕೈಗೆ ಅಧಿಕಾರ ಹೋಗಬೇಕು ಎನ್ನುವ ಸದುದ್ದೇಶವನ್ನು ಪ್ರಾಮುಖ್ಯವಾಗಿ ಮನಸ್ಸಿನಲ್ಲಿಟ್ಟುಕೊಂಡು ಈ ಮಸೂದೆಯನ್ನು ರಾಜ್ಯದ ಮುಂದೆ ಇಟ್ಟಿದ್ದಾರೆ. ಅವರ ಸದಭಿಪ್ರಾಯದ ಬಗ್ಗೆ ನನಗೆ ಒಳ್ಳೆಯ ಭಾವನೆ ಇದೆ. ಮತ್ತೆ ಮಸೂದೆಯ ಪೂರ್ವಪೀಠಿಕೆಯಲ್ಲಿ ಇರತಕ್ಕಂಥಾ ಅಭಿಪ್ರಾಯಗಳನ್ನು ನೋಡಿದರೆ ಉದ್ದೇಶ ಬಹಳ ಘನವಾಗಿರತಕ್ಕದ್ದು ಇದೆ. 4 ಅಂಶಗಳನ್ನು ಪೂರ್ವಪೀಠಿಕೆಯಲ್ಲಿ ಪ್ರಸ್ತಾಪ ಮಾಡಿದ್ದಾರೆ. ಮೊದಲನೆಯದು Law Government and Judicial Functions ; (2) Entrust the execute of certain works and develop schemes of the State Five Year Plan ರಾಜ್ಯದ ಯೋಜನೆ ಕೆಳಗೆ ಬರತಕ್ಕಂಥಾ ಕಾರ್ಯಕ್ರಮಗಳನ್ನು ಹಳ್ಳಿಯ ಮಟ್ಟದಲ್ಲಿರತಕ್ಕಂಥ ಪಂಚಾಯತ್ ಸಮಿತಿಗಳು ಮಾಡತಕ್ಕಂಥಾ ವ್ಯವಸ್ಥೆ ಮಾಡಿಕೊಳ್ಳಬೇಕು ಅನ್ನುವುದು, ಅಧಿಕಾರ ವಿಕೇಂದ್ರೀಕರಣ ಆಗಬೇಕು ಅನ್ನತಕ್ಕಂಥಾದ್ದು, ಮತ್ತು for the purpose of promoting development of democratic institutions and securing a greatmeasure of participation by the people ಇದರ ಉದ್ದೇಶ ಎಂದು ಹೇಳಿದ್ದು ಇದು ಗಹನವಾದ ವಿಚಾರಗಳು. ಸ್ವಾತಂತ್ರ್ಯಾನಂತರ ಮತ್ತು ಸ್ವಾತಂತ್ರ್ಯ ಪೂರ್ವದಲ್ಲಿ ಕೆಲಸ ಮಾಡಿದಂಥಾ ರಾಜ್ಯದ ಮತ್ತು ರಾಷ್ಟ್ರದ ಧೀಮಂತ ವ್ಯಕ್ತಿಗಳು ಈ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಮಾಡಿದ್ದಾರೆ. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಇವರು ಶ್ರಮಪಟ್ಟಿದ್ದಾರೆ. ಇವರ ಶ್ರಮದ ಶ್ರದ್ಧೆಯ ಬಗ್ಗೆ ನನ್ನ ಅಭಿನಂದನೆಗಳನ್ನು ಸಲ್ಲಿಸುತ್ತಾ, ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಇವರ ಶ್ರದ್ಧೆಯ ಬಗ್ಗೆ ನನಗೆ ಪೂರ್ಣವಾದ ನಂಬಿಕೆ ಇದೆ. ಮಾನ್ಯ ಮಂತ್ರಿಗಳು ಯಾವುದೇ ಉದ್ದೇಶವನ್ನು ತೆಗೆದುಕೊಂಡರೂ ಶ್ರದ್ಧೆವಹಿಸಿ

ಮಾಡುತ್ತಾರೆಂಬ ಮಾತನ್ನು ನನ್ನ ಅವರ ಪರಿಚಯಿಸಿ ಹೇಳಿದರೆ ಮಾನ್ಯ ಸದಸ್ಯರು ಅನ್ಯಥಾ ಭಾವಿಸಬಾರದೆಂದು ತಮ್ಮ ಮೂಲಕ ಕೇಳಿಕೊಳ್ಳುತ್ತೇನೆ. ಪೂರ್ವ ಪೀಠಿಕೆಯಲ್ಲಿ ಪ್ರಸ್ತಾಪ ಆಗಿರತಕ್ಕ ಅಂಶಗಳನ್ನು ಅನುಷ್ಠಾನಕ್ಕೆ ತರಲು ಅನುಕೂಲವಾದಂತಹವು ಮಸೂದೆಯಲ್ಲಿ ಎಷ್ಟರಮಟ್ಟಿಗೆ ಇದೆ ಎಂಬುದನ್ನು ನೋಡಬೇಕಾಗಿದೆ. ಅಧಿಕಾರ ಶಾಹಿ ಹಿಡಿತದಿಂದ ಜನರನ್ನು ಬಿಡುಗಡೆ ಮಾಡುವುದಕ್ಕೆ ಎಷ್ಟರಮಟ್ಟಿಗೆ ಪ್ರಯತ್ನ ನಡೆದಿದೆ, ಇದನ್ನು ಎಷ್ಟು ಮಾಡತಕ್ಕದ್ದು ಮತ್ತು ಅದೇ ಸಮಯದಲ್ಲಿ ಇದರ ಮೂಲಕ ವ್ಯವಸ್ಥೆ ಮಾಡತಕ್ಕ ಯೋಜನಾ ಸಾಧಾರಣ ಮನುಷ್ಯನಿಗೆ ತಲುಪಿ ಅವನ ಆರ್ಥಿಕ ವ್ಯವಸ್ಥೆ ಉತ್ತಮಗೊಂಡು ಅನುಕೂಲವಾಗುತ್ತದೆ ಎನ್ನುವುದು ಬಹಳ ಮುಖ್ಯವಾದುದು.

ನಾವು ಇರತಕ್ಕ ಸಮಾಜ ಆರ್ಥಿಕ ಅಸಮಾನತೆ ಅಷ್ಟೇ ಅಲ್ಲದೇ ಸಾಮಾಜಿಕ ಅಸಮಾನತೆಯಿಂದಲೂ ಕೂಡಿರತಕ್ಕ ಸಮಾಜ ಆಗಿದೆ. ಮತ್ತು ಅದಕ್ಕೂ ಹೆಚ್ಚಿಗೆ ಜಾತಿಗಳಿಂದ ಕೂಡಿರತಕ್ಕ ಒಂದು ಸಮಾಜ. ಪ್ರತಿ ಜಾತಿಯಲ್ಲಿಯೂ ಕೂಡ ಇದ್ದವನು, ಇಲ್ಲದವನು ಅನ್ನತಕ್ಕಂಥಾ ಪರಿಸ್ಥಿತಿ ಇದೆ. ಮತ್ತೆ ಕೆಲವು ಜನಾಂಗ ಸಮಾಜದಲ್ಲಿ ಕೀಳು ಎಂಬ ಮನೋಭಾವನೆ ಇದೆ. ಜಾತಿಯ ಉಚ್ಚಾರಣೆಯಿಂದಲೇ ಅದು ಕೀಳು ಜಾತಿಗಳು ಎಂಬ ಭಾವನೆ ಬರುತ್ತದೆ. ಈ ರೀತಿಯ ಕೆಲವಾರು ಜಾತಿಗಳನ್ನು ನೋಡಬಹುದು. ಅದನ್ನು ಪ್ರಸ್ತಾಪ ಮಾಡಿದ ತಕ್ಷಣವೇ ಅದು ಕೀಳು ಜಾತಿ ಎನ್ನತಕ್ಕ ಭಾವನೆ ಬರತಕ್ಕಂಥಾ ರೀತಿಯಲ್ಲಿ ಪರಿಸರ ಮತ್ತು ವ್ಯವಸ್ಥೆ ಸಮಾಜದಲ್ಲಿದೆ. ಈ ಪರಿಸರದಲ್ಲಿ ಇರತಕ್ಕಂಥಾ ಸಮಾಜ, ಮನುಷ್ಯನಿಗೆ ಈ ಮಸೂದೆಯಲ್ಲಿ ರಾಜ್ಯಮಟ್ಟದಲ್ಲಿ ರಾಷ್ಟ್ರ ಮಟ್ಟದಲ್ಲಿ ಬರತಕ್ಕಂಥಾ ಯೋಜನೆಯ ಫಲ ಸಿಗುವ ವ್ಯವಸ್ಥೆ ಇದೆಯೇ, ಮತ್ತು ಅದಕ್ಕೆ ಸಾಧನವಾಗತಕ್ಕ ವ್ಯವಸ್ಥೆ ನಡೆದಿದೆಯೇ ಎನ್ನುವುದನ್ನು ಪ್ರಮುಖವಾಗಿ ನೋಡಬೇಕು.

ಒಂದು ಕಲಂನಲ್ಲಿ ವ್ಯಾಕರಣ ಸರಿಯಾಗಿದೆಯೇ ಇಲ್ಲವೇ ಆ ಪದ ಅಲ್ಲಿರಬೇಕಾಗಿತ್ತು ಇಲ್ಲಿರಬೇಕಾಗಿತ್ತು ಎನ್ನುವುದನ್ನು ಹೇಳಿ ಅದರ ಬಗ್ಗೆ ನಾನು ತಲೆ ಕೆಡಿಸಿಕೊಳ್ಳುವುದಕ್ಕೆ ಹೋಗುವುದಿಲ್ಲ. ಜಂಟಿ ಸಲಹಾ ಸಮಿತಿಯಲ್ಲಿ ಇದರ ಬಗ್ಗೆ ಚರ್ಚೆ ಮಾಡಿದ್ದಾರೆ. ಅಲ್ಲಿ ಇಲ್ಲಿ ಕೆಲವು ತಪ್ಪುಗಳಿದ್ದರೂ ತಿದ್ದುಪಡಿ ಮುಖಾಂತರ ಸರಿ ಮಾಡಲಿಕ್ಕೆ ಸಾಧ್ಯವಾಗುತ್ತದೆ. 15 ಪರಿಚ್ಛೇದವುಳ್ಳ ಕಾಯಿದೆ ಇದಾಗಿದ್ದು ಇದರಲ್ಲಿ 319 ಕಲಂನ 5 ಷೆಡ್ಯೂಲ್ ಇವೆ. ಮತ್ತೆ ಅದರ ಕೆಳಗಡೆ ರೂಲ್ಸ್ ಕೂಡ ಮಾಡಿದ್ದಾರೆ. ಈ ದಿವಸ ಈ ವಿಷಯವನ್ನು ಮಂತ್ರಿಗಳು ಪ್ರಸ್ತಾಪ ಮಾಡಿದರು. ಅನಿವಾರ್ಯ ಕಾರಣಗಳಿಂದ ಮಸೂದೆ ಮಂಡಿಸಿದಾಗ ಅವರ ಭಾಷಣ ಕೇಳತಕ್ಕ ಅವಕಾಶ ನನಗೆ ದೊರೆಯಲಿಲ್ಲ. ಕೆಲವಾರು ವಿಚಾರಗಳನ್ನು ಪತ್ರಿಕೆಗಳಲ್ಲಿ ನೋಡಿ ತಿಳಿದುಕೊಂಡೆ. ಪಂಚಾಯಿತಿಗಳ ವಿಚಾರದಲ್ಲಿ ಮಾನ್ಯ ಮಂತ್ರಿಗಳು ತಮ್ಮ ಅಭಿಪ್ರಾಯಗಳನ್ನು ತಿಳಿಸಿರುವುದು ನನ್ನ ಕಿವಿಗೆ ಬಿತ್ತು. ಹಿಂದೆ ಯಾವ ರೀತಿ ಇತ್ತು

ಈಗ ಯಾವ ರೀತಿ ವ್ಯವಸ್ಥೆ ಮಾಡಬೇಕು ಎಂಬುದನ್ನು ಅವರು ಹೇಳಿದ್ದಾರೆ. ಇದನ್ನು ಸಭೆಯಲ್ಲಿ ಹೇಳಲಿಲ್ಲ ಹೊರಗಡೆ ಹೇಳಿದ್ದಾರೆ. ಉತ್ತರ ಹೇಳುವಾಗ ಮಾನ್ಯ ಮಂತ್ರಿಗಳ ಆ ಬಗ್ಗೆ ಸ್ಪಷ್ಟೀಕರಣ ನೀಡಬೇಕು. ಕೆಲವು ಕಡೆ ಒಂದೊಂದು ಗ್ರಾಮಕ್ಕೆ ಒಂದೊಂದು ಪಂಚಾಯಿತಿ ಇದೆ. ಮಲೆನಾಡಿನ ಭಾಗದಲ್ಲಿ ಸಾಕಷ್ಟು ಅನುಕೂಲ ಮಾಡಿಕೊಟ್ಟಿದ್ದಾರೆ. ಅಲ್ಲಿ ಸಂಖ್ಯೆಯನ್ನು 5 ಸಾವಿರಕ್ಕೆ ಇಳಿಸಿದ್ದಾರೆ. ಮೂಡಿಗೆರೆಯಂಥ ನಗರ ಸಭೆಯಲ್ಲಿ 6 ಸಾವಿರ ಜನ ಸಂಖ್ಯೆ ಇದೆ. ಈಗ ಜಾಸ್ತಿ ಇರಬಹುದು. ಹಿಂದೆ ನಾನು ನೋಡಿದಾಗ 5 ಸಾವಿರ ಜನಸಂಖ್ಯೆ ಇತ್ತು. ಇದೇ ರೀತಿ ಕೊಪ್ಪ ಮತ್ತು ಶೃಂಗೇರಿಯಲ್ಲೂ ಕಡಿಮೆ ಬರತಕ್ಕದಿದೆ.

ಹೀಗೆ ಅನ್ನುವಾಗ ಗ್ರಾಮಕ್ಕೆ ಮುನಿಸಿಪಾಲಿಟಿ ಬರುತ್ತದೆ, ಗ್ರಾಮಪಂಚಾಯ್ತಿಗೆ ಮುನಿಸಿಪಾಲಿಟಿ ಬರುತ್ತದೆ. ಇವತ್ತು ಈ ಮಸೂದೆ ಜಂಟಿ ಸಲಹಾ ಸಮಿತಿ ಮುಂದೆ ಹೋಗುವುದಕ್ಕೆ ಮುನ್ನ ಜನ ಸಂಖ್ಯೆ ಬಾಹುಳ್ಯ ಜಾಸ್ತಿ ಇರತಕ್ಕಂಥದ್ದು ಹಾಗೂ ವ್ಯಾಪ್ತಿ ದೊಡ್ಡದಾಗತಕ್ಕ ಪರಿಸ್ಥಿತಿ ಇತ್ತು. ಮಾನ್ಯ ತಿಮ್ಮಪ್ಪ ಹೆಗ್ಗಡೆಯವರು ಮಾತನಾಡುವಾಗ, ಗ್ರಾಮದ ದೂರದ ಮಿತಿಯನ್ನು ಹಾಕಿದರೆ ಒಳ್ಳೆಯದೆಂದು ಸಲಹೆ ಕೊಟ್ಟರು, ಜನಸಂಖ್ಯೆ ಮಿತಿ ಬಗ್ಗೆ ಪ್ರಸ್ತಾಪ ಮಾಡಿದರು. ನನ್ನನ್ನು ಕೇಳಿದರೆ 102 ಸಾವಿರ ಪ್ರಜಾಸಂಖ್ಯೆ ಅಂದರೆ ಕೆಲವು ಕಡೆ ದೊಡ್ಡದಾಗಬಹುದು, ಮಂಡ್ಯದ ಕಡೆ 2-3 ಹಳ್ಳಿಗಳಲ್ಲಿ 10 ಸಾವಿರ ಪ್ರಜಾಸಂಖ್ಯೆ ಸಿಗಬಹುದು. ಬಳ್ಳಾರಿ ಜಿಲ್ಲೆಯಲ್ಲಿ, ರಾಯಚೂರು ಜಿಲ್ಲೆಯಲ್ಲಿ, ಧಾರವಾಡ ಜಿಲ್ಲೆಯಲ್ಲಿ ದೊಡ್ಡ ದೊಡ್ಡ ಊರುಗಳು ಸಿಕ್ಕಿದರೂ ಅವುಗಳು ಬಹಳ ದೂರ ಇರತಕ್ಕ ಸ್ಥಿತಿಯಲ್ಲಿವೆ. ನಮ್ಮ ನಿಮ್ಮ ಅನುಭವದ ಪ್ರಕಾರ ನಮ್ಮ ಊರಿಗೆ ಛೇರ್ಮನ್‌ಗಿರಿ ಬರಬೇಕು ಎಂಬ ವಾದ ಇದೆ. ಈಗ ತಾವು ಹೊಸ ಹೆಸರು ಕೊಟ್ಟು, ಪ್ರಧಾನ, ಉಪಪ್ರಧಾನ ಎಂದು ಹೇಳಿದ್ದೀರಿ. ಮೊದಲು ನಮ್ಮಲ್ಲಿ ಅಧ್ಯಕ್ಷ, ಉಪಾಧ್ಯಕ್ಷ, ಚೇರ್ಮನ್ ಎಂದು ಇದ್ದರು. ಬೊಂಬಾಯಿ ಕರ್ನಾಟಕದವರು ಸರಪಂಚರು ಎಂದು ಕರೆಯುತ್ತಿದ್ದರು. ಹಳ್ಳಿಯವರು ಚೇರ್ಮನ್ ಎಂದರೆ ದೊಡ್ಡ ಮನುಷ್ಯ ಅಂದುಕೊಳ್ಳುತ್ತಾರೆ. ಪ್ರಧಾನ ಎಂದು ಹೇಳಿ ಅವರನ್ನು ಎಷ್ಟರಮಟ್ಟಿಗೆ ಶಮನಗೊಳಿಸುತ್ತೀರೋ ಗೊತ್ತಿಲ್ಲ. ಇದರ ಬಗ್ಗೆ ಹೆಚ್ಚು ಪ್ರಸ್ತಾಪಿಸುವುದಕ್ಕೆ ಹೋಗುವುದಿಲ್ಲ.

ಈ ದಿನ ಬೆಳಿಗ್ಗೆ ಮಂತ್ರಿಗಳು ಒಂದು ಮಾತನ್ನು ಹೇಳುತ್ತಿದ್ದರು. ಮಾನ್ಯ ಪುಟ್ಟಸ್ವಾಮಿಗೌಡರು ಪ್ರಸ್ತಾಪ ಮಾಡುವಾಗ, ಮಹಾತ್ಮಾ ಗಾಂಧಿಯವರ ಗ್ರಾಮಪಂಚಾಯ್ತಿ ಕನಸನ್ನು ನಾವು ನನಸು ಮಾಡಲಿಕ್ಕೆ ತಯಾರಾಗಿದ್ದೇವೆ ಎಂದು ಹೇಳುತ್ತಾ ಮಹಾತ್ಮಾ ಗಾಂಧಿಯವರ ಮಾತನ್ನು ಉಲ್ಲೇಖ ಮಾಡಿದರು. ಇದು ಎಲ್ಲಿದೆ ಎನ್ನುವುದನ್ನು ಶ್ರೀಮತಿ ನಾಗರತ್ನಮ್ಮನವರಿಗೆ ತೋರಿಸಿದೆ. ಮಾತಿಗೆ ಎಲ್ಲಾ ಪ್ರಮಾಣದಿಂದ ಒತ್ತುಕೊಟ್ಟಿದ್ದಾರೆ. ವ್ಯಕ್ತಿಯ ಪೂರ್ಣ ಬೆಳವಣಿಗೆಯ ಒತ್ತನ್ನು ಕೊಟ್ಟಿದ್ದಾರೆ. An individual is recognised as a full human being. ಈ ಪರಿಸ್ಥಿತಿ ಇವತ್ತು ಈ ಸಮಯದಲ್ಲಿ ಇದೆಯೇ? ಅದು ಇಲ್ಲದೇ ಇರತಕ್ಕಂಥ ಪರಿಸ್ಥಿತಿಯಲ್ಲಿ ಮಹಾತ್ಮ ಗಾಂಧಿಯವರ ಕನಸನ್ನು ನನಸಾಗಿ ಮಾಡುವುದಕ್ಕೆ ಸಾಧ್ಯವೇ? ಶಾಸಕಾಂಗ, ನ್ಯಾಯಾಂಗ ಹಾಗೂ ಕಾರ್ಯಾಂಗದ ಕೆಲಸವನ್ನು ಇದಕ್ಕೆ ಕೊಡಬೇಕು.

ಇದೇ ಅರ್ಥದಲ್ಲಿ ಮಹಾತ್ಮಾಗಾಂಧಿಯವರು ಪ್ರಸ್ತಾಪ ಮಾಡಿದ್ದಾರೆ. ಆ ಮಾತನ್ನು ಆಡುವಾ, ಮಹಾತ್ಮಾಗಾಂಧಿಯವರು ಒಂದು ಹಳ್ಳಿಗೂ ಮತ್ತೊಂದು ಹಳ್ಳಿಗೂ ಯಾವ ರೀತಿಯಾದ ಸಂಪರ್ಕ ಇರಬೇಕೆನ್ನುವುದನ್ನು ಹೇಳಿದ್ದಾರೆ. ಇವತ್ತಿನ ದಿವಸ ನಾವು ಆ ಮಟ್ಟಕ್ಕೆ ಬಂದಿದ್ದೇವೆ.

**Sri Abdul Nazeer Sab.-** "Leave the consequences to the hands of God". ಎಂದು ಮಹಾತ್ಮಗಾಂಧಿಯವರು ಹೇಳಿದ್ದಾರೆ. ಇವತ್ತಿನ ದಿವಸ ಗಾಂಧಿ ಸೇವಾಕರ್ತರು ಮಾರ್ಕ್ಸ್ ಸಿದ್ಧಾಂತವನ್ನು ಒಪ್ಪಿದವರು ಇದ್ದಾರೆ. ಗಾಂಧಿಯವರೊಡನೆ ನಡೆದ ವಾದ ವಿವಾದದಲ್ಲಿ ಯಾವುದೋ ಕಾಲದ ರಿಪಬ್ಲಿಕ್ಸ್ ಅನ್ನು ಕಾಣುತ್ತಿದ್ದೇವಲ್ಲ ಅದು ಹೇಗಾಗುತ್ತದೆಂದರೆ I have full faith in the people of this country. Let the consequences be in the hands of God.

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ.-** ಅದರಲ್ಲಿ ನಮಗೆ ನಂಬಿಕೆ ಇಲ್ಲ.

**ಶ್ರೀ ಕೆ.ಎಚ್. ರಂಗನಾಥ್.-** ನಾನು ಮಹಾತ್ಮ ಗಾಂಧಿಯವರ ಮಾತನ್ನು ಪುಸ್ತಕದಲ್ಲಿರುವುದನ್ನು ಪ್ರಸ್ತಾಪ ಮಾಡುತ್ತೇನೆ. ಅದು ಈ ರೀತಿ ಇದೆ. Any village can become such a republic. He used the world Republic. ಗಣರಾಜ್ಯದ ಪರಿಸ್ಥಿತಿಗೆ ಒಂದು ಹಳ್ಳಿ ಬರಬೇಕೆಂಬ ಮಾತನ್ನು ಹೇಳಿದ್ದಾರೆ. ತಾವು ತಮ್ಮ ಪಕ್ಷದವರು 1971ರ ಚುನಾವಣೆ ಕಾಲದಿಂದಲೂ ಮಹಾತ್ಮಗಾಂಧಿಯವರ ಫೋಟೋ ಹಾಕಿಕೊಳ್ಳುತ್ತಾ ಬಂದರೂ ಎಷ್ಟರ ಮಟ್ಟಿಗೆ ಮಹಾತ್ಮ ಗಾಂಧಿಯವರ ಪದ್ಧತಿಗಳನ್ನು ಸಾರ್ಥಕ ಮಾಡುವುದಕ್ಕೆ ಪ್ರಾಮಾಣಿಕವಾಗಿ ಜಾರಿಗೆ ತರುವುದಕ್ಕೆ ಪ್ರಯತ್ನ ಮಾಡಿದ್ದಾರೋ ಆ ಮಾತು ಬೇರೆ. ಜೆ.ಪಿ.ಯವರ ಪದ್ಧತಿಗಳನ್ನು ಹೇಳುತ್ತಾ ಬಂದಿರಿ. ಅಶೋಕ ಮೆಹ್ತಾರವರು ಗ್ರಾಮ ಸಭೆ ಬಗ್ಗೆ ಹೇಳಿದ್ದಾರೆ. ಅವರ ಶ್ರದ್ಧೆ ಬರಬೇಕೆನ್ನುವ ಉದ್ದೇಶ ಗಹನವಾದುದು. ನಮ್ಮ ಪರಿಸರದಲ್ಲಿನ ವಸ್ತು ಸ್ಥಿತಿಯನ್ನು ಮಂತ್ರಿಗಳು ಗಮನಕ್ಕೆ ತೆಗೆದುಕೊಂಡಿದ್ದಾರೆಯೇ? ಇವತ್ತಿನ ದಿವಸ ಇರತಕ್ಕಂಥ ವಸ್ತು ಸ್ಥಿತಿಯಲ್ಲಿ ಅವರ ಅಭಿಪ್ರಾಯಗಳನ್ನು ಜಾರಿಗೊಳಿಸುವುದಕ್ಕೆ ಸಾಧ್ಯವಾದ ಕಾನೂನನ್ನು ತಂದಿದ್ದೀರಾ? ನಿಮ್ಮಿಂದ ತರುವುದಕ್ಕೆ ಸಾಧ್ಯವೇ? ಆ ಕಾನೂನು ಎಷ್ಟರಮಟ್ಟಿಗೆ ಅಧಿಕಾರ ಶಾಹಿ ಹಿಡಿತದಿಂದ ಬಿಡುಗಡೆಯಾಗಿ ತನ್ನದೇ ಆದಂಥ ಶಾಶ್ವತವಾಗಿರತಕ್ಕಂತ ಒಂದು ವಿಕೇಂದ್ರೀಕರಣ ಏನಿದೆ ಸಾಧನೆ ಮಾಡುವುದಕ್ಕೆ ಸಾಧ್ಯವಾಗಿದೆ ಎಂಬುದನ್ನು ನೋಡುತ್ತಾ, ಹೋದರೆ ಹೆಚ್ಚು ಕಾಲ ಬೇಕಾಗಬಹುದೇನೋ ಗೊತ್ತಿಲ್ಲ. ಮಹಾತ್ಮ ಗಾಂಧಿಯವರ ಮಾತನ್ನು ಪ್ರಸ್ತಾಪಿಸುತ್ತಾ ಒಂದು ಮಾತನ್ನು ಹೇಳುವುದಾದರೆ Our cities are not India. That is what the late Mahatma Gandhi said. India lives in her seven and a half lakhs of villages and cities live upon the villages. They do not bring their wealth from other countries. The city people are brokers and commission agents for big houses of Europe, America and

Japan, ಇದು ನಿನ್ನೆ ಮೊನ್ನೆ ಹೇಳಿದ ಮಾತಲ್ಲ, ಅವರು 1948ನೇ ಜನವರಿ 30ನೇ ತಾರೀಖು ನಮ್ಮನ್ನು ಆಗಲಿದರು, ಅದಕ್ಕಿಂತ ಹಿಂದೆ ಹೇಳಿದ ಮಾತು. ಅಮೆರಿಕಾ, ಜಪಾನ್ ಬಗ್ಗೆ ನಿಮಗೆ ಹೇಳುವುದಕ್ಕೆ ಧೈರ್ಯ ಇದೆಯೆ ಎಂದು ಕೇಳುತ್ತೇನೆ. The city people are brokers and commission agents for the big houses of Europe America and Japan. The cities have co-operated with the latter in the difficult process that has gone on in the past 20 years." ನಿಮಗೆ ಆ ಧೈರ್ಯ ಇದೆಯೇ? ಇದೆಯೆಂದು ತಲೆದೂಗುತ್ತಿದ್ದೀರಿ, ಒಪ್ಪುತ್ತೇನೆ.

ಶ್ರೀ ಅಬ್ದುಲ್ ನಜೀರ್‌ಸಾಬ್.- ಒಳ್ಳೆಯ Intellectual debate raise ಮಾಡಿದ್ದಾರೆ. ಅದಕ್ಕಾಗಿ ಅವರಿಗೆ ಧನ್ಯವಾದಗಳನ್ನರ್ಪಿಸುತ್ತೇನೆ. ಅವರು ಚಿಂತನಶೀಲರು ಈ ಒಂದು ಸಿದ್ಧಾಂತ ದೇಶದಲ್ಲಿ ಜಾರಿಗೆ ಬರಲಿ. ಬಾಪೂಜಿಯವರ ಸಿದ್ಧಾಂತವನ್ನು ಕಾಳಜಿ ವಹಿಸಿ, ವ್ರತ ಮಾಡಿ ಜಾರಿಗೆ ತರಬೇಕೆಂಬ ಕನಸು ಕಂಡಂತಹ ವ್ಯಕ್ತಿಯೆಂದರೆ ಲೋಹಿಯಾ ಅವರು. The theory of Lohiya is the same philosophy developed on Bapues theory of village versus cities. ಆ ಸಿದ್ಧಾಂತವನ್ನು ಷೋಫರ್ ಎಂಬುವರು ಇವತ್ತು ಹೇಳಿದ್ದಾರೆ. Small is beautiful, At least a part of Europe is accepting that Phiolosophy.

ಶ್ರೀ ಎಂ.ಎಸ್. ಕೃಷ್ಣನ್.- ನಮಗೆ ಗೊತ್ತಾಗಬೇಕಾಗಿರುವುದು. Whether the Janata Party is accepting the Lohia Philosophy or Chandrashekar's philosophy or Morarji Desai's philosophy? Which philosophy they accept Hon. Minister Sri Nazeer Sab may accept Lohias philosophy. But what is Janata Party's Phalosophy.

**Sri Abdul Nazeer Sab.-** Gandhian socialism is our philosophy.

ಶ್ರೀ ಕೆ.ಎಚ್. ರಂಗನಾಥ್.- ನಾನು ಮುಂದಕ್ಕೆ ಹೋಗಿಲ್ಲ. ಗಾಂಧಿಯಿಸಂ, ಸೋಷಿಯಲಿಸಂ, ಇದಕ್ಕೆ ಇಷ್ಟು ಇತಿಮಿತಿ ಇದೆ. ಅವರ ವ್ಯಾಪ್ತಿ ಏನು ಎನ್ನುವುದನ್ನು ಹೇಳುವುದಕ್ಕೆ ಹೋಗಿಲ್ಲ. ಅದಕ್ಕೆ ಹೊಸರೂಪ ಕೊಡತಕ್ಕ ಕಾಲ ಇದೆ. ನಾನು ಹೇಳುತ್ತಿದ್ದುದು ಏನೆಂದರೆ, ರಾಜ್ಯದಲ್ಲಿ ನಮ್ಮನ್ನು ಆಳುತ್ತಿರತಕ್ಕ ಸರ್ಕಾರ ನಡೆಸತಕ್ಕ ತಮ್ಮ ಪಕ್ಷಕ್ಕೆ ಈ ಮಾತನ್ನು ಹೇಳುತ್ತಿದ್ದೆ. The city people are brokers and commission agents of big houses or Europe. America and Japan. ಈ ಮಾತನ್ನು ನಿಮ್ಮ ಪಕ್ಷದ ವತಿಯಿಂದ ಹೇಳತಕ್ಕ ಧೈರ್ಯ ಇದೆಯೇ? ಅಮೆರಿಕಾ ಎಂದ ತಕ್ಷಣ ಕೃಷ್ಣನ್ ಅವರಿಗೆ ಬಹಳ ಕುತೂಹಲ.

ಶ್ರೀ ಎಂ.ಎಸ್. ಕೃಷ್ಣನ್.- ಅದೇನು? ಇನ್ನೊಂದು ಸಾರಿ ಓದಿ.

ಶ್ರೀ ಕೆ.ಎಚ್. ರಂಗನಾಥ್.- ಮಹಾತ್ಮಗಾಂಧಿಯವರು ಹೇಳಿದ ಮಾತುಗಳನ್ನು ಹೇಳುತ್ತಿದ್ದೆ. ಅಮೆರಿಕಾ, ಜಪಾನ್ ಎಂದರೆ ಕೃಷ್ಣನ್ ಅವರಿಗೆ ಕುತೂಹಲ.

> "Our cities are not India. India lives is seven and a half lakhs of villages and the cities live upon the villages. They do not bring their wealth from other countries. The city people are brokers and commission agents of big houses of Europe, America and Japan. The cities have co-operated with the latter in the difficult process that has gone on in the past 200 years.

ಎನ್ನುವ ಮಾತನ್ನು ಹೇಳಿದ್ದಾರೆ. ನಾನು ಏನು ಕೇಳುತ್ತಿದ್ದೆ ಎಂದರೆ.

ಶ್ರೀ ಎಸ್. ಸೂರ್ಯನಾರಾಯಣರಾವ್.- ಸಿಟಿಯಲ್ಲಿರುವ ಇಂಡಸ್ಟ್ರಿಯಲ್ ವರ್ಕ್‌ರ್ಸ್ ನಾಳೆ ರೆವೆಲ್ಯೂಷನ್ ಆಗಬಹುದೆಂಬುದನ್ನು ಮರೆತಿದ್ದಾರೆ.

ಶ್ರೀ ಎಂ.ಎಸ್. ಕೃಷ್ಣನ್.- ಸ್ವಾಮಿ, ಶ್ರೀಮಂತರು ಮತ್ತು ಗುತ್ತಿಗೆದಾರರು ಸಿಟಿಗಳನ್ನು ಮನಾಪಲಿ ಮಾಡಿರುವುದರಿಂದ ಅವರು ಸಿಟೀಸ್ ಅಂತ ಹೇಳಿದ್ದಾರೆ. ಸ್ಲಮ್ ಡ್ವೆಲ್ಲರ್ಸ್, ಕೃಷಿ ಕಾರ್ಮಿಕರು ಮತ್ತು ಇತರೇ ಕಾರ್ಮಿಕರ ಬಗ್ಗೆ ಏನು ಯೋಚನೆ ಮಾಡುತ್ತಿದ್ದೀರಿ ಅದು ಮಾನ್ಯ ನಜೀರ್ ಸಾಹೇಬರ ಫಿಲಾಸಫಿ.

ಶ್ರೀ ಕೆ.ಹೆಚ್. ರಂಗನಾಥ್.- ಅವರ ಫಿಲಾಸಫಿ ತೆಗೆದುಕೊಂಡರೆ ಗೋವಿಂದನೇ ಗತಿ.

**Sri Abdul Nazeer Sab.-** Gandhiji has said about the Slums that slums of cities are nothing but overflowing the poverty of rural India.

ಶ್ರೀ ಕೆ.ಎಚ್. ರಂಗನಾಥ್.- ನಾನು ನಗರಗಳ ಬಗ್ಗೆ ಪ್ರಸ್ತಾಪ ಮಾಡುತ್ತಾ ಇಲ್ಲ. ಅವರ ಫ್ಯೂಸ್ ಏನು ಇದೆ ಅಂತ ಹೇಳಿದೆ ಅಷ್ಟೆ. ಗಾಂಧೀಜೀಸ್ ಫಿಲಾಸಫಿ ಬಗ್ಗೆ ಈ ಪುಸ್ತಕದಲ್ಲಿ ಏನು ಇದೆ ಅದನ್ನು ಹೇಳಿದ ಅಷ್ಟೆ, ಸಿಟೀಸ್ ಬಗ್ಗೆ, ರೂರಲ್ ಬಗ್ಗೆ, ಸೆಲ್ಫ್ ಎಫಿಷಿಯೆನ್ಸಿ ಬಗ್ಗೆ ಐಡಿಯಲ್ ವಿಲೇಜಸ್ ಬಗ್ಗೆ ಮಾನ್ಯ ಮಂತ್ರಿಗಳು ಏನು ಪ್ರಸ್ತಾಪ ಮಾಡಿದವರು ಅದಕ್ಕೆ ನಾನು ಈ ಪುಸ್ತಕದಲ್ಲಿರುವುದನ್ನು ಹೇಳಿದೆ.

ಶ್ರೀ ಎಸ್. ಸೂರ್ಯನಾರಾಯಣರಾವ್.- ಗಾಂಧೀಜಿಯವರು ಇಂಡಸ್ಟ್ರಿಯಲೈಸೇಷನ್ ಬೇಡ ಅನ್ನುವುದಾಗಿದ್ದರೆ ನಾವು 18ನೇ ಸೆಂಚುರಿಗೆ ಹೋಗಬೇಕಾಗುತ್ತಿತ್ತು.

ಶ್ರೀ ಕೆ.ಎಚ್. ರಂಗನಾಥ.- ನಾನು ನಗರಗಳ ಬಗ್ಗೆ ಮಾತನಾಡುತ್ತಾ ಇಲ್ಲ. ಗ್ರಾಮಗಳ ವಿಷಯಗಳ ಬಗ್ಗೆ ಹೇಳುತ್ತಿದ್ದೇನೆ. ಅವರು ಗ್ರಾಮಗಳು ಹೇಗಿರಬೇಕು ಅನ್ನುವ

ಅರ್ಥದಲ್ಲಿ ಹೀಗೆ ಹೇಳಿದ್ದಾರೆ. ನಾನು ಈ ಮಾತನ್ನು ಏತಕ್ಕೆ ಹೇಳುತ್ತಿದ್ದೇನೆಂದರೆ since there will be no system of punishment in the accepted sense this panchayat will be the Legisalature, Judiciary and the Executive combined to co-operatorate for its year of office. ಬೆಳಗ್ಗೆ ತಾನೇ ಮಾನ್ಯ ಮಂತ್ರಿಗಳು ಹೇಳಿದರು, ಆದನ್ನು ಯಾವ ಉದ್ದೇಶದಿಂದ ಹೇಳಿದರೋ ಗೊತ್ತಾಗಲಿಲ್ಲ. ಮುಂದೆ ಇವರು ಏನು ಹೇಳಿದ್ದಾರೆ ಎಂದು Any village will become such a republic to-day without much interference even from the present government whose sole effective connection with that village is the execution of village revenue ಅಂತ ಹೇಳಿದ್ದಾರೆ.

ಹಿಂದೆ ಭೂಕಂದಾಯದ ರೂಪದಲ್ಲಿ ಈ ಹಣವನ್ನು ತೆಗೆದುಕೊಳ್ಳುತ್ತಿದ್ದರೆ, ನಾಳೆ ದಿವಸ ಇದು ಇನ್ನು ಬೇರೆ ರೂಪದಲ್ಲಿ ಅಂದರೆ ಸೇಲ್ಸ್‌ಟ್ಯಾಕ್ಸ್ ರೂಪದಲ್ಲೋ ಇನ್ನಾವುದರಲ್ಲೋ ತೆಗೆದುಕೊಳ್ಳುತ್ತಾರೆ. Beyond that we are not providing them anything at all ಗಾಂಧೀಜಿಯವರು ಮುಂದುವರೆದು ಮತ್ತೇನು ಹೇಳಿದ್ದಾರೆ ಎಂದರೆ, I have not examined here the question of relations with the neighbouring villages and the centres if any. ಎಂದು ಹೇಳಿದ್ದಾರೆ. ಒಂದು ಗ್ರಾಮಕ್ಕೂ ಇನ್ನೊಂದು ಗ್ರಾಮಕ್ಕೂ ಹೇಗೆ ಸಂಬಂಧ ಇರಬೇಕು ಎನ್ನುವುದನ್ನು ಹೇಳಿದ್ದಾರೆ. ಮುಂದುವರೆದು ಅವರು ರಿಪಬ್ಲಿಕ್ ಬಗ್ಗೆ ಏನು ಹೇಳಿದ್ದಾರೆ ಎಂದರೆ ವಿಲೇಜಸ್ ಷುಡ್ ಬಿ ಎ ರಿಪಬ್ಲಿಕ್ ಅಂತ ಹೇಳಿದ್ದಾರೆ. ಇದನ್ನು ತಾವು ಅರ್ಥ ಮಾಡಿಕೊಳ್ಳಬೇಕು. ಈವೊತ್ತಿನ ಒಂದು ಪರಿಸ್ಥಿತಿ ನೋಡಿದರೆ ರಾಜ್ಯ ಮತ್ತು ಕೇಂದ್ರದ ಬೆಳವಣಿಗೆ ನೋಡಿದರೆ ಸಣ್ಣಪುಟ್ಟ ವಿಷಯಗಳನ್ನೂ ಕೂಡ ದೊಡ್ಡದನ್ನಾಗಿ ಮಾಡಿಕೊಂಡು ಅದನ್ನು ಮೇಲಟ್ಟಕ್ಕೆ ತೆಗೆದುಕೊಂಡು ಹೋಗುವ ಸಾಧ್ಯತೆಯೂ ಇದೆ. ನಾನೂ ಆ ಬಗ್ಗೆ ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ, ಈ ಮಸೂದೆಯನ್ನು ಡ್ರಾಫ್ಟ್ ಮಾಡಿರತಕ್ಕಂಥಾ, ನಿಮಗೆ ಸಹಾಯ ಮಾಡಿರತಕ್ಕಂಥಾ ಕಾನೂನು ಅಧಿಕಾರಿಗಳು ಏನು ಇದ್ದಾರೋ ಅವರು ಈ ಒಂದು ವಿಷಯವನ್ನು ನೋಡಿದ್ದಾರೋ ಇಲ್ಲವೋ ನನಗೆ ಗೊತ್ತಿಲ್ಲ. ನನಗೆ ಈ ಮಸೂದೆ ನೋಡಿದಾಗ ಯಾವಾಗ ಅನುಮಾನ ಬಂತು ಎಂದರೆ ಇದರಲ್ಲಿ ಮಿಸ್‌ಲೇನಿಯಸ್ ಘಾಸ್ಟರ್ ನೋಡಿದಾಗ ನನಗೆ ಗೊತ್ತಾಯಿತು, ಈ ಕೈಯಿಂದ ಆ ಕೈಯಿಂದ ತೆಗೆದುಕೊಂಡಿರುವುದು.

ಜಿಲ್ಲಾ ಪರಿಷತ್ತಿಗೆ ನೇರವಾಗಿ ಚುನಾವಣೆ ಮಾಡುತ್ತೀರಿ, ಹಾಗೆಯೇ ತಾಲ್ಲೂಕು ಮಂಡಲಿಗೂ ಸಹ ನೇರವಾಗಿ ಚುನಾವಣೆ ಮಾಡುತ್ತೀರಿ, ಆದರೆ ತಾಲ್ಲೂಕು ಬೋರ್ಡುಗಳು ಏನು ಇವೆ, ಇವು ಗ್ರಾಮ ಪಂಚಾಯಿತಿಗಳನ್ನು ಸೂಪರ್‌ವಿಷನ್ ಮಾಡುವ ಹಾಗೆ ಮಾಡಿದ್ದೀರಿ. ಹಾಗೆಯೇ ಮಂಡಲ್ ಪಂಚಾಯಿತಿಗೆ ಮತ್ತು ಜಿಲ್ಲಾ ಪರಿಷತ್‌ಗಳಿಗೆ ಹೆಚ್ಚಿನ

ಅಧಿಕಾರವನ್ನು ಸಹ ಕೊಟ್ಟಿದ್ದೀರಿ. ಈವೊತ್ತಿನ ಪರಿಸ್ಥಿತಿಯಲ್ಲಿ ಗ್ರಾಮಮಟ್ಟದಲ್ಲಿ ತಮ್ಮದೇ ಆದಂಥಾ ಆದಾಯದಿಂದ ತಾವು ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವುದಕ್ಕಾಗಿ ಈ ಅಧಿಕಾರ ವಿಕೇಂದ್ರೀಕರಣ ಆಗಬೇಕು ಎನ್ನುವುದನ್ನು ನಾನೂ ಸಹ ಒಪ್ಪುತ್ತೇನೆ. ನಮ್ಮ ಪಕ್ಷವೂ ಸಹ ಒಪ್ಪುತ್ತದೆ. ಆ ಬಗ್ಗೆ ನಾವು ಯಾರೂ ಕೂಡ ಹಿಂದೆ ಬಿದ್ದಿಲ್ಲ ಅನ್ನುವ ಮಾತನ್ನು ಹೇಳುತ್ತೇನೆ. ಹಿಂದೆ ಹಳೇ ಮೈಸೂರಿನಲ್ಲಿ ಡಿಸ್ಟ್ರಿಕ್ಟ್ ಬೋರ್ಡ್ ಆಕ್ಟ್ ಇತ್ತು. ಬೊಂಬಾಯಿ ಪ್ರದೇಶದಲ್ಲೂ ಇತ್ತು, ಮದ್ರಾಸ್‌ನಲ್ಲೂ ಇತ್ತು. ಅದರಂತೆ ಗ್ರಾಮಪಂಚಾಯಿತಿಗಳು ತಮ್ಮ ಕೆಲಸಗಳನ್ನು ಮಾಡಿಕೊಂಡು ಹೋಗುತ್ತಿದ್ದವು. ಆ ಕಾಲದಲ್ಲೇ ಈ ಗ್ರಾಮ ಪಂಚಾಯಿತಿಗಳಿಗೆ ಅಧಿಕಾರ ಕೊಡಬೇಕು ಎನ್ನುವುದು ಇತ್ತು. ಅಲ್ಲದೆ ರಿಪ್ಪನ್ ತನ್ನ ಕಾಲದಲ್ಲೇ ಈ ಗ್ರಾಮ ಪಂಚಾಯಿತಿಗಳಿಗೆ ಹೆಚ್ಚಿನ ಅಧಿಕಾರ ಕೊಡಬೇಕು ಎಂದು ಹೇಳಿದ್ದಾನೆ. ಈ ಮುಗ್ಧ ಜನರ ಕೈಯಲ್ಲಿ ಅಧಿಕಾರ ಕೊಡುವುದು ಸರಿಯಲ್ಲ ಎಂದು ಯಾರೂ ಹೇಳುವುದಿಲ್ಲ. ಅವರಿಗೆ ಅಧಿಕಾರ ಕೊಡಬೇಕು. ಆದರೆ ಅವರಿಗೆ ಇದನ್ನೆಲ್ಲಾ ತಿಳಿದುಕೊಳ್ಳಲು ಸ್ವಲ್ಪ ಕಾಲಾವಕಾಶ ಕೊಡಬೇಕು. ಇದಕ್ಕಾಗಿ ಪೂರ್ವ ಭಾವಿಯಾಗಿ ಇಂಥಾ ಒಂದು ಸಮಾಜ ನಿರ್ಮಾಣವಾಗಬೇಕು ಎಂದು ಹೇಳುತ್ತೇನೆ. ಆದರೆ ಈವೊತ್ತು ಇರತಕ್ಕಂಥಾ ಸಮಾಜದ ಪರಿಸ್ಥಿತಿಯೇ ಬೇರೆ. ಈವೊತ್ತು ಸಾಮಾನ್ಯವಾಗಿ ಇರತಕ್ಕಂಥಾದ್ದು ನಮ್ಮ ದೇಶದಲ್ಲಿ ಆರ್ಥಿಕ ಅಸಮಾನತೆ ಅಲ್ಲ, ಜಾತೀಯ ಅಸಮಾನತೆ. ಇದನ್ನು ತೆಗೆಯುವುದಕ್ಕೆ ಪ್ರಯತ್ನ ಮಾಡಬೇಕು. ಕೆಳಮಟ್ಟದ ವರ್ಗದವರನ್ನು ಮೇಲಕ್ಕೆತ್ತುವುದಕ್ಕೆ ಅದಕ್ಕೆ ಸಹಾಯವಾಗುವ ರೀತಿಯಲ್ಲಿ ಕೆಲಸ ಮಾಡಬೇಕು. ಈ ಒಂದು ಕೆಲಸ ಎಷ್ಟರ ಮಟ್ಟಿಗೆ ಸಹಾಯವಾಗುತ್ತದೆ ಅನ್ನುವ ಪ್ರಶ್ನೆ ಮುಂದೆ ಬರುತ್ತದೆ. ಈವೊತ್ತಿನ ದಿವಸ ನಾನು ಚುನಾವಣೆ ತಕರಾರು ಬಗ್ಗೆ, ಈ ಮಸೂದೆಯಲ್ಲಿರತಕ್ಕಂಥಾ ಕಾಲಂಗಳ ಬಗ್ಗೆ ನಾನು ಚರ್ಚೆ ಮಾಡುವುದಕ್ಕೆ ಹೋಗುವುದಿಲ್ಲ.

ಇನ್ನೊಂದು ವಿಷಯ ಏನೆಂದರೆ, ಮಂಡಲ್ ಪಂಚಾಯಿತಿಯವರು ತಮ್ಮದೇ ಆದಂಥಾ ಹಣದಲ್ಲಿ ಖರ್ಚು ಮಾಡಬೇಕು ಅಂತ ಹೇಳಿದ್ದೀರಿ. ರಾಜ್ಯಮಟ್ಟದಲ್ಲಿ ಕನ್‌ಸಾಲಿಡೇಟ್ ಫಂಡ್ ಇದ್ದ ಹಾಗೆ ಜಿಲ್ಲಾ ಮಟ್ಟದಲ್ಲೂ ಕೂಡ ಒಂದು ಫಂಡ್ ಇಟ್ಟುಕೊಳ್ಳಬೇಕು. ಅವರಿಗೆ ಪ್ರಾಥಮಿಕ ಆದಾಯ ಮೊದಲು ಯಾವುದೂ ಬರುವುದಿಲ್ಲ, ಅವೆಲ್ಲಾ ತದನಂತರ ಬರುತ್ತದೆ. ಅದ್ಯಾವುದು ಎಂದರೆ ಸರ್ಕಾರದಿಂದ ಗ್ರ್ಯಾಂಟ್ ಕೊಡುವುದಾಗಲಿ ಅಥವಾ ಸಾಲ ಕೊಡುವುದಾಗಲಿ ಅಥವಾ ಬೇರೆ ಬೇರೆ ಡೆವೆಲಪ್‌ಮೆಂಟ್ ವರ್ಕ್ಸ್‌ನಿಂದ ಏನು ಬರುತ್ತದೋ ಅವೆಲ್ಲಾ ಆಮೇಲೆ ಬರುತ್ತದೆ. ಈಗ ಇದರ ಬಗ್ಗೆ ಏನು ವ್ಯವಸ್ಥೆ ಮಾಡಿದ್ದೀರಿ ಅನ್ನುವುದನ್ನು ಹೇಳಿಲ್ಲ. ಅಲ್ಲದೆ ನಾನು ನೋಡಿದ ಹಾಗೆ ಇದರಲ್ಲಿ ಯಾವ ಕಲಂನಲ್ಲೂ ಕೂಡ ಏನು ಕೊಟ್ಟ ಹಾಗೆ ಕಾಣಲಿಲ್ಲ. ತಾವು ಉತ್ತರ ಕೊಡುವಾಗ ಈ ಬಗ್ಗೆ ಹೇಳಬೇಕು. ಈ ವಿಚಾರದಲ್ಲಿ ಮಾನ್ಯ ಮಂತ್ರಿಗಳನ್ನು ಎರಡು ಪ್ರಶ್ನೆಗಳನ್ನು ಕೇಳಬಯಸುತ್ತೇನೆ, ನಾನು ಅಶೋಕ ಮೆಹ್ತಾ ರಿಪೋರ್ಟ್‌ನ್ನು ಓದಿದ್ದೇನೆ. ಅವರ ಒಂದು

ಹಿನ್ನೆಲೆಯಲ್ಲಿ ಈ ಸಮಾಜವಾದೀ ತತ್ವವನ್ನು ನಾನು ಒಪ್ಪಿಕೊಳ್ಳಬೇಕಾಗುತ್ತದೆ, ಆದರೆ ಆ ಒಂದು ರಿಪೋರ್ಟ್‌ನಲ್ಲಿ ಇರತಕ್ಕಂಥಾದ್ದು ಏನು ಎಂದರೆ ಜಯಪ್ರಕಾಶ್ ನಾರಾಯಣ್‌ರವರು ಇದರಲ್ಲಿ ಪಕ್ಷಾತೀತವಾಗಿ ಇರಬೇಕು ಅಂತ ಹೇಳಿದ್ದಾರೆ. ಪಂಚಾಯಿತಿಯಲ್ಲಿ ಯಾವ ವ್ಯಕ್ತಿಯೇ ಇರಲಿ ಅವರು ಪಕ್ಷಾತೀತನಾಗಿ ಇರಬೇಕು ಯಾವ ಪಕ್ಷದ ಒಳಗಡೆಯೂ ಇರಬಾರದು ಎಂದು ನಾನೂ ಸಹ ಹೇಳುತ್ತೇನೆ. ಹಾಗಿಲ್ಲವೇ ಹೋದರೆ ನಮ್ಮ ದೇಶದಲ್ಲಿ ಒಳ್ಳೆಯ ವಾತಾವರಣವನ್ನು ನಿರ್ಮಾಣ ಮಾಡುವುದಕ್ಕಾಗುವುದಿಲ್ಲ.

ಶ್ರೀ ಕೆ.ಜಿ. ಮಹೇಶ್ವರಪ್ಪ.– ಅವರು ಸರ್ವೋದಯಕ್ಕೆ ಹೋದಾಗ ಈ ಮಾತನ್ನು ಹೇಳಿದ್ದು.

ಶ್ರೀ ಕೆ.ಎಚ್. ರಂಗನಾಥ್.– ತಮಗೆ ಹೇಳಬೇಕಾದರೆ 1952ನೇ ಇಸವಿಯಲ್ಲೇ ಅವರು ಸರ್ವೋದಯಕ್ಕೆ ಹೋದುದು. ಅದು ತಮಗೆ ಗೊತ್ತಿದೆಯೋ ಇಲ್ಲವೋ. ತಮ್ಮ ಗಮನಕ್ಕೆ ತರುವುದಾದರೆ 1942ನೇ ಇಸವಿಯಲ್ಲೇ ಸೋಷಲಿಸ್ಟ್ ಪಕ್ಷ ಅನ್ನುವುದು ಹೊರಗಡೆ ಬಂದದ್ದು. 1952ನೇ ಇಸವಿಯಲ್ಲಿ ನಮ್ಮ ರಾಜ್ಯದಲ್ಲಿ ಸೋಷಲಿಸ್ಟ್ ಪಕ್ಷದವರು ಎಲ್ಲಾ ಸ್ಥಾನಗಳಿಗೂ ತಮ್ಮ ಅಭ್ಯರ್ಥಿಗಳನ್ನು ನಿಲ್ಲಿಸಿದರು. ಮಾನ್ಯ ಶಿವಪ್ಪನವರು ಚಿಕ್ಕಮಗಳೂರು ಕ್ಷೇತ್ರದಿಂದ ನಿಂತಿದ್ದರು. ಆ ಸಂದರ್ಭದಲ್ಲಿ ಸೋಷಲಿಸ್ಟ್ ಪಕ್ಷಕ್ಕೆ ಎಷ್ಟು ಸ್ಥಾನಗಳು ಬರಬೇಕಾಗಿತ್ತೋ ಅಷ್ಟು ಬರಲಿಲ್ಲ. ಆಗ ಅವರು ಸರ್ವೋದಯಕ್ಕೆ ತಕ್ಷಣ ಹೊರಟು ಹೋದರು.

ಇನ್ನೊಂದು ಸಾರಿ ಬೆಂಗಳೂರು ಗಾಜಿನ ಮನೆಯಲ್ಲಿ ಪಂಚಾಯಿತಿ ಸಮಿತಿ ನಡೆಯಿತು. ಆಗ ಇದ್ದಂಥಾ ಸಂಬಂಧಪಟ್ಟ ಮಾನ್ಯ ಮಂತ್ರಿಗಳು ಇದರ ಸುಧಾರಣೆ ಬಗ್ಗೆ ಏನೂ ಆ್ಯಕ್ಷನ್ ತೆಗೆದುಕೊಳ್ಳಲಿಲ್ಲ. ಆಗ ಅದರಲ್ಲಿ ಇದ್ದಂಥಾ ರಾಜಕೀಯ ಪಕ್ಷದವರೇ ಇದಕ್ಕೆ ಬೆಂಬಲ ಕೊಡಲಿಲ್ಲ. ಬಹಳಮಟ್ಟಿಗೆ ಈ ಮಾತನ್ನು ಹೇಳಿದರೆ ಆಡಳಿತ ಪಕ್ಷದ ಮಿತ್ರರು ಕ್ಷಮಿಸುತ್ತಾರೆಂದು ನಾನು ಭಾವನೆ ಮಾಡಿಕೊಳ್ಳುತ್ತೇನೆ. ಅಂದಿನಿಂದಲೂ ಹೇಳಿಕೊಂಡು ಬಂದರೂ, ಬೆಂಗಳೂರಿನಲ್ಲಿ ನಡೆದಂಥ ಪಂಚಾಯತ್ ರಾಜ್ಯ ಸಮ್ಮೇಳನದಲ್ಲಿ ಹಳ್ಳಿ ಮಟ್ಟದಲ್ಲಿ ರಾಜಕೀಯ ಇರಕೂಡದು ಎಂದು ಪ್ರಸ್ತಾಪ ಮಾಡಿಕೊಂಡು ಬಂದಿದ್ದಾರೆ. ತಾವು ಈ ಕಾನೂನಿನಲ್ಲಿ ತರಲಿಕ್ಕೆ ಪ್ರಯತ್ನ ಪಟ್ಟಿದ್ದೀರೋ ತಮ್ಮ ವಿಚಾರ ಏನು ಎನ್ನುವುದನ್ನು ಹೇಳಬೇಕು. ನನಗನಿಸುತ್ತದೆ. ರಾಜಕೀಯ ಪಕ್ಷಗಳು ಸಕ್ರಿಯವಾಗಿ ಗ್ರಾಮ ಮಟ್ಟದಿಂದ ರಾಜ್ಯಮಟ್ಟದವರೆಗೆ ಹಾಗೂ ರಾಷ್ಟ್ರಮಟ್ಟದವರೆಗೆ ವ್ಯವಸ್ಥಿತವಾಗಿ ಬೆಳೆಯುವುದಕ್ಕೆ ಅನುಕೂಲವಾಗುವಂಥ ಕಾನೂನು ನಮ್ಮ ಮುಂದೆ ಇವೆ.

ಶ್ರೀ ಎಂ.ಎಸ್. ಕೃಷ್ಣನ್.– ಪಕ್ಷಗಳು ಇರದಂಥ ಪ್ರಜಾಪ್ರಭುತ್ವ ಇರಬೇಕೆ? ಅಥವಾ ಪಕ್ಷಗಳು ಇರುವಂಥ ಪ್ರಜಾಪ್ರಭುತ್ವ ಇರಬೇಕೆ?

ಶ್ರೀ ಕೆ.ಎಚ್. ರಂಗನಾಥ್.- ಗ್ರಾಮಮಟ್ಟದಲ್ಲಿ ಪಾರ್ಟಿಲೆಸ್ ಗೌರ್ನಮೆಂಟ್ ಎಂದು ಹೇಳಿದ್ದಾರೆ.

ಶ್ರೀ ಅಬ್ದುಲ್ ನಜೀರ್‌ಸಾಬ್.- ಗ್ರಾಮಸಭೆಯಿಂದ ಲೋಕಸಭೆ, ಲೋಕಸಭೆಯಿಂದ ಗ್ರಾಮ ಸಭೆ ಅಂತ ಇಲ್ಲ. According to Gandhiji, the administrative unit must be a village. That was the opinion of Gandhiji.

ಶ್ರೀ ಕೆ.ಎಚ್. ರಂಗನಾಥ್.- ತಮ್ಮ ಅಭಿಪ್ರಾಯ ಈ ಕಾನೂನಿನಲ್ಲಿ ಪಕ್ಷಾತೀತ ವ್ಯವಸ್ಥೆಯನ್ನು ಗ್ರಾಮಮಟ್ಟದಿಂದ ರಾಜ್ಯಮಟ್ಟದವರೆಗೆ ಹಾಗೂ ರಾಷ್ಟ್ರಮಟ್ಟದವರೆಗೆ ಬೆಳೆಸತಕ್ಕ ವ್ಯವಸ್ಥೆ ಮತ್ತು ಮೂಲ ಉದ್ದೇಶ ನಿಮ್ಮದಾಗಿದೆಯೇ? ಗ್ರಾಮ ಮಟ್ಟದಿಂದ ಪಕ್ಷಾತೀತವಾದ ನಂತರ ಪಕ್ಷಗಳ ಒಲವು ಕಡಿಮೆಮಾಡತಕ್ಕ ಅಭಿಪ್ರಾಯ ಉಳ್ಳವರಾಗಿದ್ದೀರಾ? ಇದರ ಬಗ್ಗೆ ಮಾನ್ಯ ಮಂತ್ರಿಗಳು ಸ್ಪಷ್ಟೀಕರಣ ಕೊಡಬೇಕು. ಆಡಳಿತ ಪಕ್ಷದವರ ಅಭಿಪ್ರಾಯ ಏನು ಎನ್ನುವುದು ಗೊತ್ತಾಗಬೇಕು. ಮತ್ತೆ ಗಾಂಧೀಜಿಯವರ ಒಂದು ಅಭಿಪ್ರಾಯ ಇದರಲ್ಲಿ ಇಡುವುದಕ್ಕೆ ಪ್ರಯತ್ನ ಪಟ್ಟಿದ್ದೀರಾ ಹೇಗೆ? ಬಹಳ ಮಟ್ಟಿಗೆ ಗ್ರಾಮ ಸಭೆ ಬಗ್ಗೆ ಮಾತುಗಳನ್ನು ಆಡಿದ್ದಾರೆ. ಅಶೋಕ ಮೆಹ್ತಾ ವರದಿಯನ್ನು ಪ್ರಸ್ತಾಪ ಮಾಡಿದ್ದಾರೆ. ಅವರ ಉದ್ದೇಶ ಕೂಡ ಪಕ್ಷಗಳ ಬೆಳವಣಿಗೆಯಾಗಬೇಕು ಎನ್ನುವ ಉದ್ದೇಶವನ್ನೇ ಇಟ್ಟುಕೊಂಡಿದ್ದಾರೆ. ಪ್ರಜಾಪ್ರಭುತ್ವದಲ್ಲಿ ವ್ಯವಸ್ಥೆ ಆಗಬೇಕಾಗಿದ್ದರೆ, ಪಕ್ಷ ಸಿದ್ಧಾಂತ, ಸಿದ್ಧಾಂತದ ಜೀವ ಸ್ಪಷ್ಟವಾಗಿ ಬರಬೇಕೆಂದು ಹೇಳಿದ್ದಾರೆ. ಪ್ರಸ್ತಾಪ ಮಾಡದೇ ಇದ್ದರೂ ಬೇರೆ ರೂಪದಲ್ಲಿ ಪ್ರಚಲಿತವಾಗಿ ಜಾರಿಗೆ ಬರತಕ್ಕಂಥ ವ್ಯವಸ್ಥೆ ಇದೆ ಎಂದು ನನಗೆ ಅರ್ಥವಾಗಿದೆ.

ನಾನು ಮಾನ್ಯ ಮಂತ್ರಿಗಳನ್ನು ಕೇಳತಕ್ಕಂಥಾದ್ದು ಮಹಾತ್ಮಾ ಗಾಂಧೀಜಿಯವರ ಅಭಿಪ್ರಾಯಗಳನ್ನು ಇದರಲ್ಲಿ ತಾವು ಅಳವಡಿಸಿಕೊಳ್ಳುವುದಕ್ಕೆ ಎಷ್ಟರ ಮಟ್ಟಿಗೆ ಪ್ರಯತ್ನ ಮಾಡಿದ್ದೀರಿ. ಯಾವ ಕಲಮಿನಲ್ಲಿ ಅದರ ಉಲ್ಲೇಖವನ್ನು ಒಂದಲ್ಲ ಒಂದುರೀತಿಯಲ್ಲಿ ಸಣ್ಣ ಎಳೆಯಾಗಿಯಾದರೂ ಪ್ರಸ್ತಾಪ ಮಾಡಿದ್ದೀರಿ ಎನ್ನುವುದನ್ನು ತಾವು ಹೇಳಬೇಕು.

ಶ್ರೀ ಅಬ್ದುಲ್ ನಜೀರ್‌ಸಾಬ್.- ಸ್ವಾಮಿ,ಜನತೆಗೆ ಅಧಿಕಾರ ಕೊಡಬೇಕು. ಮಹಾತ್ಮಾಗಾಂಧೀಜಿಯ, ಬಾಪೂವಿನ ಅರ್ಥ ವ್ಯವಸ್ಥೆಯನ್ನು ಸಂಕೀರ್ಣವಾದುಥ ಮಂಡಲ್ ಪಂಚಾಯ್ತಿ ಮತ್ತು ಜಿಲ್ಲಾ ಪರಿಷತ್ತಿನಲ್ಲಿ ನೋಡುವುದಕ್ಕೆ ಸಾಧ್ಯವಿಲ್ಲ. ಇಡೀ ದೇಶದ ಸಮಗ್ರ ಚಿತ್ರವನ್ನು, ಇಡೀ ಜಗತ್ತಿನ ಸಮಗ್ರ ಚಿತ್ರವನ್ನು ಇಲ್ಲಿ ನೋಡುವುದಕ್ಕೆ ಸಾಧ್ಯವಿಲ್ಲ. ಆ ಮಹಾತ್ಮನಿಗೆ ಅಪಚಾರ ಮಾಡುವುದಕ್ಕೆ, ಅವರ ಹೆಸರು ಹೇಳುವುದಕ್ಕೆ ಸಾಧ್ಯವಿಲ್ಲ. ಆತ ಹೇಳಿದಂಥ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆ ಮುಟ್ಟಬೇಕಾದರೆ ರಾಷ್ಟ್ರೀಯ ಪ್ರಯುತ್ನ ಮಾಡಬೇಕು. ಈ ಒಂದು ಚಿಕ್ಕ ಮಸೂದೆಯಲ್ಲಿ ಮಾಡುವುದಕ್ಕೆ ಸಾಧ್ಯವಿಲ್ಲ. ಆದರೆ, ಮೂಲ ಸಿದ್ಧಾಂತವನ್ನು ಇಟ್ಟುಕೊಂಡಿದ್ದೇವೆ. ಯಾವ ಅಭಿವೃದ್ಧಿ ಶೀಲ ದೇಶವೇ ಆಗಲಿ,

ಸಕ್ರಿಯವಾಗಿ ಚುನಾಯಿತ ಸಂಸ್ಥೆಗಳ ಮೂಲಕ ಅಧಿಕಾರ ನಡೆಸತಕ್ಕ ಗಾಂಧೀಜಿಯ ಮೂಲ ಉದ್ದೇಶವನ್ನು ಪ್ರತಿಯೊಂದು ಕಲಮಿನಲ್ಲಿಯೂ ಚಿಮ್ಮುವಂಥ ವ್ಯವಸ್ಥೆಯನ್ನು ಮಾಡಿದ್ದೇವೆ. 1959ರ ಆಕ್ಟನ್ನು ನಾವು ಅನುಭವಿಸುತ್ತಿದ್ದೇವೆ. ಯಾವುದೇ ಆಕ್ಟಿನಲ್ಲಿಯೂ ಪಾರ್ಟಿಯ ವಿಚಾರಗಳು ಇರುತ್ತವೆ. ಇದು ಇವತ್ತು ಇಡೀ ರಾಜ್ಯದ ಕಾನೂನಿನಲ್ಲಿ ಹೋಗಬೇಕಾಗುತ್ತದೆ. ಎಲೆಕ್ಷನ್ ಲಾ ಮಾಡುವಾಗ ಪಾರ್ಟಿಯಿಂದ.....

ಶ್ರೀ ಕೆ.ಎಚ್. ರಂಗನಾಥ್.- ನಾನು ಹೇಳಿದ್ದು ಯಾವ ಕಲಂನಲ್ಲಿಯೂ ಬರುವುದಿಲ್ಲ. ನಾನು ತೀರಾ ದಡ್ಡ ಅಲ್ಲ. ಗಾಂಧೀಜಿಯವರ ಅಭಿಪ್ರಾಯ ಯಾವ ಕಲಂನಲ್ಲಿ ಸಣ್ಣ ಎಳೆಯಾಗಿ ಪ್ರಸ್ತಾಪ ಮಾಡಿದ್ದೀರಿ. ಇದರ ಬಗ್ಗೆ ತಾವು ಉತ್ತರಕೊಡಬೇಕು. ಮಾತೆತ್ತಿದರೆ ಜನತಾ ಪಕ್ಷದವರು ಗಾಂಧೀ ಫೋಟೋ, ಜಯಪ್ರಕಾಶ್ ನಾರಾಯಣ್ ಫೋಟೋ ಹಾಕುತ್ತೀರಿ. ಗಾಂಧಿಯಿಸಮ್ ಎಂದು ಹೇಳಿಕೊಳ್ಳುತ್ತೀರಿ. ತಜ್ಞರು ಹೇಳಿದ್ದಾರೆ. ರಾಜಕೀಯ ಪಕ್ಷಗಳ ಒಲವು ಇಲ್ಲದೆ ಪಂಚಾಯ್ತಿ ವ್ಯವಸ್ಥೆಯನ್ನು ಮಾಡುವುದಕ್ಕೆ ಸಾಧ್ಯವಿಲ್ಲ ಎನ್ನುವಂಥ ಮಾತುಗಳನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಪೊಲಿಟಿಕಲ್ ಕಾನ್‌ಸಿಕ್ವೆನ್ಸಸ್ ಆಫ್ ಪಂಚಾಯ್ತ್ ರಾಜ್ ಎಂಬ ಪುಸ್ತಕದಲ್ಲಿ ಒಂದು ಲೇಖನ ಇದೆ. ಅದರಲ್ಲಿ ರಾಜಕೀಯ ಪ್ರಭಾವ ಇದ್ದೇ ಇರುತ್ತದೆ ಎನ್ನುವಂಥ ಮಾತನ್ನು ಹೇಳಿದ್ದಾರೆ. ಸಾಧಾರಣ ಮನುಷ್ಯನನ್ನು ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಮೇಲಕ್ಕೆತ್ತುವುದಕ್ಕೆ ಸಾಧ್ಯವಿಲ್ಲ ಎನ್ನುವಂಥ ಮಾತನ್ನು ಹೇಳಿದ್ದಾರೆ. ಅದರ ಬಗ್ಗೆ ಅಂಕಿ ಅಂಶಗಳನ್ನು ತೋರಿಸಿರತಕ್ಕಂಥಾದ್ದು ಕಾಣುತ್ತಿದೆ. ನಾನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ. ನಮ್ಮ ಅಭಿಪ್ರಾಯ, ಸಭೆಯ ಅಭಿಪ್ರಾಯ ಸಾಧಾರಣ ಮನುಷ್ಯನನ್ನು ಮೇಲಕ್ಕೆತ್ತಬೇಕು ಎನ್ನುವುದು. ಯೋಜನಾ ಬದ್ಧವಾಗಿರತಕ್ಕ ಆರ್ಥಿಕ ವ್ಯವಸ್ಥೆ ಮಾಡುವಾಗ, ಯೋಜನೆಯಲ್ಲಿ ಬರತಕ್ಕ ಹಣ ತಲುಪಿಸತಕ್ಕಂಥ ವ್ಯವಸ್ಥೆ, ತಲುಪಿಸಿ ನೇರವಾಗಿ ಅನುಕೂಲವಾಗುವ ಹಾಗೆ ಆಗಿದೆಯೆಂದು ನಮ್ಮ ಅನುಭವದಿಂದ ನೋಡುವಾಗ ಹಳ್ಳಿಗಾಡಿನಲ್ಲಿ ಇರತಕ್ಕ ಇದ್ದಂತವರ ಪಾಲು ಪಂಚಾಯ್ತಿಗಳ ವಶವಾಗಿವೆ. ಇದ್ದವರ ಪಾಲು ಸಹಕಾರ ಸಂಘಗಳು ವಶವಾಗಿವೆ. ಇದ್ದಂತವರ ಪಾಲು ವಿದ್ಯಾಸಂಸ್ಥೆಗಳಿಗೆ ಹೋಗಿವೆ, ಉಳ್ಳವರಿಗೆ ಎಲ್ಲಾ ಅನುಕೂಲಗಳು ಬರುವಾಗ ಯಾವ ಪ್ರಮಾಣದಲ್ಲಿ ಸಾಧಾರಣ ಮನುಷ್ಯನಿಗೆ ತಲುಪುತ್ತಿವೆ ಎನ್ನುವ ಬಗ್ಗೆ ಎಲ್ಲೂ ಕೂಡ ಕರಾರುವಕ್ಕಾದ, ನಿಖರವಾದ ಅಂಕಿಅಂಶಗಳು ದೊರೆಯುತ್ತಿಲ್ಲ. ನಮ್ಮ ರಾಜ್ಯದ ಮಟ್ಟಿಗೆ 5 ವಿಶ್ವವಿದ್ಯಾನಿಲಯಗಳು ಇವೆ. ಯಾವ ವಿಶ್ವವಿದ್ಯಾನಿಲಯದಲ್ಲೂ ಸೋಷಿಯಲ್ ಸೈನ್‌ಟಿಸ್ಟ್, ಎಕಾನಾಮಿಕ್ ಸೈನ್‌ಟಿಸ್ಟ್ ವಿಚಾರದಲ್ಲಿ ಒಂದು ಸರ್ವೆ ಮಾಡಿ ಅಂಕಿ ಸಂಖ್ಯೆಗಳನ್ನು ಇಟ್ಟಿಲ್ಲ.

ಶ್ರೀ ಅಬ್ದುಲ್ ನಜೀರ್‌ಸಾಬ್.- ಡಾ|| ಭಾರ್ಗವ ಮಾಡಿದ್ದಾರೆ.

ಶ್ರೀ ಕೆ.ಎಚ್. ರಂಗನಾಥ್.- ಡಾ|| ತಿಮ್ಮಯ್ಯನವರು ಮಾಡಿದ್ದಾರೆ. ನೂರಕ್ಕೆ 70 ಭಾಗ ಬಡತನದ ರೇಖೆಯೊಳಗೆ ಬರುವಂಥ ಜನರಿರುವಾಗ ಹೆಚ್ಚು ಪ್ರಮಾಣದಲ್ಲಿ ಅಸ್ಪೃಶ್ಯರು ರಾಜ್ಯದಲ್ಲಿ ಹಾಗೂ ರಾಷ್ಟ್ರದಲ್ಲಿರುವಾಗ ಅವರನ್ನು ಮೇಲಕ್ಕೆತ್ತುವುದಕ್ಕೆ ಸಾಮಾಜಿಕವಾಗಿ ಆರ್ಥಿಕವಾಗಿ ಏನು ಪ್ರಯತ್ನ ನಡೆದಿದೆ. ನಾವು ಈಗ 7ನೇ ಪಂಚವಾರ್ಷಿಕ ಯೋಜನೆಯಲ್ಲಿ

ಕಾಲಿಡುತ್ತಿದ್ದೇವೆ. 6ನೇ ಪಂಚವಾರ್ಷಿಕ ಯೋಜನೆಯನ್ನು ಮುಗಿಸಿದ್ದೇವೆ. ಎಷ್ಟು ಪಾಲು ಮತ್ತು ಹಣ ಅವನಿಗೆ ಹೋಗುತ್ತೆ. ಯಾವ ಪ್ರಮಾಣದಲ್ಲಿ ಹೋಗುತ್ತೆ; ಪ್ರತಿಫಲ ಏನಾಗಿದೆ ಎನ್ನುವ ಬಗ್ಗೆ ನಮ್ಮ ಮುಂದೆ ಅಂಕಿ ಸಂಖ್ಯೆಗಳು ಇಲ್ಲ. 18 ಪರ್ಸೆಂಟ್ ಇಯರ್‌ಮಾರ್ಕ್ ಮಾಡಿಕೊಟ್ಟಿದ್ದೀರಿ. ಪಂಚಾಯ್ತಿಯಲ್ಲಿ ತಾಲ್ಲೂಕು ಬೋರ್ಡಿನಲ್ಲಿ 18 ಪರ್ಸೆಂಟ್ ಇಟ್ಟುಬಿಡಿ ಎಂದು ಹೇಳುತ್ತಿದ್ದೇವೆ. ಇವನು ಬೇಡತಕ್ಕಂಥವನ ಪರಿಸ್ಥಿತಿಯಲ್ಲೂ, ಅವನು ಕೊಡತಕ್ಕಂಥವನ ಪರಿಸ್ಥಿತಿಯಲ್ಲೂ ಇರತಕ್ಕ ವ್ಯವಸ್ಥೆಯನ್ನು ಕಾಣುತ್ತಿದ್ದೇವೆ. ಈ ಸದನದಲ್ಲಿ ಪ್ರಸ್ತಾಪ ಮಾಡುವಾಗ ಇವನು ಮನುಷ್ಯ; ಮಾನವ ಶಕ್ತಿಯನ್ನು ರಾಷ್ಟ್ರದ ಸಂಪತ್ತು ಉತ್ಪಾದನೆಗಾಗಿ ಬಳಸಿಕೊಳ್ಳಬೇಕು; ದುಸ್ಥಿತಿಯಲ್ಲಿರುವವರ ಬಗ್ಗೆ ಮುಂದುವರಿದ ಜನತೆಯೂ ವಿಚಾರ ಮಾಡುವುದಿಲ್ಲ; ರಾಜಕೀಯ ಪಕ್ಷಗಳೂ ವಿಚಾರ ಮಾಡುವುದಿಲ್ಲ. ನಾವು ಅಂಥ ಒಂದು ವ್ಯವಸ್ಥೆಯಲ್ಲಿದ್ದೇವೆ.

ಇನ್ನು ಅಧ್ಯಕ್ಷರೇ, ನ್ಯಾಯ ಮಂಡಲಿಗಳಲ್ಲಿ ಕಾನೂನಿನ ಜ್ಞಾನ ಇರತಕ್ಕವರು ಇದ್ದರೆ ಸರಿ, ಇಲ್ಲದಿದ್ದರೆ ಅವರು ಎಂತಹ ನ್ಯಾಯವನ್ನು ಕೊಡಬಲ್ಲರು? ಇದರಲ್ಲಿ ಸಾಮಾನ್ಯ ಜ್ಞಾನ ವಿರತಕ್ಕವರು ಇರಲಿ ಎಂದು ಹಾಕಿದ್ದೀರಿ. 30 ವರ್ಷದಿಂದ ಅದನ್ನು 40 ವರ್ಷ ವಯಸ್ಸಿನವರೆಗೆ ಏರಿಸಿದ್ದೀರಿ. ಇವರಿಂದ ಅವರು ಪ್ರಭುದ್ಧರಾಗಿರುತ್ತಾರೆ ಎನ್ನತಕ್ಕ ಭಾವನೆ ನಿಮಗೆ ಇರಬಹುದು. ವಯಸ್ಸು ಜಾಸ್ತಿಯಾದ ತಕ್ಷಣ ಅವರು ಪ್ರಭುದ್ಧರಾಗಿರುತ್ತಾರೆ ಎನ್ನುವುದನ್ನು ಯಾವ ರೀತಿಯಾಗಿ ಹೇಳುತ್ತೀರಿ? ಕೆಲವರು ವಯಸ್ಸಾದ ಹಾಗೆಯೇ ಅಪ್ರಬುದ್ಧರ ಹಾಗೆ ವರ್ತಿಸುತ್ತಾರೆ. ಮತ್ತೆ ಕೆಲವರು ಚಿಕ್ಕ ವಯಸ್ಸಿನಲ್ಲಿ ಬಹಳ ಪ್ರಭುದ್ಧರಾಗಿರುತ್ತಾರೆ, ಮತ್ತು ಬುದ್ಧಿವಂತರೂ ಇರುತ್ತಾರೆ. ಆದುದರಿಂದ ತಾವು 30 ವರ್ಷದಿಂದ 40 ವರ್ಷಕ್ಕೆ ಏತಕ್ಕೆ ಏರಿಸಿದ್ದೀರಿ. ಇದರ ಬಗ್ಗೆ ಭೂ ನ್ಯಾಯ ಮಂಡಲಿಗಳಲ್ಲಿ ಹಾಕುವಾಗ ಬಂದಿದೆ. ಆದರೆ ಇಲ್ಲಿ ಏತಕ್ಕೆ ಅದರ ಬಗ್ಗೆ ಟೀಕೆ ಬರಲಿಲ್ಲ?

ಶ್ರೀ ಅಬ್ದುಲ್ ನಜೀರ್‌ಸಾಬ್.– ಸುಮಾರು 8 ಸೆಮಿನಾರ್‌ಗಳಲ್ಲಿ ಪ್ರಾಜ್ಞರಿರತಕ್ಕವರು ಇದರ ಬಗ್ಗೆ ಎಲ್ಲಾ ವಿಚಾರ ಮಾಡಿದ್ದಾರೆ. ಹಿಂದೆ ಒಂದು ಕಾಲದಲ್ಲಿ ವಿದ್ಯಾವಂತರು ಮಾತ್ರ ಓಟು ಕೊಡಬೇಕೆಂದು ಹೇಳತಕ್ಕದ್ದು ಇತ್ತು.

ಶ್ರೀ ಕೆ.ಎಚ್. ರಂಗನಾಥ್.– ನನ್ನ ಅಭಿಪ್ರಾಯವೇನೆಂದರೆ, ಭೂ ನ್ಯಾಯ ಮಂಡಲಿಗಳನ್ನು ಮಾಡಿದಾಗ ಅನೇಕ ಟೀಕೆಗಳು ಬಂದಿತ್ತು. ಆದರೆ ಇವತ್ತು ನ್ಯಾಯ ಪಂಚಾಯತ್‌ಗಳನ್ನು ಮಾಡುವಾಗ ಆ ಟೀಕೆ ಬರಲಿಲ್ಲ ಎನ್ನುವ ವಿಚಾರವನ್ನು ನಾನು ಪ್ರಸ್ತಾಪ ಮಾಡಿ ಹೇಳುತ್ತಿದ್ದೇನೆ.

ಶ್ರೀ ಅಬ್ದುಲ್ ನಜೀರ್‌ಸಾಬ್.– 5 ಜನರ ನ್ಯಾಯ ಮಂಡಲಿಗಳಲ್ಲಿ ಇಬ್ಬರು ಮಾತ್ರ ಸಾಧಾರಣ ಗುಂಪಿಗೆ ಸೇರಿದವರು ಇರುತ್ತಾರೆ. ಇನ್ನು 3 ಜನರಲ್ಲಿ ಎಂದರೆ ದಲಿತ ವರ್ಗಕ್ಕೆ ಸೇರಿದವರು ಇರುತ್ತಾರೆ. ದಲಿತ ವರ್ಗದವರು ಎಂದರೆ ಒಂದು ಹರಿಜನರು ಎರಡನೆಯದಾಗಿ ಹೆಣ್ಣುಮಕ್ಕಳು ಎಂದು ಹೇಳಿದ್ದಾರೆ. ಆದುದರಿಂದ ಇನ್ನು ಉಳಿದ ಮೂವರಲ್ಲಿ ಒಬ್ಬರು ಹರಿಜನರು ಮತ್ತೊಬ್ಬರು ಹೆಣ್ಣು ಮಕ್ಕಳು ಇರುತ್ತಾರೆ. ಹಳ್ಳಿಗಳಲ್ಲಿ ಹರಿಜನರು ನ್ಯಾಯ ಮಾಡುವುದಕ್ಕೆ ಎಲ್ಲಿ ಪ್ರಾತಿನಿಧ್ಯವಿತ್ತು; ಇವತ್ತು ನಾವು ಅವರಿಗೆ ಆ

ಹಕ್ಕನ್ನು ಕೊಟ್ಟಿದ್ದೇವೆ, ಮತ್ತು ಒಂದು ಸಾಮಾಜಿಕ ಬದಲಾವಣೆಯನ್ನು ಮಾಡಲು ಅದರ ಬಗ್ಗೆ ಚಿಂತನೆ ಮಾಡಿದ್ದೇವೆ. ಆದರೆ ನೀವು ಅದರ ಬಗ್ಗೆ ಚಿಂತನೆ ಮಾಡಿರಲಿಲ್ಲ.

ಶ್ರೀ **ಕೆ.ಎಚ್. ರಂಗನಾಥ್.**- ಚಿಂತನೆ ಮಾಡಿಲ್ಲವೆಂದು ಹೇಳಲಿಲ್ಲ. ಮಂತ್ರಿಗಳವರು ಚಿಂತನೆ ಮಾಡುವುದರ ಬಗ್ಗೆ ಪ್ರಸ್ತಾಪ ಮಾಡುತ್ತಿಲ್ಲ. ಭೂ ನ್ಯಾಯ ಮಂಡಲಿಗಳನ್ನು ಮಾಡುವಾಗ ಕಾನೂನು ತಿಳಿದವರನ್ನೇ ಹಾಕಬೇಕು ಎನ್ನತಕ್ಕ ದೊಡ್ಡ ಹಲ್ಲೆ ಗಲಾಟೆ ನಡೆಯಿತು. ಅದಕ್ಕೂ ಇದಕ್ಕೂ ಇರತಕ್ಕ ವ್ಯತ್ಯಾಸವನ್ನು ಮಾತ್ರ ನಾನು ಹೇಳುತ್ತಿದ್ದೇನೆ, ಅಷ್ಟೇ ಹೊರತು ಬೇರೆ ಏನೂ ಇಲ್ಲ. ಆ ಮೇಲೆ ನೀವು ಎಷ್ಟೇ ಪ್ರಯತ್ನಪಟ್ಟರೂ ಕೂಡ ಕೆಲಸವನ್ನು ಮಾಡಲಾಗುವುದಿಲ್ಲ. ನೀವು ಮಹಿಳೆಯರ ಬಗ್ಗೆ ಹೇಳಿದ್ದೀರಿ. 30ರಿಂದ 25ಕ್ಕೆ ಇಳಿಸಿದ್ದೇವೆಂದು ಹೇಳಿದ್ದೀರಿ, ಇದನ್ನು ಏತಕ್ಕೆ ತಂದಿರಿ, ಯಾವ ಒತ್ತಡವಿತ್ತು?

ಶ್ರೀ **ಅಬ್ದುಲ್ ನಜೀರ್‌ಸಾಬ್.**- ನಮ್ಮ ಈ ಸದನದ ಸದಸ್ಯರ ಅಭಿಪ್ರಾಯವನ್ನು ಪಡೆದು ಮಾಡಿದ್ದೇವೆ.

ಶ್ರೀ **ಕೆ.ಎಚ್. ರಂಗನಾಥ್.**- ಮಹಿಳೆಯರಿಗೆ ಇಷ್ಟು ಸ್ಥಾನ ಕೊಡುತ್ತೇವೆ ಅವರು ಸ್ವತಂತ್ರವಾಗಿ ಚುನಾವಣೆಯಲ್ಲಿ ನಿಲ್ಲಬಾರದೆಂದು ಎಲ್ಲಿದೆ? ತಾವು ಆ ರೀತಿಯಾಗಿ ಏತಕ್ಕೆ ಮಾಡಿದ್ದೀರಿ. ಆ ರೀತಿಯಾಗಿ ರಾಜ್ಯಾಂಗದಲ್ಲಿ ಎಲ್ಲಿಯೂ ಹೇಳಿಲ್ಲ, ಲಿಂಗ ಭೇದದ ಬಗ್ಗೆ ಹೇಳಿಲ್ಲ. ನನಗೆ ಇದರಿಂದ ಒಂದು ವಿಷಯ ಜ್ಞಾಪಕಕ್ಕೆ ಬರುತ್ತದೆ. ನಾನು ಚಿಕ್ಕ ಹುಡುಗನಾಗಿದ್ದಾಗ ಒಂದು ಸಿನಿಮಾ ನೋಡಿದ್ದೆ ಅದು ಜ್ಞಾಪಕದಲ್ಲಿದೆ. ಆ ಚಿತ್ರದಲ್ಲಿ ಆ ಊರಿನ ಪ್ರಮುಖಳು ರಾಣಿನೇ, ಮಂತ್ರಿ ಕೂಡ ರಾಣಿನೇ, ಸೇನಾಧಿಪತಿ ಕೂಡ ರಾಣಿನೇ, ಎಲ್ಲರೂ ಕೂಡ ಹೆಣ್ಣುಮಕ್ಕಳೇ.

ಶ್ರೀ **ಎಸ್. ಸೂರ್ಯನಾರಾಯಣರಾವ್.**- ಅದೇ ರೀತಿಯಾಗಿ ನಮ್ಮ ರಾಜ್ಯದಲ್ಲಿ 5 ವರ್ಷಗಳ ಕಾಲ ಎಲ್ಲಾ ಮಹಿಳೆಯರಿಗೇ ರಾಜ್ಯಭಾರ ಮಾಡಲು ಬಿಟ್ಟುಕೊಟ್ಟುಬಿಡೋಣ. ಎಲ್ಲಾ ರಾಜ್ಯಭಾರ ಹೆಂಗಸರದೇ ಆಗಲಿ.

ಶ್ರೀ **ಕೆ.ಎಚ್. ರಂಗನಾಥ್.**- ಅದಕ್ಕೆ ಶ್ರೀ ಗಂಗಾಧರ್‌ರವರು ಒಪ್ಪುವುದಿಲ್ಲ ಅವರನ್ನು ಕೇಳಿ. ಏತಕ್ಕೆ ಎಂದರೆ ಅವರದ್ದು ಪುರುಷರ ಪ್ರಧಾನ ಸಮಾಜ, ಸ್ತ್ರೀ ಪ್ರಧಾನ ಸಮಾಜವಲ್ಲ.

ಶ್ರೀ **ಎಸ್. ಸೂರ್ಯನಾರಾಯಣ ರಾವ್.**- ಮನೋಧರ್ಮದಲ್ಲಿ ನಂಬಿಕೆ ಇಟ್ಟುಕೊಂಡಿರತಕ್ಕವರು.

ಶ್ರೀ **ಕೆ.ಎಚ್. ರಂಗನಾಥ್.**- ನೀವು ಹೇಳಿದರೆ ಒಪ್ಪುತ್ತಾರೆ ನಾವು ಹೇಳಿದರೆ ಒಪ್ಪುವುದಿಲ್ಲ. ಏತಕ್ಕೆಂದರೆ ನಾವು ಅಥವಾ ಸಮಾಜದಿಂದ ಬಂದಿರತಕ್ಕವರು. ಸಮಾಜದ ಕೊನೇ ಮೆಟ್ಟಲಿಗೆ ಸೇರಿರತಕ್ಕವರು. ನಮ್ಮ ತಲೆಯ ಮೇಲೆಯೇ ಕಾಲಿಟ್ಟು ಏರುತ್ತಾ ಹೋಗಿರತಕ್ಕವರು ಅವರು. ಆ ಒಂದು ಸಮಾಜಕ್ಕೆ ಸೇರಿರತಕ್ಕವನು ನಾನು. ಅಸ್ಪೃಶ್ಯರು ಎನ್ನತಕ್ಕ ಭಾವನೆಯಿಂದ ನೋಡದೇ ಇರತಕ್ಕವರು ಎಷ್ಟು ಜನ ಸದಸ್ಯರು ಈ ಸದನದಲ್ಲಿ

ಇದ್ದೀರಿ? ಇವತ್ತಿಗೂ ಕೂಡ ನಾವು ಅಸ್ಪೃಶ್ಯರು ಎಂದು ಕರೆಯುತ್ತೇವೆ. though untouchability is abolished in the Constitution but still we say, still we condemn. Why it is so? ಅಸ್ಪೃಶ್ಯರನ್ನು ಯಾವ ರೀತಿಯಾಗಿ ಹೊರಗಿಡಬೇಕು, ಅವರಿಂದ ಯಾವ ರೀತಿಯಾಗಿ ಕೆಲಸ ತೆಗೆದುಕೊಳ್ಳಬೇಕು ಎನ್ನುವ ಬಗ್ಗೆ ಈ ವೇದ ಹೇಳುವವರು ಹೇಳುತ್ತಾರೆ. ಕಳೆದ ಸಾರಿ ಲೋಕಸಭಾ ಚುನಾವಣೆ ನಡೆಯಿತು. ಆಗ ಇವರ ಪಕ್ಷದವರೊಬ್ಬರು ಮಂತ್ರಿಯಾಗಿದ್ದರು, ಆಗ ಅವರು ಯಾವ ರೀತಿಯಾಗಿ ಅಸ್ಪೃಶ್ಯರಿಂದ ಓಟನ್ನು ಪಡೆದುಕೊಳ್ಳುವುದಕ್ಕೆ ಏನೇನು ಕ್ರಮವನ್ನು ನಡೆಸಿದರು ಎಂಬುದು ಎಲ್ಲರಿಗೂ ಗೊತ್ತಿದೆ.

ಶ್ರೀ ಎಚ್. ಗಂಗಾಧರನ್.- ವೇದದ ಬಗ್ಗೆ ಅವರು ಹೇಳಿದುದರಿಂದ ನಾನು ಒಂದು ಮಾತನ್ನು ಹೇಳಬೇಕಾಗುತ್ತದೆ.

ಶ್ರೀ ಕೆ.ಎಚ್. ರಂಗನಾಥ್.- ಶ್ರೀ ಗಂಗಾಧರ್‌ರವರು ಸ್ವತಃ ವೇದ ಓದಿರತಕ್ಕವರು, ಆದರೆ ನಾನು ಹುಟ್ಟಿದ್ದು ಎಂಥಾ ಮನೆಯಲ್ಲಿ ಎಂದರೆ ನಮ್ಮ ಅಪ್ಪನಿಗೆ ಓದುವುದಕ್ಕೆ ಬರುತ್ತಿರಲಿಲ್ಲ , ಅವರ ಅಪ್ಪನಿಗೂ ಸಹ ಓದುವುದಕ್ಕೆ ಬರುತ್ತಿರಲಿಲ್ಲ. ಆದರೆ ಮನೆಯಲ್ಲಿ ಕನ್ನಡ ಮಾತ್ರ ಮಾತನಾಡುತ್ತಿದ್ದುದು, ಅಂಥಾ ಒಂದು ಕುಟುಂಬಕ್ಕೆ ಸೇರಿದವನು ನಾನು ಆದುದರಿಂದ ನಾವು ಇನ್ನೊಬ್ಬರು ಹೇಳುವುದನ್ನು ಕೇಳಬೇಕಾಗುತ್ತದೆ. ಸರ್ಕಾರದಲ್ಲಿ ಇರುತ್ತದಲ್ಲ. ಆ ನಲ್ಲಿಯೊಳಗೆ ರಬ್ಬರ್ ಮತ್ತು ಚರ್ಮದ ವಾಷರ್ ಹಾಕಿರುತ್ತಾರೆ. ಆದರಿಂದ ನೀರು ಬರುತ್ತದೆ.

ಶ್ರೀ ಎಂ.ಎಸ್. ಕೃಷ್ಣನ್.- ಹರಿಜನರು ಎಂದು ತಪ್ಪು ತಿಳಿದುಕೊಳ್ಳಬೇಡಿ, ಮಹಾತ್ಮಾಗಾಂಧಿಯವರು ಹರಿಜನರು ಎಂದು ಕರೆದರು. ಹರಿಜನರು ಅಂದರೆ ಹರಿಯ ಜನ, ಅಂದರೆ ದೇವರ ಜನ ಎನ್ನುವ ದೃಷ್ಟಿಯಿಂದ ಕರೆದರು. ಅದನ್ನೇ ಬಳಕೆ ಮಾಡುತ್ತಾ ಇದ್ದೇವೆ. ಮಠಾಧೀಶ್ವರರೂ ಕೂಡ ನೀವೆಲ್ಲಾ ಒಂದೇ ಎಂದು ಹೇಳಿದ್ದಾರೆ, ಒಂದೇ ಅಭಿಪ್ರಾಯ ಇಟ್ಟುಕೊಂಡಿದ್ದಾರೆ. ಒಂದೇ ಎಂಬ ಅಭಿಪ್ರಾಯ ಇಟ್ಟುಕೊಂಡಿದ್ದರೆ ಸಮಾಜ ಬದಲಾವಣೆಯಾಗುವುದಿಲ್ಲ, ಏಕೆಂದರೆ ಇವತ್ತಿಗೂ ಶೋಷಣೆ ನಡೆಯುತ್ತಾ ಇದೆ. ಆದುದರಿಂದ ಮಾನ್ಯ ರಂಗನಾಥ್‌ರವರು ಹೇಳಿದ್ದು ನೂರಕ್ಕೆ ನೂರು ಸತ್ಯ.

ಶ್ರೀ ಕೆ.ಎಚ್. ರಂಗನಾಥ್.- ವರ್ಣಾಶ್ರಮಧರ್ಮದಲ್ಲಿ ನಿಮಗೆ ನಂಬಿಕೆ ಇದೆಯೋ ಇಲ್ಲವೋ.

ಶ್ರೀ ಹೆಚ್. ಗಂಗಾಧರನ್.- ಇಲ್ಲ.

ಶ್ರೀ ಕೆ.ಎಚ್. ರಂಗನಾಥ್.- ಜಾತಿ ಅಂದರೆ ಮತ್ತೇನು?

ಶ್ರೀ ಹೆಚ್. ಗಂಗಾಧರನ್.- ತಾವು ಅಧ್ಯಕ್ಷರಾಗಿದ್ದಾಗ ವರ್ಣಾಶ್ರಮ ಧರ್ಮ ಅಂದರೆ ಏನು ಅರ್ಥ ಎಂದು ನನ್ನ ಭಾಷಣದಲ್ಲಿ ಹೇಳಿದ್ದೆ. ವರ್ಣಾಶ್ರಮ ಧರ್ಮ ಅಂದರೆ ಮಿಸ್ ಇಂಟರ್‌ಪ್ರಿಟೇಷನ್ ಇದೆ, ಅದರ ಬಗ್ಗೆ ತಪ್ಪು ಕಲ್ಪನೆ ಇದೆ. (ಮುಂದುವರೆಯುತ್ತದೆ)

*****

## ಗೇಣಿ ಶಾಸನ : ಕಣ್ಣಾ ಮುಚ್ಚಾಲೆ ಆಟ!

2 ಫೆಬ್ರವರಿ 1970

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ).- ಸನ್ಮಾನ್ಯ ಅಧ್ಯಕ್ಷರೇ, ಈಗ ಸಭೆಯ ಮುಂದಿರತಕ್ಕ ಈ ಗೇಣಿ ಶಾಸನದ ತಿದ್ದುಪಡಿ ಮಸೂದೆಯನ್ನು ಸಂಪೂರ್ಣವಾಗಿ ವಿರೋಧ ಮಾಡಲು ನಾನು ನಿಂತಿದ್ದೇನೆ. ಈ ಕಾನೂನು 1961 ರಲ್ಲಿ ಕಾನೂನಾದರೂ 2.10.1965 ರಿಂದ, ಅಂದರೆ ಸುಮಾರು 5 ವರ್ಷಗಳ ನಂತರ ಜಾರಿಗೆ ಕೊಡಲ್ಪಟ್ಟಿತ್ತು. ಜಾರಿಗೆ ಕೊಡತಕ್ಕ ತಾರೀಖನ್ನು ಕೂಡ ಬಹಳ ವಿಶೇಷವಾಗಿ ಸರ್ಕಾರ ನಮೂದು ಮಾಡಿದೆ. ಮಹಾತ್ಮಾ ಗಾಂಧೀಜಿಯವರ ಹುಟ್ಟು ದಿನದಂದು ಶಾಸನವನ್ನು ಜಾರಿಗೆ ಕೊಟ್ಟು, ಭೂಮಿ ಇಲ್ಲದ ರೈತರಿಗೆ, ಗೇಣಿದಾರರಿಗೆ, ಭೂಮಾಲೀಕರಿಗೆ, ಎಲ್ಲರಿಗೂ ಒಂದು ವ್ಯವಸ್ಥೆ ಮಾಡಿ ಭೂಮಿ ಹಂಚಿಕೆ ಮಾಡುತ್ತೇವೆಂದು ಹೇಳಿದರು. ಆದರೆ 2.10.1965 ರಿಂದ ಇವತ್ತಿನವರೆಗೆ, ಅಂದರೆ 2.2.70ರವರೆಗೆ ಸುಮಾರು 4 ತಿದ್ದುಪಡಿಗಳನ್ನು ಈ ಮಸೂದೆಗೆ ತಂದುದು ಸಾಲದೆ, ಈಗ 5ನೇ ತಿದ್ದುಪಡಿಯನ್ನು ತಂದಿದ್ದಾರೆ. ಮೊದಲು ಯಾವ ಮಸೂದೆ ಇತ್ತೋ, ಅದು ಆಮೂಲಾಗ್ರವಾಗಿ ಬದಲಾವಣೆಯಾಗುತ್ತಾ ಬಂದಿದೆ.

ರಾಜ್ಯಪಾಲರ ಭಾಷಣದಲ್ಲಿ ಕೂಡ ಈ ವಿಚಾರವಾಗಿ ಒಂದು ಮಾತನ್ನು ಹೇಳಲಾಗಿದೆ. ಅಲ್ಲಿ ಅವರು ಈ ರೀತಿ ಹೇಳುತ್ತಾರೆ. "My Government has paid close attention to the need expediting implementation of the land reforms programme in the State ಇಷ್ಟೇ ಉದ್ದೇಶ ವಿನಹ, ಇದಕ್ಕಿಂತ ಮುಂದಿನ ಉದ್ದೇಶವೇನಿಲ್ಲವೆಂಬುದು ನಮ್ಮ ಮುಂದಿಟ್ಟಿರುವ ತಿದ್ದುಪಡಿಯಿಂದ ಅರ್ಥವಾಗುತ್ತದೆ. ಇನ್ನು ಮುಂದೆ ಹೇಳುತ್ತಾರೇನೆಂದರೆ , ಈ ಶಾಸನ ಜಾರಿಗೆ ಬಂದರೆ ಸರ್ಕಾರಕ್ಕೆ ದೊಡ್ಡ ಒಂದು ಹಣಕಾಸಿನ ಬಿಕ್ಕಟ್ಟಿನ ಪರಿಸ್ಥಿತಿ ಉದ್ಭವವಾಗುತ್ತದೆಂದು ಒಂದು ಹೆದರಿಕೆಯನ್ನು ಇಟ್ಟಿದ್ದಾರೆ. ರಾಜ್ಯಪಾಲರ ಭಾಷಣದ ಮೊದಲು ಕೂಡ ಪತ್ರಿಕೆಗಳ ಕೆಲವಾರು ಸ್ಟೇಟ್‌ಮೆಂಟ್‌ಗಳಲ್ಲಿ ಇದನ್ನು ಹೇಳಿದ್ದರು. ಈ ನಾನ್ ರೆಸ್ಯೋಮೇಬಲ್ ಲ್ಯಾಬ್ ಎಂದು ಏನು ಹೇಳುತ್ತೇವೆ, ಅವುಗಳನ್ನು ರೈತರಿಗೆ ದೊಡ್ಡ ದೊಡ್ಡ ಭೂಮಾಲೀಕರಿಂದ, ತೆಗೆದುಕೊಡಬೇಕಾದರೆ, 35-40 ಕೋಟಿ ರೂಪಾಯಿ ಬೇಕಾಗುತ್ತದೆ ಎಂದು ಹೇಳಿದ್ದಾರೆ. ಯಾವ ಸರ್ಕಾರ ಬ್ಯಾಂಕುಗಳ ರಾಷ್ಟ್ರೀಕರಣದಲ್ಲಿ ನಂಬಿಕೆ ಇಲ್ಲವೊ, ಯಾವ ಸರ್ಕಾರ ಅದು ಸರಿಯಲ್ಲವೆಂದು ಹೇಳಿತ್ತೋ, ಅದೇ ಸರ್ಕಾರ ರಾಷ್ಟ್ರೀಕೃತವಾದಂತಹ ಬ್ಯಾಂಕುಗಳಿಂದ 35-40 ಕೋಟಿ ರೂಪಾಯಿಗಳನ್ನು ತೆಗೆದುಕೊಂಡು ಭೂಮಾಲೀಕರಿಗೆ ಕೊಡತಕ್ಕ ಸಾಹಸ ಮಾಡುತ್ತೇವೆಂದು ಹೇಳಿದ್ದಾರೆ. ಮಾನ್ಯ ಮುಖ್ಯಮಂತ್ರಿಯವರು ಕೂಡ ಉತ್ತರದಲ್ಲಿ ಹೇಳಿದ್ದರು. ಭಾರತದಲ್ಲಿ ಎಲ್ಲೂ ಇಂಥ ಕಾನೂನನ್ನು ಮಾಡಿಲ್ಲ, ಗೇಣಿದಾರರಿಗೆ, ಅವರೇ ಮಾಲೀಕತ್ವಕ್ಕೆ ಬರುವಾಗ ಕೊಡಬೇಕು ಹಣ ಇರುವುದಿಲ್ಲ;

ಅದಕ್ಕೆ ಅವರ ಪರವಾನಗಿ ಸರ್ಕಾರದವರು ಕೊಟ್ಟು ಅನುಕೂಲ ಮಾಡಿಕೊಡುತ್ತೇವೆಂದು ಹೇಳಿದ್ದಾರೆ.

ನಾನು ಒಂದು ಪ್ರಶ್ನೆಯನ್ನು ಕೇಳುತ್ತೇನೆ. ಈ ಆಕ್ಟಿನ ಸೆಕ್ಷನ್ 1ರ ಪ್ರಕಾರ ಸರ್ಕಾರ ರಿಸ್ಯೂಂ ಮಾಡತಕ್ಕ ಭೂಮಿಗಳು ಯಾವುವು ಎಂಬುದನ್ನು ಡಿಫೈ಼ ಮಾಡಬೇಕು 5 ವರ್ಷಗಳಾಗಿದ್ದರೂ, ಇದನ್ನು ನೋಟಿಫೈ ಮಾಡಿದ್ದಾರೆಯೇ? ಸೆಕ್ಷನ್ 65-66 ಸರ್ಪ್ಲಸ್ ಲ್ಯಾಂಡ್ ಎನ್ನತಕ್ಕದ್ದನ್ನು ನಿಗದಿ ಮಾಡಿದ್ದಾರೆಯೇ? ಈ ಕಾನೂನನ್ನು ಜಾಗ್ರತೆ ಜಾರಿಗೆ ಕೊಡಲು ಒಬ್ಬ ಡಿವಿಜನಲ್ ಕಮಿಷನರ್ ಹುದ್ದೆಯ ಅಧಿಕಾರಿಯನ್ನು ಸ್ಪೆಷಲ್ ಆಗಿ ನೇಮಕ ಮಾಡಿದ್ದಾರೆ. ಸೆಕ್ಷನ್ 66-67ರ ಪ್ರಕಾರ ಸರ್ಪ್ಲಸ್ ಲ್ಯಾಂಡ್ ಎಷ್ಟೆಂಬುದು ನೀವು ರಾಜ್ಯದ ಪ್ರಜೆಗಳು ಮುಂದೆ ಇಟ್ಟೇದೀರಾ? ಸೆಕ್ಷನ್ 14ರ ಪ್ರಕಾರ ಕನ್ಸೂಮಬಲ್ ಲ್ಯಾಂಡ್ ಎಷ್ಟೆಂದು ಹೇಳಿದ್ದೀರಾ? ಮೊನ್ನೆ ಪ್ರಶ್ನೆಗಳು ಬಂದಾಗ ಸುಮಾರು 2 ಲಕ್ಷ -- ಅರ್ಜಿಗಳು ಬಂದಿವೆ. ಇಷ್ಟು ರೆಸ್ಯೂಮ್ ಮಾಡುವುದಕ್ಕೆ ಕೇಳಿದ್ದಾರೆ. ಮಿಕ್ಕಿದ್ದು ನಾನ್ ರಿಸ್ಯೂಮ್‌ಮೆಬಲ್ ಹೇಳಿದ್ದಾರೆ. ಇದರಲ್ಲಿ ಎಷ್ಟು ರೆಸ್ಯೂಂ ಆಗಿದೆ. ಎಂದರೆ ಸರ್ಕಾರದ ಉತ್ತರವಿಲ್ಲ. ಮಾನ್ಯ ಕಟ್ಟೀಮಾರರವರು ಹೇಳುತ್ತಾರೇನೆಂದರೆ, ಅವರಿಗೆ ಬರತಕ್ಕ ರೆಂಟ್ ಏನಿದೆ, ಅದು ಕೂಡ ಬರುತ್ತಾ ಇಲ್ಲ, ಎಂದು ಇವೊತ್ತಿನ ದಿವಸ ಯಾವ ತಾರೀಕಿನಲ್ಲಿ ಗೇಣಿದಾರನು, ಗೊತ್ತಾದ ದಿವಸವೇ ಅವನು ಕಾನೂನು ಪ್ರಕಾರ ಗೇಣಿಯನ್ನು ಕೊಡಬೇಕೆಂದು ನಿಗದಿ ಮಾಡಿದ್ದೀರಾ?

ಈ ಸಂದರ್ಭದಲ್ಲಿ ನಾನು ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ಏಕೆಂದರೆ ಇಲ್ಲಿ ಒಂದಷ್ಟು ಕಣ್ಣುಮುಚ್ಚಾಲೆಯ ಆಟ ನಡೆದಿದೆ. ಇಲ್ಲಿ ಮೂರು ಉದ್ದೇಶಗಳಿಗಾಗಿ ಶಾಸನವಿದೆ. ಟಿನೋಫಿಕ್ಲೇಷನ್ ಆಫ್ ಟೆನ್ಯೂರ್ ಮಾಡಿಕೊಡುವುದು ಇದರಲ್ಲಿದೆ. ಇಂತಹ ಸಂದರ್ಭದಲ್ಲಿ ಮೈಸೂರು ರಾಜ್ಯದಲ್ಲಿ ಸುಮಾರು ಒಂದು ಎಕರೆಯಿಂದ 5 ಎಕರೆವರೆಗೆ ಹಿಡುವಳಿದಾರರ ಸಂಖ್ಯೆ ಎಷ್ಟಿದೆಂಬುದನ್ನು ವಿಚಾರ ಮಾಡಬೇಕಾಗಿದೆ. ಅದರ ಬಗ್ಗೆ ಮಾನ್ಯ ಶ್ರೀ ಜತ್ತಿಯವರ ವರದಿ ಬೇರೆ ರಾಜ್ಯದ ಒಟ್ಟು ಭೂಹಿಡುವಳಿದಾರರ ಸಂಖ್ಯೆ ಎಷ್ಟೆಂಬುದನ್ನು ನೋಡಿದರೆ ಒಂದು ಎಕರೆಯಿಂದ 5 ಎಕರೆಯವರಗೆ ಇರುವವರು ಶೇಕಡ 47 ರಷ್ಟು ಜನರು ಇದ್ದಾರೆ. 75 ಎಕರೆಯಿಂದ ಎಕರೆಯವರೆಗೆ ಇರುವವರು ದಾಮಾಷಾ ಪ್ರಕಾರ ಶೇಕಡ .05 ರಷ್ಟು ಇದ್ದಾರೆ. ಇನ್ನು ಎಕರೆಗಳಿಂದ 500 ಎಕರೆಗಳವರೆಗೆ ಇರುವವರು ಶೇಕಡ .03 ರಷ್ಟು ಇದ್ದಾರೆ. ಇನ್ನು ಒಂದು ಸಾವಿರ ಎಕರೆಗಳಿಗೆ ಮೇಲೆ ಇರುವ ಜನರು ಶೇಕಡ .005 ರಷ್ಟು ಇದ್ದಾರೆ. ಆದರೂ ಸರ್ಕಾರದವರು ಇಂತಹ ಕಡಿಮೆ ಸಂಖ್ಯೆಯ ಜನರ ಹಿತರಕ್ಷಣೆ ಮಾಡುವುದಕ್ಕೆ ಪ್ರಯತ್ನ ಮಾಡಿದ್ದಾರೆಯೇ ಹೊರತು ಒಂದು ಎಕರೆಯಿಂದ 5 ಎಕರೆಗಳವರೆಗೆ ಇರುವಂಥ ಜನರ ಪೈಕಿ ಶೇಕಡ 47 ರಷ್ಟು ಇರುವಂಥವರ ಹಿತರಕ್ಷಣೆಯನ್ನೇನಾದರೂ ಮಾಡಿದ್ದೀರಾ? ಈ ಕಾನೂನನ್ನು ಜಾರಿಗೆ ತರುವುದರ ಉದ್ದೇಶವನ್ನು ಬಚ್ಚಿಟ್ಟು ಈಗ ಒಂದು ದೊಡ್ಡ ಗುಲ್ಲನ್ನು ಎಬ್ಬಿಸುತ್ತಿದ್ದಾರೆ. ಇವತ್ತಿನ ದಿವಸ ಅಂತಹ ಕಾನೂನು ಜಾರಿಗೆ ಕೊಟ್ಟರೆ ಬರೀ

ರೆಸ್ಯೂಮ್ ಮಾಡುವ ಭೂಮಿಗೋಸ್ಕರ 35 ಕೋಟಿ ರೂಪಾಯಿಗಳನ್ನು ಇವರು ಖರ್ಚು ಮಾಡಬೇಕಾಗುತ್ತದೆಂದು ಹೇಳಿದ್ದಾರೆ. ಇನ್ನು ಇಡೀ ಸರ್ಪ್ಲಸ್ ಲ್ಯಾಂಡ್ ಕೊಟ್ಟರೆ ಇನ್ನೆಷ್ಟು ದುಡ್ಡು ಕೊಡಬೇಕಾಗುತ್ತದೋ ಎಂದು ಒಂದು ದೊಡ್ಡ ಗೊಂದಲವನ್ನು ಎಬ್ಬಿಸುತ್ತಿದ್ದಾರೆ. ಆದರೆ ಎರಡು ಸಾವಿರಕ್ಕಿಂತ ಕಡಿಮೆ ಇದ್ದರೆ ನಗದು ಹಣ ಕೊಡುವುದು ಅಥವಾ ಮೇಲೆ ಇದ್ದರೆ ಬಾಂಡುಗಳನ್ನು ಕೊಡುವುದು ಎಂದು ಕಾನೂನಿನಲ್ಲಿದೆ. ಇಂತಹ ಪರಿಸ್ಥಿತಿ ಇರುವಾಗ 35 ಕೋಟಿ ರೂಪಾಯಿಗಳನ್ನು ಏಕೆ ಇದಕ್ಕಾಗಿ ಖರ್ಚುಮಾಡಬೇಕು? ಕರಾರುವಾಕ್ಕಾಗಿ ಈ ಸಭೆಗೆ ಇದರ ಬಗ್ಗೆ ಉತ್ತರ ಕೊಡಬೇಕು. ಸುಮಾರು 8 ಜಿಲ್ಲೆಗಳಲ್ಲಿಯೂ ಈ ಗೇಣಿದಾರರಿಗೆ ಸಂಬಂಧಪಟ್ಟಂತೆ ಅತಿ ಶೀಘ್ರವಾಗಿ ಇದನ್ನು ವಿಚಾರಮಾಡಬೇಕು.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಟೆನೆಂಟ್ ಕಲ್ಟಿವೇಷನ್ ಪರ್ಸಂಟೇಜ್ ಶೇಕಡ 8.4 ರಷ್ಟಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಶೇಕಡ 16.9 ರಷ್ಟಿದೆ. ಧಾರವಾಡದಲ್ಲಿ ಶೇಕಡ 9 ರಷ್ಟಿದೆ. ಬೆಳಗಾಂನಲ್ಲಿ ಶೇಕಡ 13.8 ರಷ್ಟಿದೆ. ಬಿಜಾಪುರದಲ್ಲಿ ಶೇಕಡ 7.2 ರಷ್ಟಿದೆ. ನಾರ್ತ್ ಕೆನರಾದಲ್ಲಿ ಶೇಕಡ 35 ರಷ್ಟಿದೆ. ಸೌತ್ ಕೆನರಾದಲ್ಲಿ ಶೇಕಡ 36 ರಷ್ಟಿದೆ. ಕೂರ್ಗ್‌ನಲ್ಲಿ ಶೇಕಡ 10.1 ರಷ್ಟಿದೆ. ಸೆಕ್ಷನ್ 14ರ ಪ್ರಕಾರ ಸರ್ಕಾರದವರು ರೂಲ್ಸ್ ಮಾಡುವುದಕ್ಕೆ ಒಂದು ವರ್ಷ ತೆಗೆದುಕೊಂಡಿದ್ದಾರೆ. ಇನ್ನು ಗ್ರಾಸ್ ಪ್ರಾಸೀಡ್ಸ್ ಎಷ್ಟು ಎನ್ನುವುದನ್ನು ಯಾರು, ಯಾವ ರೀತಿ ನಿಗದಿ ಮಾಡಿದ್ದಾರೆನ್ನುವುದನ್ನು ನೋಟಿಫೈ ಮಾಡುವುದಕ್ಕೆ ಇವರು ಒಂದು ವರ್ಷ ತೆಗೆದುಕೊಂಡಿದ್ದಾರೆ. ಆದ್ದರಿಂದ ಯಾವ್ಯಾವ ತಾರೀಖಿನಲ್ಲಿ ನೋಟಿಫಿಕೇಷನ್ ಇಷ್ಯೂ ಆಗಿದೆಯೆಂಬುದನ್ನು ವಿಚಾರ ಮಾಡಬೇಕು.

ಟೆನೆಂಟ್ಸ್ ಭೂಮಿ ಇಲ್ಲದೆ ಎಷ್ಟು ವರ್ಷಗಳವರೆಗೆ ಕಾಯಬೇಕು? ಹಣವಿಲ್ಲದೆ ಭೂಮಿ ಕಳೆದುಕೊಂಡು ಭೂಮಾಲೀಕ ಎಷ್ಟು ವರ್ಷಗಳವರೆಗೆ ಕಾಯಬೇಕು? ಇದು ಸರಿಯಲ್ಲ. ಇದರಿಂದ ಭೂಮಾಲೀಕರಿಗೆ, ಗೇಣಿದಾರರಿಗೆ, ಭೂಹೀನ ರೈತರಿಗೆ, ಕೂಲಿಗಾರರಿಗೆ ತೊಂದರೆಯಾಗುತ್ತದೆ. ನಮ್ಮ ಅಧಿಕಾರ ಉಳಿಯಬೇಕೆಂಬ ದುರುದ್ದೇಶ ಇವರಿಗೆ ಇದೆಯೆಂದು ನನಗರ್ಥವಾಗುತ್ತಿದೆ. ಇನ್ನು ಇವತ್ತಿನ ದಿವಸ 113ನೇ ಸೆಕ್ಷನಿಗೆ ತಿದ್ದುಪಡಿಯನ್ನು ತಂದಿದ್ದಾರೆ. ಇದನ್ನು ಯಾವ ಉದ್ದೇಶದಿಂದ ಮಾಡಿದ್ದಾರೆ? 113ನೇ ಸೆಕ್ಷನ್ನಿನಲ್ಲಿ ಸಿವಿಲ್ ಪ್ರೊಸೀಜರ್ ಕೋಡ್ ಎಲ್ಲದಕ್ಕೂ ಅನ್ವಯುವಾಗುತ್ತದೆಂದು ಹೇಳಿದ್ದಾರೆ. ತಮಗೆಲ್ಲರಿಗೂ ಗೊತ್ತಿರುವ ಹಾಗೆ ವಕೀಲರಾದವರು ಮಾತೆತ್ತಿದರೆ ಯಾರಾದರೂ ಒಂದು ಅರ್ಜಿ ಹಾಕಿ ಕೂತರೇ ಸಾಕು. ಅವರೇ ಹೋಗಿ ಸರ್ಪ್ಲಸ್ ಲ್ಯಾಂಡ್ ಕುಪನ್ಸೇಷನ್ ಬಗ್ಗೆ, ರೆಂಟ್ ಬಗ್ಗೆ, ರೆಸ್ಯೂಮಬಲ್ ಲ್ಯಾಂಡ್ ಬಗ್ಗೆ ಮತ್ತು ನಾನ್ ರೆಸ್ಯೂಮಬಲ್ ಲ್ಯಾಂಡ್ ಬಗ್ಗೆ ವಿಚಾರ ಮಾಡುತ್ತಾರೆ. ಇಂತಹ ಪ್ರಶ್ನೆಗಳು ಇರುವಾಗ ಎಲ್ಲದಕ್ಕೂ ಸಿವಿಲ್ ಪ್ರೊಸೀಜರ್ ಕೋಡ್ ಅಪ್ಲೈಯಾಗಬೇಕೆಂದು ಹೇಳಿದರೆ ಹೇಗೆ? ಇದರಿಂದ ಯಾರಿಗೂ ಎಂದು ಏನೂ ಉಪಕಾರವಾಗಬಾರದೆಂದು ಎಂಬ ಅಂಶ ಇವರ ಮನಸ್ಸಿನಲ್ಲಿರಬೇಕು. ರಾಜ್ಯದಲ್ಲಿ ಪ್ರಜಾಪ್ರಭುತ್ವ ಹೇಗೆ ಸಾಗಬೇಕು? ಇವರು ಎಲ್ಲರ ಮೂಗಿಗೆ ತುಪ್ಪ ಹಚ್ಚುವಂತೆ ಇದರಲ್ಲಿ ಮಾಡುತ್ತಿದ್ದಾರೆ. ಆದ್ದರಿಂದ ನಾನು ಹೇಳುವುದಿಷ್ಟೆ: ಈ 113ನೇ ಸೆಕ್ಷನ್ ಮೊದಲಿದ್ದಂತೆಯೇ ಇರಲಿ. ಅದನ್ನು ಈಗ ತಿದ್ದುಪಡಿ ಮಾಡುವುದು ಸಾಧ್ಯವಲ್ಲ.

ಇನ್ನು ಮಾನ್ಯ ನಾಗಪ್ಪನವರು 42ನೇ ಸೆಕ್ಷನ್ ಸಬ್ ಕ್ಲಾಜ್ (1) ಬಗ್ಗೆ ಹೇಳಿರುವುದು ನನಗಂತೂ ಅರ್ಥವಾಗುತ್ತಿಲ್ಲ. ಇದರಿಂದ ತಮ್ಮ ಅಧಿಕಾರಿಗಳು ಎಷ್ಟರಮಟ್ಟಿಗೆ ಆಕ್ಟ್ ಬಗ್ಗೆ ವಿಚಾರ ಮಾಡುತ್ತಿದ್ದಾರೆ ಮತ್ತು ಅವರಿಗೆ ಎಷ್ಟು ಅನಾದರಣೆ ಇದೆಯೆಂಬುದು ಗೊತ್ತಾಗುತ್ತದೆ. ಇನ್ನು ನಮ್ಮ ಹಿರಿಯರಾದಂಥ ಮಾನ್ಯ ಶ್ರೀ ಸಿದ್ದವೀರಪ್ಪನವರು ಇದರ ಬಗ್ಗೆ ಏನು ಹೇಳಿದರೋ ಅದೂ ನನಗೆ ಗೊತ್ತಿಲ್ಲ. ಇದನ್ನು ಸರ್ಕಾರದವರು ಬಹಳ ವರ್ಷಗಳಿಂದ ತೀರ್ಮಾನ ಮಾಡುವವರಾಗಿದ್ದಾರೆ. ಮಾನ್ಯ ಶ್ರೀ ಜತ್ತಿಯವರು ಇದರ ಬಗ್ಗೆ ಒಂದು ವರದಿಯನ್ನು ಕೊಟ್ಟಿದ್ದಾರೆ. ಕಾನೂನು ಆಗಿ ಇದುವರೆಗೆ ಎಷ್ಟೋ ವರ್ಷಗಳು ಆಗಿದ್ದರೂ ಅದಿನ್ನೂ ಜಾರಿಗೆ ಬಂದಿಲ್ಲ. ಅದನ್ನು ಸರ್ಕಾರದವರು ವಿಚಾರ ಮಾಡಬೇಕು. ಅದರ ವಿಷಯದಲ್ಲಿ ಈ ಸಭೆಗೆ ಮಾನ್ಯ ಮಂತ್ರಿಗಳು ಉತ್ತರ ಕೊಡುವಾಗ ಸ್ಪಷ್ಟವಾಗಿ ಹೇಳಬೇಕು. ಭೂಮಿ ಇಲ್ಲದೇ ಇರುವವರಿಗೆ ಭೂಮಿ ಕೊಡುವ ಉದ್ದೇಶವಿದೆಯೇ, ಗೇಣಿದಾರರಿಗೆ ಭೂಮಿ ಕೊಡುವ ಉದ್ದೇಶವಿದೆಯೇ, ಭೂಮಾಲೀಕರಿಗೆ ಕಂಪನ್ಸೇಷನ್ ಕೊಡುವ ಉದ್ದೇಶವಿದೆಯೇ? ಒಂದು ವೇಳೆ ಆ ರೀತಿ ಉದ್ದೇಶವಿದ್ದರೆ ಅದನ್ನು ಎಷ್ಟು ದಿವಸಗಳಲ್ಲಿ ತೀರ್ಮಾನ ಮಾಡುತ್ತೀರಿ ಎಂಬುದನ್ನು ಸ್ಪಷ್ಟವಾಗಿ ಹೇಳಬೇಕು. ಆದ್ದರಿಂದ ನಾನು ಯಾವ ಸೆಕ್ಷನನ್ನೂ ಕೂಡ ಇದರಲ್ಲಿ ಒಪ್ಪುವುದಿಲ್ಲ. ಅದರ ಬಗ್ಗೆ ವಿವರವಾಗಿ ಹೇಳುವ ಪ್ರಶ್ನೆ ಇಲ್ಲ. ಮಾನ್ಯ ಶ್ರೀ ನಾಗಪ್ಪನವರು ಎಲ್ಲಾ ಸೆಕ್ಷನ್ನುಗಳ ಬಗ್ಗೆ ಸ್ಥೂಲವಾಗಿ ಹೇಳಿದ್ದಾರೆ.

ಇನ್ನು 36ನೇ ಸೆಕ್ಷನ್ನಿನಲ್ಲಿ ವ್ಯಾಲಿಡೇಷನ್ ಮಾಡುವ ಬಗ್ಗೆ ಹೇಳಿದ್ದಾರೆ. ಹೊಸದಾಗಿ ರಾಜ್ಯಗಳು ಷುರುವಾಗುವ ರೀತಿಯಲ್ಲಿ ಈ ತಿದ್ದುಪಡಿಗಳು ಇವೆ. ತಮ್ಮ ಉದ್ದೇಶ ರೈತರಿಗೆ ಉಪಕಾರ ಮಾಡಬೇಕೆಂದಿಲ್ಲ. ತಮ್ಮ ಉದ್ದೇಶವೇನಿದೆಯೆಂಬುದನ್ನು ಸ್ಟೇಟ್‌ಮೆಂಟ್ ಆಫ್ ಆಬ್ಜಕ್ಟ್ಸ್ ಅಂಡ್ ರೀಜನ್ಸ್‌ನಲ್ಲಿ ಹೇಳಿ ಅದನ್ನು ಸುಮ್ಮನೆ ಇಲ್ಲಿ ತೆಗೆದುಕೊಂಡು ಬಂದಿದ್ದಾರೆ. ನಾನು ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳುತ್ತೇನೆ. ಇದರ ಬಗ್ಗೆ ಒಂದು ಆರ್ಡಿನೆನ್ಸನ್ನು ತರುವುದಕ್ಕೆ ಏನು ಅವಶ್ಯಕವಿತ್ತು? ಹೋದ ಸಾರಿಯೇ ಇದನ್ನು ತಂದಿದ್ದರೂ ಇದುವರೆಗೆ ಏನೂ ಮಾಡುವುದಕ್ಕಾಗಲಿಲ್ಲ. ಇದರ ಬಗ್ಗೆ ಕಾನೂನು ಮಾಡಿ ಒಂದುವೇಳೆ ಈ ಸಭೆಯಲ್ಲಿ ಬಂದಿದ್ದರೆ ಅದು ಪಾಸಾಗುತ್ತಿತ್ತು. ಈಗ ಆರ್ಡಿನೆನ್ಸ್ ಮುಖಾಂತರ ಕಾನೂನು ಆಗಿದೆ. ಈ ದಿನ ನಾವು ಆರ್ಡಿನೆನ್ಸನ್ನು ರಿಪ್ಲೇಸ್ ಮಾಡುವ ಪರಿಸ್ಥಿತಿಗೆ ಬಂದಿದ್ದೇವೆ. ತಮ್ಮ ಉದ್ದೇಶ ಸರಿಯಾಗಿಲ್ಲ. ಸರ್ಕಾರದವರು ಭೂಮಿ ಇಲ್ಲದೆ ಇರುವ ರೈತರ ಬಗ್ಗೆ ವಿಚಾರ ಮಾಡಿ ಅವರು ಚೆನ್ನಾಗಿ ವ್ಯವಸಾಯ ಮಾಡುವ ಕಾರ್ಯಕ್ರಮವನ್ನು ತೆಗೆದುಕೊಳ್ಳಬೇಕು. 35-10 ಕೋಟಿ ರೂಪಾಯಿಗಳ ಪ್ರಶ್ನೆಯನ್ನು ಎತ್ತಿದ್ದಾರೆ. ಅದು ಸಾಧುವಾದುದಲ್ಲ. ರಾಷ್ಟ್ರೀಕರಣ ಮಾಡುತ್ತೇವೆಂದು ಹೇಳಿ ಆ ಹಣವನ್ನು ಅಪ್ರಯೋಜಕವಾಗಿ ಉಪಯೋಗಿಸುವುದಕ್ಕೆ ಅವಕಾಶ ಮಾಡಿಕೊಡಬೇಡಿ.

*****

# ಕಂದಾಯ ವಿಭಾಗಗಳ ಸುಧಾರಣೆ

27 ಮಾರ್ಚ್ 1963

ಶ್ರೀ **ಕೆ.ಎಚ್. ರಂಗನಾಥ್** (ಮೂಡಿಗೆರೆ).- ಅಧ್ಯಕ್ಷರೇ, ನಾನು ಈ ಸಭೆಯ ಮುಂದಿರತಕ್ಕ ಡಿಮ್ಯಾಂಡುಗಳನ್ನು ವಿರೋಧಿಸುತ್ತಾ ಕೆಲವು ಮಾತುಗಳನ್ನು ಹೇಳಬೇಕೆಂದು ಬಯಸುತ್ತೇನೆ.

1963-64ನೇ ಸಾಲಿನಲ್ಲಿ ಸುಮಾರು ಎರಡು ಕೋಟಿ ರೂಪಾಯಿಗಳನ್ನು ಲ್ಯಾಂಡ್ ರೆವೆನ್ಯೂ ಹೆಚ್ಚುವರಿ ಇದೆ. ಇಷ್ಟು ಹಣ ಆದಾಯ ಬರುತ್ತಿದ್ದರೂ ಕೂಡ ರೈತನಿಗೆ ಈ ಇಲಾಖೆಯಿಂದ ನಿರೀಕ್ಷಿಸಿದಷ್ಟು ಅನುಕೂಲ ದೊರೆಯುತ್ತಿಲ್ಲ ಎಂದು ಈ ಸಭೆಯ ಗಮನಕ್ಕೆ ತರಬಯಸುತ್ತೇನೆ. ಏತಕ್ಕೆಂದರೆ, ಈ ಇಲಾಖೆ ಎಲ್ಲ ಜನ ಸಾಮಾನ್ಯರಿಗೂ ಗೊತ್ತಿರತಕ್ಕ ಇಲಾಖೆ, ಇವೊತ್ತಿನ ದಿವಸ ಈ ರೆವಿನ್ಯೂ ಇಲಾಖೆಯಲ್ಲಿರುವ ಅಧಿಕಾರಿಗಳ ಮನೋಭಾವನೆ ಬದಲಾವಣೆಯಾಗದೇ ಹೋದರೆ, ರೈತಾಪಿ ಜನಗಳಿಗೆ ಯಾವ ವಿಧವಾದ ಅನುಕೂಲಗಳು ದೊರೆಯುವಂತಿಲ್ಲ ಎಂದು ನಾನು ಇಲ್ಲಿ ಒತ್ತಿ ಹೇಳಬೇಕಾಗಿದೆ. ಏತಕ್ಕಂದರೆ; ನೀವು ಎಷ್ಟು ಟ್ಯಾಕ್ಸನ್ನು ಹಾಕಿದರೂ ಕೂಡ ರೈತರು ಒಂದು "ಚ"ಕಾರ ಶಬ್ದವನ್ನೂ ಕೂಡ ಆಡಿ ವಿರೋಧಿಸದೇ ಕೊಡುತ್ತಿರುವಂತಹ ಈ ರೈತರಿಗೆ ರೆವೆನ್ಯೂ ಇಲಾಖೆಯಲ್ಲಿ ಯಾವ ವಿಧವಾದ ಟ್ರೀಟ್‌ಮೆಂಟ್ ದೊರೆಯುತ್ತದೆ ಎಂದು ನೋಡಿದರೆ, ಸೌಜನ್ಯದ ಮಾತೂ ರೈತರಿಗೆ ದೊರೆಯುತ್ತಿಲ್ಲ, ತಾಲ್ಲೂಕು ಆಫೀಸುಗಳಲ್ಲಿ ಒಂದು ಸಣ್ಣ ಅರ್ಜಿ ಕೂಡ ಲಂಚವಿಲ್ಲದೇ ಅಲ್ಲಿಂದ ಮುಂದಕ್ಕೆ ಹೋಗಲಾರದು. ಇಂತಹ ಒಂದು ಸನ್ನಿವೇಶ ರೆವೆನ್ಯೂ ಇಲಾಖೆಯಲ್ಲಿ ಈ ದಿವಸ ಕಾಣುತ್ತಿದೆ. ಈ ಇಲಾಖೆಯ ಅಧಿಕಾರಿಗಳ ಮನೋಭಾವನೆ ಬದಲಾವಣೆಯಾಗಲು ಸರಕಾರ ಹೆಚ್ಚಿನ ನಿಗಾ ಕೊಡಬೇಕು.

ಸಣ್ಣ ಪುಟ್ಟ ಅಧಿಕಾರಿಗಳಿಗಿಂತ ಅಸಿಸ್ಟೆಂಟ್ ಕಮೀಷನರುಗಳು ಹಾಗೂ ಡೆಪ್ಯುಟಿ ಕಮೀಷನರುಗಳು ಹೆಚ್ಚಿನ ಹೊಣೆಗಾರಿಕೆಯನ್ನು ಹೊರುವಂತೆ ಮಾಡಿ ಸಾಕಷ್ಟು ಚೆನ್ನಾಗಿ ಕೆಲಸಮಾಡದೇ ಹೋದರೆ, ಈ ಇಲಾಖೆ ಸರಿಯಾಗಲಾರದು ಎಂದು ನನ್ನ ಭಾವನೆ. ಏತಕ್ಕೆಂದರೆ ಇವೊತ್ತಿನ ದಿವಸ ತಹಶೀಲುದಾರರುಗಳೂ, ಅಸಿಸ್ಟೆಂಟ್ ಕಮೀಷನರುಗಳು, ಡೆಪ್ಯುಟಿ ಕಮೀಷನರುಗಳು ಲಂಚ ತೆಗೆದುಕೊಳ್ಳುತ್ತಾರೆನ್ನುವುದು ಮನೆ ಮಾತಾಗಿದೆ. ನಾನು ಇಲ್ಲಿ ಜವಾಬ್ದಾರಿಯಿಂದ ಈ ಮಾತನ್ನು ಆಡುತ್ತಿದ್ದೇನೆ. ಇದನ್ನು ಸರಕಾರ ವಿಚಾರ ಮಾಡಬೇಕು ಮತ್ತೆ ಇನ್ನೂ ಒಂದು ವಿಷಯವನ್ನು ಇಲ್ಲಿ ಹೇಳಬೇಕಾಗಿದೆ. ಇಲ್ಲಿ ಯಾವುದೇ ಓಬಿರಾಯನ ಕಾಲದಿಂದ ಬಂದಿದ್ದ ಯಾವ ಫಾರಂ ಎಂದು ಪ್ರಿಸ್‌ಕ್ರೈಬ್ ಆಗಿತ್ತೋ ಅದೇ ಫಾರಂಗಳೇ ಇವೊತ್ತಿಗೂ ಈ ಇಲಾಖೆಯಲ್ಲಿ ನಡೆಯುತ್ತಿವೆ. ಇಲ್ಲಿ ರಿಕಾರ್ಡ್ ಆಫ್ ರೈಟ್ಸ್ ವ್ಯವಸ್ಥೆ ಅತೀ ಮುಖ್ಯವಾದುದ್ದು, ಇವೊತ್ತಿನ ದಿವಸ ತಾಲ್ಲೂಕು ಆಫೀಸುಗಳಲ್ಲಿ ರಿಕಾರ್ಡ್ ಆಫ್‌ರೈಟ್ಸ್‌ನಂತೆ ರಿಕಾರ್ಡುಗಳು ಅಪ್‌ಟುಡೇಟ್ ಆಗಿಲ್ಲದೇ ಹೋದರೆ, ರೈತಾಪಿ ಜನ ಇದರಿಂದ ಹೆಚ್ಚಿನ ವಿವಾದಕ್ಕೊಳಗಾಗುತ್ತಾರೆ. ಇವೊತ್ತಿನ ದಿವಸ ಕೋರ್ಟುಗಳಲ್ಲಿರತಕ್ಕ ಎಲ್ಲ ವ್ಯವಹಾರಗಳೂ ಸಾಮಾನ್ಯವಾಗಿ ಅಪ್‌ಟುಡೇಟ್ ಆಗಿಲ್ಲದೇ ಇರುವ ರಿಕಾರ್ಡ್ ಆಫ್ ರೈಟ್ಸ್‌ನ ಕಾರಣದಿಂದಲೇ ಎಂದು ನಾನು ಭಾವಿಸುತ್ತೇನೆ.

ಈ ರೆವಿನ್ಯೂ ಇಲಾಖೆಯಲ್ಲಿ ರೈತನಿಗೆ ದರಖಾಸ್ತಿನ ಪದ್ಧತಿಯಲ್ಲಿ ಜಮೀನು ಇಲ್ಲದವರಿಗೆ ಜಮೀನು ಕೊಡುವ ಪದ್ಧತಿಯಿದೆ. ಇದೂ ಬಹಳ ನಿಧಾನವಾಗಿ ಸಾಮಾನ್ಯ ಜನರಿಗೆ ಜಮೀನು ಸಿಗುತ್ತಿಲ್ಲ. ಜಮೀನಿಗಾಗಿ ಅರ್ಜಿ ಕೊಟ್ಟು ಎಷ್ಟೋ ವರ್ಷಗಳಿಂದ ಸರಕಾರದ ಬಳಿ ಕಾದಿರುತ್ತಾರೆ. ಮತ್ತು ಆಫೀಸುಗಳಿಗೆ ಓಡಾಡುತ್ತಿರುತ್ತಾರೆ. ಈ ಪರಿಸ್ಥಿತಿ ತಪ್ಪಿಸಬೇಕಾದರೆ, ಸರಿಯಾದ ರಿಕಾರ್ಡ್ ಆಫ್ ರೈಟ್ಸ್‌ನಲ್ಲಿ ಲೆಕ್ಕಗಳನ್ನು ಸರಿಪಡಿಸದೇ ಜಮೀನಿಲ್ಲದವರಿಗೆ ಜಮೀನು ಒದಗಿಸಬೇಕೆನ್ನುವ ಗುರಿಯನ್ನು ಸಾಧಿಸಲಾಗದು. ಅನುಭವವಿಲ್ಲದವರು ಮತ್ತು ದುಡಿಮೆ ಮಾಡದಿರುವವರಿಗೆ ಹಳ್ಳಿಗಾಡಿನಲ್ಲಿ ಸರಕಾರದವರು ಜಮೀನು ಕೊಡುತ್ತಿದ್ದಾರೆ. ಆದರೆ ವ್ಯವಸಾಯವನ್ನೇ ನಂಬಿಕೊಂಡಿರತಕ್ಕವರಿಗೆ ಮತ್ತು ಬೆಳೆಯನ್ನು ಜಾಸ್ತಿ ಮಾಡಕತಕ್ಕವರಿಗೆ ಮತ್ತು ಚೆನ್ನಾಗಿ ವ್ಯವಸಾಯ ಮಾಡುವ ಬಡ ರೈತನಿಗೆ ಜಮೀನು ಸಿಗುತ್ತಿಲ್ಲ. ನಾವಿಲ್ಲಿ ಈ ವಿಷಯವನ್ನು ಹೇಳಿದರೆ, ಸರಕಾರ ಇದನ್ನು ಸ್ವಲ್ಪ ಲಘುವಾಗಿ ತೆಗೆದುಕೊಳ್ಳುತ್ತಾರೆ. ಈ ಇಲಾಖೆಯಲ್ಲಿರುವ ಅಧಿಕಾರಿಗಳ ಮನೋಭಾವನೆ ಪ್ರತಿನಿತ್ಯ ನಾವು ಈಗ ನೋಡುತ್ತಿರುವಂತೆ ಬದಲಾವಣೆ ಮಾಡುವ ಬಗ್ಗೆ ಸರ್ಕಾರ ಸೂಕ್ತವಾಗಿ ಪರಿಶೀಲನೆ ಮಾಡಬೇಕು. ಯಾವ ಯಾವ ಹಳ್ಳಿಯಲ್ಲಿ ಎಷ್ಟು ಜಮೀನಿದೆ, ಜಮೀನುಗಳಿಂದಲೇ ಜೀವನ ಮಾಡುತ್ತಿರುವ ರೈತರು ಎಷ್ಟು ಜನರಿದ್ದಾರೆ ಅನ್ನುವುದನ್ನು ನೋಡಿ ಜಮೀನಿನ ವಿಲೇವಾರಿಯನ್ನು ಜಾಗರೂಕತೆಯಿಂದ ಮಾಡಬೇಕು. ಯಾವ ಆಫೀಸಿನಲ್ಲಿಯಾದರೂ ಲಂಚವಿಲ್ಲದೆ ವಿಲೇವಾರಿ ಕೆಲಸವಾಗುತ್ತಿಲ್ಲ. ವಿಲೇವಾರಿ ತಡವಾಗುತ್ತಿರುವುದರಿಂದ ಜನಕ್ಕೆ ಅನುಕೂಲವಾಗುವುದಿಲ್ಲ ಮತ್ತು ದೇಶಕ್ಕೂ ಒಳ್ಳೆಯ ಪರಿಣಾಮವಾಗುವುದಿಲ್ಲ. ಮೇಲಾಗಿ ಜನತೆಯಲ್ಲಿ ಒಂದು ವಿಧವಾದ ಭಾವನೆ ಮೂಡಿ ನಮ್ಮ ದೇಶಕ್ಕೆ ಇದರ ದುಷ್ಪರಿಣಾಮವಾಗುತ್ತದೆ ಎಂದು ನನ್ನ ಭಾವನೆ.

ತಾಗಾದಿ ಸಾಲ ಕೊಡುವುದರ ವಿಷಯದಲ್ಲಿಯೂ ಕೂಡ ಬಹಳ ನಿಧಾನವಾಗುತ್ತಿದೆ, ಲ್ಯಾಂಡ್ ರೆವಿನ್ಯೂ ಬಗ್ಗೆ ಹೇಳುವುದಾದರೆ, ನಾನು ಇದರ ಬಗ್ಗೆ ಒಂದು ನಿದರ್ಶನ ಇಲ್ಲಿ ಕೊಡುತ್ತೇನೆ. ಹಿರಿಯೂರು ತಾಲ್ಲೂಕಿನಲ್ಲಿ ವಾಣಿವಿಲಾಸ್ ಕೆರೆಯ ಅಚ್ಚುಕಟ್ಟಿದೆ. ಸರಕಾರ ಈ ಬ್ಲಾಕಿನಲ್ಲಿರುವ ಹತ್ತು ಸಾವಿರ ಎಕರೆಗಳಿಗೆ ಮೊದಲು ನೀರು ಕೊಡುತ್ತಿದ್ದುದನ್ನು. ಈಚೆಗೆ ಹದಿನೆಂಟು ಸಾವಿರ ಎಕರೆಯವರಿಗೂ ಹೆಚ್ಚಿಸಿ ವ್ಯವಸ್ಥೆ ಮಾಡಿದ್ದೇವೆಂದು ಸರಕಾರ ತಿಳಿಸಿದ್ದಾರೆ, ಆದರೆ ಇಲ್ಲಿನ ಅಧಿಕಾರಿಗಳು ಹದಿನೆಂಟು ಸಾವಿರ ಎಕರೆಗಳನ್ನು ಭೂಮಿಗೆ ನೀರು ಬರುತ್ತದೆ ಎಂದು ಅಲ್ಲಿನ ಜನಕ್ಕೆ ಏನು ಕಾರ್ಯಕ್ರಮ ತೆಗೆದುಕೊಳ್ಳಬೇಕೋ ಅದನ್ನು ಮಾಡದೇ ಪೀನಲ್ ರೇಟುಗಳನ್ನೇ ಜಾಸ್ತಿ ಹಾಕತಕ್ಕ ಮನೋಭಾವನೆ ಇಲ್ಲಿನ ಅಧಿಕಾರಿಗಳಲ್ಲಿ ಬೆಳೆಯುತ್ತಿದೆ. ಈ ತಾಲ್ಲೂಕಿನಲ್ಲಿರುವ ಏರಿಯಾದಲ್ಲಿ ಯಾವ ಯಾವುದು ಬರುತ್ತದೆ. ಅದನ್ನು ಕಾನೂನು ರೀತಿಯಾಗಿ ಸೇರಿಸುವ ವ್ಯವಸ್ಥೆ ಕಾಣುತ್ತಿಲ್ಲ. ಇಲ್ಲಿನ ಜನ ಇಲ್ಲಿಯವರೆಗೂ ಐದೂವರೆ ರೂಪಾಯಿಗಳಷ್ಟು ವಾಟರ್ ರೇಟುಕೊಡುತ್ತಿದ್ದರು. ಆದರೆ ಈಗ ಅಡಿಷನಲ್ ವಾಟರು ರೇಟ್ ಎಂದು ಹದಿನೆಂಟು ಸಾವಿರ ಎಕರೆಗಳಿಗೆ ಹಾಕುತ್ತಿದ್ದಾರೆ. ಹತ್ತು ಸಾವಿರ ಎಕರೆಗಳಿಗಿಂತ ಈಗ ಎಂಟು ಸಾವಿರ ಎಕರೆಗಳಷ್ಟು ಭೂಮಿಗೆ ನೀರು ಕೊಡುತ್ತಿದ್ದೇವೆಂದು

ಪೀನಲ್ ರೇಟಾಗಿ ಜಾಸ್ತಿ ಕೊಡಬೇಕೆಂದು ಪ್ರತಿಯೊಬ್ಬರಿಂದಲೂ ವಸೂಲು ಮಾಡುತ್ತಾರೆ ಇದರಿಂದಾಗಿ ಬಡರೈತರು ಕಂದಾಯ ಕೊಡುವುದು ಬಹಳ ಕಷ್ಟವಾಗಿದೆ. ಏಕೆಂದರೆ, ಈ ರೈತರ ಕಷ್ಟ ಹೇಗಿದೆ, ಎಷ್ಟು ಹಣ ಅವರು ಕೊಡಬಹುದು, ಎನ್ನುವುದನ್ನು ಅವನ ಶಕ್ತಿಯ ಮೇಲೆ ತಿಳಿದುಕೊಂಡು ವಾಟರ್ ರೇಟನ್ನು ಹಾಕಬೇಕು.

ಈಗ ವ್ಯವಸಾಯದ ಉತ್ಪನ್ನದ ಮೇಲೆ ಸರ್‌ಚಾರ್ಜು ಕೊಡುವ ಪರಿಸ್ಥಿತಿ ಬೇರೆ ಇದೆ. ಇಂತಹ ಒಂದು ಪರಿಸ್ಥಿತಿ ಇರುವ ಸಂದರ್ಭದಲ್ಲಿ ಕಾನೂನಿನ ರೀತಿಯಾಗಿ ಇಲಾಖೆಯಲ್ಲಿರುವ ಅಧಿಕಾರಿಗಳು ಕೆಲಸ ಮಾಡದೆ ಪೀನಲ್ ರೇಟ್‌ಗಳೆಂದು ಕಂದಾಯವನ್ನು ವಸೂಲು ಮಾಡುವುದು ಸರಿಯಲ್ಲ. ಅಲ್ಲದೆ ಹೆಚ್ಚಿನ ಆಹಾರ ಉತ್ಪನ್ನ ಮಾಡಬೇಕೆಂದು ಸರಕಾರ ಕ್ರಮ ತೆಗೆದುಕೊಳ್ಳುತ್ತಿರುವ ಈ ಕಾಲದಲ್ಲಿ ಈ ರೀತಿ ಕಾರ್ಯಕ್ರಮ ತೆಗೆದುಕೊಳ್ಳುವುದು ಸರಿಯಲ್ಲ. ಇದನ್ನು ಸರಿಯಾಗಿ ವಿಚಾರ ಮಾಡಬೇಕೆಂದು ಮನವಿಮಾಡಿ ಕೊಳ್ಳುತ್ತೇನೆ.

ಅಲ್ಲದೆ, ನಮ್ಮ ಚಿತ್ರದುರ್ಗ ಜಿಲ್ಲೆಯಲ್ಲಿರುವ ಜಿಲ್ಲಾಧಿಕಾರಿಗಳು Vanivilasa Sagar Consultative Committeeಯವರ ಅಭಿಪ್ರಾಯದಂತೆ ಕಾನೂನು ಪ್ರಕಾರ ಏನು ವಾಟರ್ ರೇಟ್ ಹಾಕಬೇಕೆಂದು ಮಾಡಿದ್ದರೋ ಅದನ್ನು ಗಮನಕ್ಕೆ ತೆಗೆದುಕೊಳ್ಳದೆ ಸುಮ್ಮನೆ ಮನಸ್ಸಿಗೆ ಬಂದಂತೆ ಇಲ್ಲಿ ವಾಟರ್ ರೇಟ್ ನಿಗದಿ ಮಾಡುತ್ತಿದ್ದಾರೆ. ಹಿಂದೆ 250 ರೂಪಾಯಿಗಳಷ್ಟು ಕಾಂಟ್ರಿಬ್ಯೂಷನ್ನು-ಕೊಡಬೇಕೆಂದಿದ್ದುದನ್ನು 1960ರಲ್ಲಿ G.O. ಆಗಿ 150 ರೂಪಾಯಿಗಳಷ್ಟು ಕಾಂಟ್ರಿಬ್ಯೂಷನಿಗೆ ಇಳಿಸಿದರು. ಆದರೆ ಈಗಲೂ ಹಿಂದೆ 1958ನೇ ಇಸವಿಯಲ್ಲಿದ್ದಂತಹ ವಾಟರ್ ರೇಟನ್ನು ಕೊಡುವುದಕ್ಕೆ ಸಾಧ್ಯವಿಲ್ಲ. ಇದರ ಬಗ್ಗೆ ಸರಕಾರದ ಆಜ್ಞೆಯನ್ನು ನಮೂದು ಮಾಡಿದ್ದರೂ ತಾಲ್ಲೂಕಿನಲ್ಲಿರುವ ಅಧಿಕಾರಿಗಳು ಗಮನಕ್ಕೆ ತೆಗೆದುಕೊಳ್ಳದೆ ಪೀನಲ್ ರೇಟ್‌ಗಳನ್ನು ಕೊಡಬೇಕೆಂದರೆ ಹೇಗೊ, ಈಗಿರುವ 150 ನಂತೆ ಕಾಂಟ್ರಿಬ್ಯೂಷನನ್ನು ಕೊಡುವಂತೆ ಏರ್ಪಾಡುಮಾಡಬೇಕು. ತಾವು ದಯಮಾಡಿ ಹಿರಿಯೂರು ತಾಲ್ಲೂಕಿನ ಹಿಡುವಳಿದಾರರ ಕಷ್ಟವನ್ನು ಸರಿಯಾಗಿ ನೋಡಿ ಗಮನಕ್ಕೆ ತೆಗೆದುಕೊಳ್ಳಬೇಕು. ಇಲ್ಲಿ ಒಂದು ಸರ್ವೆ ನಂಬರಿನಲ್ಲಿ ಸುಮಾರು ಒಂದು ಎಕರೆಯಲ್ಲಿ ಮಾತ್ರ ಭತ್ತ ಬೆಳೆ ಮಾಡಿ ಭಾಗದಲ್ಲಿ ಬೇರೆ ಏನೂ ಬೆಳೆ ಮಾಡದಿದ್ದರೂ ಅವನಲ್ಲಿರುವ ಒಟ್ಟು ಇಪ್ಪತ್ತು ಎಕರೆಗೂ ಪೂರ್ತಿಯಾಗಿ ಐದೂವರೆ ರೂಪಾಯಿಗಳನ್ನು ವಾಟರ್ ರೇಟ್ ಕೊಡಬೇಕೆಂದು ಹೇಳಿದರೆ ಅದು ಸರಿಯಾದ ಕ್ರಮವಲ್ಲ, ಇದೂ ಅಲ್ಲದೆ ಇಲ್ಲಿ ಕೆಲವು ಕಡೆಗಳಲ್ಲಿ ಡಬಲ್ ವಾಟರ್ ರೇಟ್ ಬೀಳುತ್ತದೆ ಹಿಂದೆ ಈ ರೀತಿ ಡಬ್ಬಲ್ ರೇಟ್ ಬಿದ್ದಿದೆ. ರೀಫಂಡ್ ಮಾಡಿ ಎಂದು ಅರ್ಜಿಕೊಟ್ಟರೂ ಅದರ ಮೇಲೂ ಏನೂ ಕಾರ್ಯಕ್ರಮ ತೆಗೆದುಕೊಂಡಿಲ್ಲ. ಈ ವಿಷಯದಲ್ಲಿ ಸರಕಾರ ಹೆಚ್ಚು ನಿಗಾ ವಹಿಸಿ ಸಹಾಯ ಮಾಡಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ.

ಹಳೇ ಮೈಸೂರು ಪ್ರದೇಶದಲ್ಲಿ ರಿಕಾರ್ಡು ಆಫ್ ರೈಟ್ಸ್ ಸರಿಯಾದ ರೀತಿಯಲ್ಲಿ ಇಟ್ಟಿರುವುದಿಲ್ಲ ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಬಹಳ ಉತ್ಕೃಷ್ಟವಾದ ರೀತಿಯಲ್ಲಿ ಇಟ್ಟಿದ್ದಾರೆ. ಜಮೀನಿನಲ್ಲಿ ಎಷ್ಟು ಬೆಲೆ ಗೇಣಿದಾರನಿಗೆ ಬಂದೀತು ಎಂಬುದನ್ನು ರಿಕಾರ್ಡು ಆಫ್ ರೈಟ್ಸ್‌ನಲ್ಲಿ ಅಪ್‌ಟುಡೇಟ್ ಆಗಿ ನಮೂದಿಸಿಲ್ಲ. ಈ ದಾಖಲೆಗಳು ಸರಿಯಾಗಿಲ್ಲ.

ಈ ಬಾಬಿಗೆ ಹಣ ಒದಗಿಸಿರುವುದರಿಂದ ಈ ವ್ಯವಸ್ಥೆ ಸರಿಯಾಗಿಲ್ಲವೆಂದು ಹೇಳಬೇಕಾಗಿದೆ. ಜಮೀನು ಖರೀದಿಯಾಗಿದ್ದರೂ ಖಾತೆ ಬದಲಾವಣೆಯಾಗದೇ ಇರತಕ್ಕಂಥಾದ್ದನ್ನು ನಾವು ನೋಡುತ್ತೇವೆ. ಸಣ್ಣ ಪುಟ್ಟ ವಿಷಯಕ್ಕೆ ರೈತರ ತಾಲ್ಲೂಕು ಆಫೀಸ್ ಬಾಗಿಲು ಕಾಯಬೇಕು ಎನ್ನುವುದು ಒಳ್ಳೆಯದಲ್ಲ ಎಂದು ಸರ್ಕಾರಕ್ಕೆ ಒತ್ತಾಯ ಪೂರ್ವಕ ತಿಳಿಸಲಿಚ್ಛಿಸುತ್ತೇನೆ. ರಿಕಾರ್ಡ್ ಆಫ್ ರೈಟ್ಸ್ ಸರಿಯಾಗಿ ಇಡುವ ವ್ಯವಸ್ಥೆ ಮಾಡಬೇಕೆಂದು ಹೇಳುತ್ತೇನೆ.

ಹರಿಜನರಿಗೆ ದರ್ಖಾಸ್ತಿನಲ್ಲಿ ಜಮೀನು ಕೊಡುವುದರಲ್ಲಿ ಆಗುವಷ್ಟು ಅನ್ಯಾಯ ಬೇರೆ ಎಲ್ಲಿಯೂ ಆಗುವುದಿಲ್ಲ. ಹರಿಜನ ರೈತರಿಗೆ ಓದು ಬರಹ ಬರುವುದಿಲ್ಲ. ಅಧಿಕಾರಿಗಳನ್ನು ಆಶ್ರಯಿಸಿಕೊಂಡು ಇರಬೇಕಾಗುತ್ತದೆ. ರೂಲ್ಸ್ ಪ್ರಕಾರ 20 ಪರ್ಸೆಂಟ್ ರಿಜರ್ವ ಮಾಡಬೇಕೆಂದಿದೆ. ಆದರೆ ಇಂಥ ಜಮೀನು ವಿಲೇವಾರಿ ಮಾಡದೇ ಹೋದರೆ ಹರಿಜನ ರೈತರಿಗೆ ಅನುಕೂಲವಾಗಲಾರದು ಎಂದು ಈ ಸಂದರ್ಭದಲ್ಲಿ ಹೇಳುತ್ತೇನೆ. 20 ಪರ್ಸೆಂಟಕ್ಕಿಂತಲೂ ಹೆಚ್ಚು ರಿಜರ್ವ್ ಮಾಡಬೇಕು, ಯಾಕೆಂದರೆ ನಮ್ಮ ದೇಶ ವ್ಯವಸಾಯದ ಮೇಲೆಯೇ ಅವಲಂಬನೆ ಮಾಡಬೇಕಾಗಿದೆ. ಜನರಿಗೆ ಬೇರೆ ಉದ್ಯೋಗವಿಲ್ಲ. ಸಾಮಾನ್ಯವಾಗಿ ಹತ್ತು ಎಕರೆ ಡ್ರೈಲ್ಯಾಂಡ್ಸ್, ಕೊಡುತ್ತೀರಿ. ಅದುಕೂಡ ಸರಿಯಾಗಿ ಸಿಕ್ಕುವುದಿಲ್ಲ. ಕಾನೂನು ರೀತ್ಯಾ ಮಾಡದೇ ಇರುವುದರಿಂದ ದುರವಸ್ಥೆಗೆ ಕಾರಣವಾಗಿದೆ. ಇದನ್ನು ಸರಿಪಡಿಸಬೇಕು ಎಂದು ಹೇಳುತ್ತೇನೆ.

ಮದ್ದೂರು ತಾಲ್ಲೂಕಿನಲ್ಲಿ ನಿಡಗಟ್ಟ ಎಂಬ ಒಂದು ಗ್ರಾಮವಿದೆ. ಅಲ್ಲಿ 1952ರಲ್ಲಿ 25 ಜನ ಹರಿಜನ ರೈತರಿಗೆ 51 ಎಕರೆ ಭೂಮಿ ಕೊಟ್ಟಿದ್ದಾರೆ. ಆದರೆ ಇನ್ನು ಅವರ ಸ್ವಾಧೀನಕ್ಕೆ ಬಂದಿಲ್ಲ. 10 ವರ್ಷವಾದರೂ ಕೂಡ ಅವರ ಸ್ವಾಧೀನಕ್ಕೆ ಬರಲಿಲ್ಲ ಎನ್ನುವುದನ್ನು ಸರಕಾರ ವಿಚಾರ ಮಾಡಬೇಕಾದ ಪರಿಸ್ಥಿತಿಯಿದೆ. ದರಖಾಸ್ತು ವಿಲೇವಾರಿ ಮಾಡವಾಗ್ಗೆ ಜಮೀನು ಇಲ್ಲದವರಿಗೆ ಪ್ರಾಧಾನ್ಯ ಕೊಡದೆ ಜಮೀನು ಇರತಕ್ಕ ಜನರಿಗೆ ರಾಜಕೀಯ ಒತ್ತಡಕ್ಕೆ ಬಲಿಯಾಗಿ ಅವರಿಗೆ ಕೊಡುವುದರಿಂದ ಒಳ್ಳೇ ಪರಿಣಾಮವಾಗುವುದಿಲ್ಲ. ಈ ರೀತಿ ಮಾಡಿದರೆ ದೇಶದಲ್ಲಿ ಅಧಿಕ ಆಹಾರ ಉತ್ಪಾದನೆ ಸರಿಯಾಗಿ ಆಗಲಾರದು, ಎಂದು ನನ್ನ ಭಾವನೆ. ಇದನ್ನು ಲಘುವಾಗಿ ತೆಗೆದುಕೊಳ್ಳದೆ ಸರಕಾರ ತೀವ್ರತೆಯಿಂದ ವಿಚಾರ ಮಾಡಬೇಕು, ಇದಕ್ಕೆ ಗಮನ ಕೊಡಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ.

ಇಂದು ದೇಶದಲ್ಲಿನ ಲಂಚ ನಿರ್ಮೂಲನ ಮಾಡದೆ ಹೋದರೆ ಅದರ ದುಷ್ಪರಿಣಾಮಕ್ಕೆ ಸರಕಾರವೇ ಹೊಣೆಯಾಗಬೇಕಾಗುತ್ತದೆಂದು ಹೇಳಬೇಕಾಗುತ್ತದೆ. ಲಂಚ ನಿರ್ಮೂಲನಕ್ಕಾಗಿ ಒಂದು ಪ್ರತ್ಯೇಕ ಇಲಾಖೆಯಿದೆ. ಆದರೆ ಅರ್ಜಿ ಕೊಟ್ಟರೆ ಅವರು ವಿಚಾರಣೆ ಮಾಡುತ್ತಾರೆ ಸಬ್ ರಿಜಿಸ್ಟ್ರಾರ್ ಆಫೀಸಿಗೆ ಹೋಗಿ ನೋಡಿದರೆ ಗೊತ್ತಾಗುತ್ತದೆ. ಲಂಚ ಕೊಡದೇ ಕೆಲಸವಾಗುವುದು ಸಾಧ್ಯವಿಲ್ಲ. ಇಂಥ ಪರಿಸ್ಥಿತಿಯಿದೆ. ಈ ಲಂಚ ನಿರ್ಮೂಲನ ಮಾಡಬೇಕೆಂದು ಬಹಳ ಕಳಕಳಿಯಿಂದ ಸರಕಾರಕ್ಕೆ ಹೇಳುತ್ತೇನೆ.

*****

# ಪೋಲೀಸರು ಮತ್ತು ಪುಂಡುಗಂದಾಯ!

5 ಸೆಪ್ಟೆಂಬರ್ 1963

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ).- ಮಾನ್ಯ ಸಭಾಪತಿಗಳೆ, ಇದು ಕರ್ನಾಟಕ ರಾಜ್ಯಕ್ಕೆಲ್ಲ ಅನ್ವಯವಾಗತಕ್ಕ ಒಂದು ಮಸೂದೆ ಎಂದು ಮಾತ್ರ ಕರೆಯಬಹುದೇ ವಿನಾ ಈ ಮಸೂದೆಯಲ್ಲಿ ಅಂತಹ ಕ್ರಾಂತಿಕಾರಕವಾದ ಬದಲಾವಣೆಗಳೇನೂ ಇಲ್ಲವೆಂದು ನನ್ನ ಅಭಿಪ್ರಾಯ. ಏಕೆಂದರೆ, ಸಾಮಾನ್ಯವಾಗಿ ಪರದೇಶಗಳಿಗೆ ಹೋಗಿಬಂದ ನನ್ನ ಸ್ನೇಹಿತರು ಪೊಲೀಸರು ಆ ದೇಶಗಳಲ್ಲಿ ನಡೆದುಕೊಳ್ಳುವ ವಿಧಾನವನ್ನು ಹೇಳುತ್ತಾರೆ; ಅಲ್ಲಿ ಪೋಲೀಸ್ ಅಧಿಕಾರಿ ದೇಶದ ಜನತೆಯನ್ನು ಎಷ್ಟುಮಟ್ಟಿಗೆ ಕಾಣುತ್ತಾನೆಂಬುದನ್ನು ಹೇಳುತ್ತಾರೆ. ಅವನು ಒಬ್ಬ ಸಹಾಯಕನಂತೆ ಕಾಣುತ್ತಾನೆಯೇ ವಿನಾ ಜನತೆಯನ್ನು ಎಂದೂ ನಿಕೃಷ್ಟತೆಯಿಂದ ನೋಡುವುದಿಲ್ಲವೆಂದು ಹೇಳುತ್ತಾರೆ. ಆದರೆ ದುರದೃಷ್ಟದಿಂದ ನಮ್ಮ ದೇಶದಲ್ಲಿ ಪೋಲೀಸಿನವರ ದಬ್ಬಾಳಿಕೆ, ಪೋಲೀಸ್ ಅಧಿಕಾರಿಗಳ ವರ್ತನೆ, ಪೋಲೀಸ್ ಇಲಾಖೆ ತನ್ನ ಕಾರ್ಯಕ್ರಮವನ್ನು ನಡೆಸತಕ್ಕ ವಿಧಾನವನ್ನು ಎಲ್ಲರೂ ನಿತ್ಯ ನೋಡುತ್ತಿದ್ದೇವೆ. ಇದರಲ್ಲಿ ಯಾವ ವಿಧವಾದ ಅತಿಶಯೋಕ್ತಿಯೂ ಇಲ್ಲ, ಏಕೆಂದರೆ ಹೈಕೋರ್ಟ್ ನ್ಯಾಯಾಧೀಶರು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ನಮ್ಮ ಸಂಸ್ಥಾನದಲ್ಲಿ ಪೋಲೀಸ್ ಅಧಿಕಾರಿಗಳು ಒಂದು ಕೇಸನ್ನು ಇನ್‌ವೆಸ್ಟಿಗೇಟ್ ಮಾಡುವ ವಿಧಾನವಾಗಲೀ ಅದನ್ನು ನಡೆಸತಕ್ಕ ವಿಧಾನವಾಗಲೀ ಸರಿಯಲ್ಲವೆಂದು ಕಾಲಕಾಲಕ್ಕೆ ಹಲವಾರು ಬಾರಿ ಟೀಕೆ ಮಾಡಿದ್ದಾರೆ.

ಆದರೆ ನಮ್ಮ ದುರದೃಷ್ಟ ಸ್ವಾತಂತ್ರ್ಯ ಬಂದ ನಂತರವೂ ಕೂಡ ಯಾವ ಹಳೆಯ ಕಾಲದ ಪೋಲೀಸ್ ಅಧಿಕಾರಿಗಳಿದ್ದರೋ ಅವರೇ ಇವೊತ್ತಿನ ದಿವಸ ಅಧಿಕಾರದಲ್ಲಿದ್ದಾರೆ. ಹಿಂದಿನ ಮನೋಭಾವವೇ ಮುಂದುವರಿಯುತ್ತಿವೆ. ಇದರ ಬಗ್ಗೆ ದೇಶದ ಮತ್ತು ಸರ್ಕಾರದ ಗಮನವಿಲ್ಲವಲ್ಲ ಎಂದು ವ್ಯಥೆಯಿಂದ ಈ ಮಾತನ್ನು ಹೇಳುತ್ತಿದ್ದೇನೆ. ಇದರಲ್ಲಿ ಅತಿಶಯೋಕ್ತಿ ಇಲ್ಲ. ಸರ್ಕಾರ ಪೋಲೀಸು ಇಲಾಖೆಯನ್ನು ಹಿಡಿತದಲ್ಲಿಟ್ಟುಕೊಳ್ಳಬೇಕಾದರೆ, ಕೋರ್ಟುಗಳು ಪೋಲೀಸು ಅಧಿಕಾರಿಗಳ ಮೇಲಾಗಲೀ ಇಲಾಖೆಯ ಮೇಲಾಗಲೀ ಒಂದು ಅಭಿಪ್ರಾಯವನ್ನು ವ್ಯಕ್ತಮಾಡಿದಾಗ ಅವರ ಬಗ್ಗೆ ಸೂಕ್ತ ಕ್ರಮ ತೆಗೆದುಕೊಂಡು ಅದನ್ನು ಪರಿಹಾರ ಮಾಡುವುದರಿಂದ ಮಾತ್ರ ಸಾಧ್ಯ. ಇಲ್ಲದೆ ಹೋದರೆ ಅಂಥ ನ್ಯಾಯಾಸ್ಥಾನಗಳ ಅಭಿಪ್ರಾಯಕ್ಕೆ ರಾಜ್ಯದಲ್ಲಿ ಮನ್ನಣೆಯಿಲ್ಲ, ಸರ್ಕಾರಕ್ಕೆ ಮನ್ನಣೆಯಿಲ್ಲ ಎಂದಾಗುತ್ತದೆ.....

**Sri R.M. PATIL.-** May I interve--- Sir? His observations are set correct.

**Sri K.H. RANGANATH.-** I would ask him a straight question In fact, our very High Court has passed remarks against a

Deputy Superintendent of Police who has responsible for the investigation of a case against a high officer, a surgeon of Dharwar. What step have Government taken? I want to challenge........

**Sri R.M. PATIL.-** Well, Sir, this is a different matter, Government have taken action.

**Sri K.H. RANGANATH.-** I am not yielding. My observation we that the Government was not taking steps to need the remarks of the Courts. If that was a wrong observation, I want to put a very simple question. What steps have Government taken against that Police Officer, whose actions have been condemnded and rediculed by the High Court; Instead, my information is that he has been given a medal, I want a stright answer if the Minister still insists.

**Sri R.M. PATIL.-** If my friend yields, I will tell him. Government have taken action and it is under enquiry.

**Sri K.H. RANGANATH.-** I want to know what steps Government have taken. Is it only enquiry?

**Sri R.M. PATIL.-** It appears my Hon'ble friend does not know the procedure. Unless an enquiry is held in respect of the bonafides of the officer who has investigated the case or the malafides of the officer and finding is there, is it ever possible to find who is guilty?

**Sri K.H. RANGANATH.-** That remark will not improve matter. The decision of the High Court was not passed a few months ago. The decision was given years ago. If the Government is still enquiring, I am sorry. This only speaks of the inefficiency of the Government and nothing else.

(ಮುಂದುವರೆದು)

Such things may not improved matters

ಇನ್ನು ಮಂತ್ರಿಗಳಾಗಲೀ ಸರ್ಕಾರದವರಾಗಲೀ ಅವರ ಕರ್ತವ್ಯವನ್ನು ದಕ್ಷತೆಯಿಂದ ಮಾಡಬೇಕು ಎಂಬ ಒಳ್ಳೆಯ ಉದ್ದೇಶದಿಂದ ನಾನು ಮಾತನಾಡಿದೆ. ಎಷ್ಟು ಶ್ರದ್ಧೆವಹಿಸಿ ಎಷ್ಟು ಗಮನದಿಂದ ಆ ಕೆಲಸವನ್ನು ಅತಿ ತ್ವರಿತವಾಗಿ ಮಾಡಬೇಕಾಗಿತ್ತೋ ಆ ರೀತಿ ಮಾಡುತ್ತ ಇಲ್ಲ ಎನ್ನತಕ್ಕ ಅಭಿಪ್ರಾಯವನ್ನು ನಾನು ವ್ಯಕ್ತಪಡಿಸಿದರೆ, ಅದು ಮಂತ್ರಿಗಳಿಗೆ ಹಿಡಿಸದೆ ಹೋದರೆ ನಾನು ಜವಾಬ್ದಾರನಲ್ಲ.

ನಾವು ನಿತ್ಯ ನೋಡುತ್ತೇವೆ. ಮಂತ್ರಿಗಳು ಲಾಯರಾಗಿದ್ದವರು, ಕ್ರಿಮಿನಲ್ ಲಾಯರ್ ಆಗಿದ್ದವರು. ಪೋಲೀಸಿನವರು ಯಾವ ರೀತಿ ಇನ್‌ವೆಸ್ಟಿಗೇಟ್ ಮಾಡುತ್ತಾರೆ. ಯಾವರೀತಿ ಕೇಸನ್ನು ಕನ್‌ಕಾಕ್ಟ್ ಮಾಡುತ್ತಾರೆ ಎನ್ನುವುದು ಗೊತ್ತು. ನಿಜಾಂಶವನ್ನು ಬಚ್ಚಿಟ್ಟುಕೊಳ್ಳುವುದರಿಂದ ದೇಶ ಸೇವೆ ಮಾಡಿದಂತಾಗುವುದಿಲ್ಲ. ಇಲಾಖೆಯಲ್ಲಿರುವ ಲೋಪಗಳನ್ನು ನಿವಾರಣೆ ಮಾಡುವುದಕ್ಕೆ ಪ್ರಯತ್ನ ಪಡದೆ ಹೋದರೆ ನಮ್ಮ ಜವಾಬ್ದಾರಿಯನ್ನು ನಾವು ಮಾಡಿದಂತಾಗುವುದಿಲ್ಲ. ಇವೊತ್ತಿನ ದಿವಸ ದೇಶದಲ್ಲಿ ಕೊಲೆ ವಗೈರೆ ಹೆಚ್ಚಾಗುತ್ತಿರುವುದಕ್ಕೆ ಪೋಲೀಸಿನವರು ಸರಿಯಾಗಿ ನಿಗಾವಹಿಸಿ ಕೆಲಸಮಾಡದೆ ಇರುವುದು ಅಥವಾ ಒಂದು ವೇಳೆ ಒಂದು ಕೇಸನ್ನು ಹಿಡಿದರೆ, ಇನ್‌ವೆಸ್ಟಿಗೇಟ್ ಮಾಡಿದರೆ ಆ ಕೃತ್ಯಕ್ಕೆ ಸಂಬಂಧಪಟ್ಟವರನ್ನು ಬಿಟ್ಟು ಯಾರನ್ನೋ ಹಿಡಿದು ಕನ್‌ಕಾಕ್ಟ್ ಮಾಡುತ್ತಿರುವುದು ಕಾರಣ ಎಂದು ನನ್ನ ಅಭಿಪ್ರಾಯ.

ಪಾನನಿರೋಧವು ಯಶಸ್ವಿಯಾಗದೆ ಇರುವುದಕ್ಕೆ ಪೋಲೀಸ್ ಅಧಿಕಾರಿಗಳು ಕಾರಣರೇ ವಿನಾ ಮತ್ತೆ ಯಾರೂ ಕಾರಣರಲ್ಲ. ನಾನು ಏಕೆ ಹೇಳುತ್ತೇನೆಂದರೆ ನಾನು ಮಲೆನಾಡಿನ ಒಂದು ಭಾಗದಿಂದ ಬರುವವನು. ಮಾನ್ಯಮಂತ್ರಿಗಳಿಗೆ ಇಷ್ಟವಿದ್ದರೆ ಅವರು ಮಂತ್ರಿಗಳಾಗಿ ಅಲ್ಲ, ಒಬ್ಬ ಸಾಮಾನ್ಯ ಪ್ರಜೆಯಂತೆ ಮಲೆನಾಡು ಭಾಗಕ್ಕೆ ಬರುವುದಾದರೆ ಅಲ್ಲಿರುವಂಥ ಪಾನನಿರೋಧ ನೀತಿಯನ್ನು ತಿಳಿಯಬಹುದು. ಅಲ್ಲಿ ಪಾನನಿರೋಧದ ಉಲ್ಲಂಘನೆ ಬಹಿರಂಗವಾಗಿ ನಡೆಯುತ್ತದೆ. ಇನ್ನೆಲ್ಲಿಯೂ ಆ ರೀತಿ ನಡೆಯುವುದಿಲ್ಲ. ಅಲ್ಲಿ ಅಧಿಕಾರಿಗಳಿಗೆ ಬರತಕ್ಕ ಲಂಚ ಇನ್ನೆಲ್ಲಿಯೂ ಬರುವುದಿಲ್ಲ. ಒಂದೊಂದು ತಾಲ್ಲೂಕಿನಲ್ಲಿಯೂ ಮೂರುನಾಲ್ಕು ಸಾವಿರ ರೂಪಾಯಿ ಮಾಮೂಲು ಇದೆ ಎಂದು ಹೇಳುತ್ತಾರೆ. ಇದರಲ್ಲಿ ಸ್ವಲ್ಪ ಉತ್ಪ್ರೇಕ್ಷೆ ಇರಬಹುದು. ಆದರೆ ನಿಜಾಂಶವಿಲ್ಲದೆ ಇಲ್ಲ. ಇಂಥದ್ದನ್ನು ಕಂಡು ಹಿಡಿಯಬೇಕಾದರೆ ನಿಸ್ಪೃಹತೆಯಿಂದ ಕೆಲಸಮಾಡತಕ್ಕ ಪೋಲೀಸು ಅಧಿಕಾರಿಗಳನ್ನು, ದಕ್ಷತೆಯಿಂದ ಕೆಲಸಮಾಡತಕ್ಕ ಪೋಲೀಸು ಅಧಿಕಾರಿಗಳನ್ನು ನೇಮಕಮಾಡುವುದರಿಂದ ಮಾತ್ರ ಸಾಧ್ಯ. ಅವರು ಏನೋ ಮಾಡುತ್ತಾರೆಂದು ಅವರಿಗೆ ಬೆಂಬಲ ಕೊಡಬೇಕೆಂಬ ದೃಷ್ಟಿಯಿಂದ ಮಾಡುವುದಾದರೆ ನಾವು ಜನತೆಯ ಸೇವೆ ಮಾಡುವುದಕ್ಕೆ ಸಾಧ್ಯವಿಲ್ಲ. ನಾವು ಒಳ್ಳೆಯ ಆಡಳಿತವನ್ನು ನಡೆಸಲು ಸಾಧ್ಯವಿಲ್ಲ.

*****

# ಈ ಕಾಲದಲ್ಲೂ ಪುಂಡುಕಂದಾಯವೆ?

5 ಸೆಪ್ಟೆಂಬರ್ 1963

ಹಿಂದಿನ ಕಾಲದಲ್ಲಿ ಪುಂಡುಗಂದಾಯ ಹಾಕತಕ್ಕ ಪದ್ಧತಿ ಇತ್ತು. ಅಂಥ ಒಂದು ಪುಂಡುಕಂದಾಯ ಹಾಕುವುದಕ್ಕೆ ಅವಕಾಶಮಾಡತಕ್ಕ ಕೆಲವು ಕ್ಲಾಜುಗಳು ಇದರಲ್ಲಿವೆ. ಮಂತ್ರಿಗಳು ಹೇಳಿದರು. ಕೆಲರು ಸದಸ್ಯರು "ಡಿಸೆಂಟಿಂಗ್ ನೋಟ್ ಕೊಟ್ಟಿದ್ದಾರೆ. ಎಂದು ನನ್ನ ಪಕ್ಷದ ಸದಸ್ಯರೂ ಸಹ" ಡಿಸೆಂಟಿಂಗ್ ನೋಟ್ ಕೊಟ್ಟಿದ್ದಾರೆ. ಇದು ಕ್ಲಾಜ್ 49 ರಿಂದ 54-55ರ ವರೆಗೂ ಬರುತ್ತದೆ. ಯಾರೋ ಮಾಡತಕ್ಕ ಅಪರಾಧಕ್ಕೆ ಇಡೀ ಊರಿಗೇ ಪುಂಡುಕಂದಾಯ ಹಾಕತಕ್ಕದ್ದು ಈ ಕಾಲದ ಸಂಪ್ರದಾಯವಲ್ಲ. Welfare State is our aim. ಅಂಥ ಒಂದು ಗುರುತರವಾದ ಜವಾಬ್ದಾರಿಯನ್ನು ಹೊತ್ತಿರುವಾಗ, ಅಂಥದ್ದು ನಮ್ಮ ಗುರಿಯಾಗಿರುವಾಗ, ದೇಶದಲ್ಲಿರತಕ್ಕ ಜನಗಳನ್ನು ನಾವು ನಂಬದೆಹೋದರೆ ಅವರ ಬಗ್ಗೆ ವಿಶ್ವಾಸವಿಟ್ಟುಕೊಳ್ಳದೆ ಹೋದರೆ, ಕೆಲವಾರು ಪುಂಡು ಪೋಕರಿಗಳು ಮಾಡತಕ್ಕ ಕೃತ್ಯಕ್ಕೆ ಇಡೀ ಒಂದು ಊರನ್ನು, ಇಡೀ ಬಂದು ಜಿಲ್ಲೆಯನ್ನು ಹೊಣೆ ಮಾಡುವುದು, ತಲೆಕಂದಾಯವನ್ನು ವಸೂಲ್ಮಾಡತಕ್ಕದ್ದು ಇಪ್ಪತ್ತನೆಯ ಶತಮಾನದಲ್ಲಿ ಸರಿಹೋಗುವಂಥ ಪದ್ಧತಿಯಿಲ್ಲ.

ಇದನ್ನು ಮಾನ್ಯ ಮಂತ್ರಿಗಳು ವಿಚಾರಮಾಡಬೇಕು. ಇದರ ಬಗ್ಗೆ ವಿಚಾರಿಸಿ ಆ ಭಾಗವನ್ನು ಕೈ ಬಿಟ್ಟರೆ ಬಹಳ ಒಳ್ಳೆಯದು ಎಂದು ನನ್ನ ಅಭಿಪ್ರಾಯ.

129ನೇ ಸೆಕ್ಷನ್‌ನಲ್ಲಿ ತಿಳಿಸಿರುವ ವಿಷಯ ಹಳೇ ಮೈಸೂರಿನಲ್ಲಿ ಇರಲಿಲ್ಲ. ಇಂಟಿಗ್ರೇಟೆಡ್ ಏರಿಯಾದಿಂದ ಬಂದಿರತಕ್ಕ ಭಾಗಗಳಲ್ಲಿ ಪೋಲೀಸ್ ಪಟೇಲ್ ಹುದ್ದೆ ಇದೆ, ಅದನ್ನು ಇಲ್ಲಿ ಅಳವಡಿಸಿದ್ದಾರೆ. ಇದರಿಂದ ಏನಾಗುತ್ತದೆ ಎಂದರೆ ಈಗಾಗಲೇ ನಮಗೆ ಬೇಜಾರಾಗುವಷ್ಟು ಹಳ್ಳಿಗಳಲ್ಲಿ ಪಾರ್ಟಿ ವೈಷಮ್ಯ ಬೆಳೆಯುತ್ತಾ ಇದೆ. ಅದಕ್ಕೆ ಹೆಚ್ಚು ಅವಕಾಶವನ್ನು ನಾವು ಈ ಒಂದು ಕ್ಲಾಜಿನಿಂದ ಮಾಡಿ ಕೊಟ್ಟ ಹಾಗಾಗುತ್ತದೆ ಎಂದು ನನ್ನ ಅಭಿಪ್ರಾಯ. ಏಕೆಂದರೆ ಅವರಿಗೆ ಅತಿ ಹೆಚ್ಚಿನ ಅಧಿಕಾರ ಕೊಡಲಾಗಿದೆ. ಅವನು ತನಗೆ ಅನುಮಾನಬಂದಂಥವನನ್ನು ಅರೆಸ್ಟ್ ಮಾಡಬಹುದು ಅಥವಾ ಅಂತಹ ಪುಂಡ ಆ ಹಳ್ಳಿಯಲ್ಲಿದ್ದರೆ ಅಂತಹವನನ್ನು ಪೋಲೀಸ್ ಅಧಿಕಾರಿ ನೇಮಕ ಮಾಡಿಕೊಳ್ಳಬಹುದು- ಇಂತಹ ಅಧಿಕಾರ ಕೊಡಲಾಗಿದೆ.

ಇದರಿಂದ ಏನಾಗುತ್ತದೆ ಎಂದರೆ ಸಾಮಾನ್ಯವಾಗಿ ಹಳ್ಳಿಗಳಲ್ಲಿ ವೈಷಮ್ಯ ಜಾಸ್ತಿ. ಕಾರಣಾಂತರಗಳಿಂದ ಹಳ್ಳಿಗಳಲ್ಲಿರತಕ್ಕ ಜನರಿಗೆ ಇನ್ನೂ ಅಂತಹ ದೊಡ್ಡ ಭಾವನೆ ಬಂದಿಲ್ಲ ಎಂಬುದು ವಿಷಾದಕರವಾದ ಸಂಗತಿಯಾಗಿದೆ. ಇದು ಎಲ್ಲರಿಗೂ ಗೊತ್ತಿರತಕ್ಕ ವಿಷಯ. ಅವರನ್ನು ವಿದ್ಯಾವಂತರನ್ನಾಗಿ ಮಾಡತಕ್ಕ ಹೊಣೆಗಾರಿಕೆ ನಮ್ಮ ಮೇಲೆ ಇರುವಾಗ ಅವರನ್ನು ದುರುಪಯೋಗ ಮಾಡಿಕೊಳ್ಳುವುದಕ್ಕೆ ಅವಕಾಶ ಮಾಡುವುದರಿಂದ ಈ ಅಧಿಕಾರ

ದುರುಪಯೋಗವಾಗಿ ಹೆಚ್ಚು ಹೆಚ್ಚು ವೈಷಮ್ಯ ಬೆಳೆಯುವುದಕ್ಕೆ ಕಾರಣಾವಾದೀತು ಎಂಬ ದೃಷ್ಟಿಯಿಂದ 9ನೇ ಚಾಪ್ಟರನ್ನು ಪೂರ್ಣವಾಗಿ ಕೈ ಬಿಡಬೇಕೆಂದು ನನ್ನ ಒಂದು ಸಲಹೆ.

ಬೆಂಗಳೂರು ಸಿಟಿಗೆ ಕಮಿಷನರನ್ನು ನೇಮಕ ಮಾಡಿಕೊಳ್ಳುತ್ತೀರಿ. ಅದಕ್ಕೆ ಬೇರೆ ಒಂದು ಸಿಬ್ಬಂದಿ ಇರುತ್ತದೆ, ಅದು ಸ್ವಾಗತಾರ್ಹವಾದ ವಿಷಯವಾದರೂ ಈ ಸಂದರ್ಭದಲ್ಲಿ ಒಂದು ಮಾತನ್ನು ಬೆಂಗಳೂರಿನ ಬಗ್ಗೆ ಹೇಳಬೇಕೆಂದು ಅಭಿಪ್ರಾಯ ಪಡುತ್ತೇನೆ. ನಾನು ಬೆಂಗಳೂರು ಸಿಟಿಯಲ್ಲಿ ಇರತಕ್ಕವನು. ಸಾಧಾರಣವಾಗಿ ನನಗೆ ಇಲ್ಲಿಯೆ ವಿಚಾರ ಸ್ವಲ್ಪ ತಿಳಿದಿದೆ. ಇಲ್ಲಿ ಏನಾಗಿದೆಯೆಂದರೆ ಇಲ್ಲಿರತಕ್ಕ ಒಬ್ಬ ಅಧಿಕಾರಿ ಹತ್ತಾರು ವರ್ಷಗಳಿಂದ ಇಲ್ಲೇ ಇರುತ್ತಾರೆ. ಅವರು ಮತ್ತು ಕಳ್ಳತನ ಮಾಡತಕ್ಕವರು, ದರೋಡೆ ಮಾಡತಕ್ಕವರು ಸೇರಿಕೊಂಡು ಅವರಿಗೂ ಇವರಿಗೂ ಹೊಂದಾಣಿಕೆಯಾಗಿದೆ.

ಅದರಲ್ಲೂ ಹೆಚ್ಚಾಗಿ ಕಾನ್‌ಸ್ಟೇಬಲರಿಯಲ್ಲಿ ರೆಕ್ರೂಟ್‌ಮೆಂಟ್ ವ್ಯವಸ್ಥೆಯೇ ಸರಿಯಾಗಿಲ್ಲ. ಏಕೆಂದರೆ ಸಮಾಜದಲ್ಲಿ ಬೇಡವಾಗಿರತಕ್ಕ ವ್ಯಕ್ತಿಗಳನ್ನು ಇದಕ್ಕೆ ರೆಕ್ರೂಟ್ ಮಾಡುತ್ತಾ ಇದ್ದಾರೆ, ವಿದ್ಯಾವಂತರನ್ನು ರೆಕ್ರೂಟ್ ಮಾಡುತ್ತಾ ಇಲ್ಲ, ಕಾನೂನು ಬಲ್ಲವರನ್ನು ರೆಕ್ರೂಟ್ ಮಾಡುತ್ತಾ ಇಲ್ಲ. ಈ ಕೊನೆ ಅಧಿಕಾರಿ ಕಾನ್‌ಸ್ಟೇಬಲ್ ಕಾನೂನು ತಿಳಿದವರಾಗಿರಬೇಕು, ವಿದ್ಯಾವಂತರಾಗಿರಬೇಕು; ಇಲ್ಲದೇ ಹೋದರೆ ನಮ್ಮ ಯಾವ ಪೋಲೀಸ್ ಇನ್‌ಸ್ಪೆಕ್ಟರ್‌ರಾಗಲೀ, ಸಬ್ ಇನ್‌ಸ್ಪೆಕ್ಟರಾಗಲೀ ಸಾಮಾನ್ಯ ಪ್ರಜೆಯ ಸಹಾಯಕ್ಕೆ ಬರಲು ಸಾಧ್ಯವಿಲ್ಲ. ಆದ್ದರಿಂದ ಕಾನ್‌ಸ್ಟೇಬಲ್‌ಗಳನ್ನು ನೇಮಕ ಮಾಡಿಕೊಳ್ಳುವಾಗ ವಿದ್ಯಾವಂತವರನ್ನು ನೇಮಕಮಾಡಿಕೊಳ್ಳಬೇಕು ಮತ್ತು ಅದರ ಸ್ಥಿತಿಗತಿ-ಅಂಟಿಸಿಡೆಂಟ್ಸ್-ನ್ನು ವಿಚಾರ ಮಾಡಿ ಸೇರಿಸಿಕೊಳ್ಳತಕ್ಕ ವ್ಯವಸ್ಥೆಯನ್ನು ಜಾರಿಗೆ ತರಬೇಕು.

**Sri R.M. PATIL.-** How do you say that will not follow:-

**ಶ್ರೀ ಕೆ.ಎಚ್. ರಂಗನಾಥ್.-** ಇನ್‌ಸ್ಪೆಕ್ಟರ್ ಜನರಲ್ ಅವರು ನೇಮಕ ಮಾಡಿಕೊಳ್ಳುತ್ತಾರೆ. ಯಾವ ತರಹ ರಿಕ್ರೂಟ್‌ಮೆಂಟ್ ಮಾಡಿಕೊಳ್ಳಬಹುದು ಎಂಬ ಬಗ್ಗೆ ಒಂದು ಕಲಮೂ ಸಹ ಇಲ್ಲಿ ಇಲ್ಲ. ಆದ್ದರಿಂದ ನಾನು ಒಂದು ಅಭಿಪ್ರಾಯವನ್ನು ಕೊಡುವುದಾದರೆ ಕಾನ್‌ಸ್ಟೇಬಲ್‌ಗಳನ್ನು ನೇಮಕ ಮಾಡಿಕೊಳ್ಳುವಾಗ ಎಸ್.ಎಸ್.ಎಲ್.ಸಿ. ಪಾಸ್ ಆದವರನ್ನು ನೇಮಕ ಮಾಡಿಕೊಳ್ಳಬೇಕು, ಮತ್ತು ಅವರಿಗೆ ಹೆಚ್ಚು ಸಂಬಳ ಕೊಡಬೇಕು. ಕಡಿಮೆ ಸಂಬಳ ಇಟ್ಟು ವಿದ್ಯಾವಂತ ಅಭ್ಯರ್ಥಿಗಳನ್ನು ಕರೆದರೆ ಯಾರೂ ಬರುವುದಿಲ್ಲ. ಆದ್ದರಿಂದ ಹೆಚ್ಚು ಸಂಬಳ ಕೊಟ್ಟು ಹೆಚ್ಚು ವಿದ್ಯಾವಂತರು. ಹೆಚ್ಚು ತಿಳಿವಳಿಕೆ ಪಡೆದಿರುವಂತಹವರನ್ನು ನೇಮಕ ಮಾಡಿದರೆ ಅಂತಹ ಪೋಲೀಸ್ ಅಧಿಕಾರಿಗಳು ಒಳ್ಳೆಯ ಕೆಲಸ ಮಾಡುತ್ತಾರೆ; ನಮಗೆ ಸ್ವಲ್ಪ ನ್ಯಾಯ ದೊರಕಲಿಕ್ಕೆ ಸಾಧ್ಯವಾದೀತು ಎಂಬುದು ನನ್ನ ಆಶೆ ಮತ್ತು ಅಭಿಪ್ರಾಯ.

**Sri R.M. PATIL.-** The rules will be placed before the House. The Hon'ble Member must know that.

**ಶ್ರೀ ಕೆ.ಎಚ್. ರಂಗನಾಥ್.-** ಮಾಡಿದರೆ ಬಹಳ ಸಂತೋಷ ನಿಮ್ಮ ಗುಣಗಾನ ಮಾಡುತ್ತೇವೆ-ಆಗಬಹುದು. ಇದರಲ್ಲಿ ಅಡಿಷನಲ್ ಪೋಲೀಸ್ ನೇಮಕ ಮಾಡಿಕೊಳ್ಳುವುದಕ್ಕೆ ಕೆಲವು ಕ್ಲಾಸ್‌ಗಳನ್ನು ಸೇರಿಸಲಾಗಿದೆ. ಅಡಿಷನಲ್ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಡೆಪ್ಯೂಟಿ ಸೂಪರಿನ್‌ಟೆಂಡೆಂಟ್ ಆಫ್ ಪೋಲೀಸ್, ಡಿಸ್ಟ್ರಿಕ್ ಸೂಪರಿನ್‌ಟೆಂಡೆಂಟ್ ಆಫ್ ಪೋಲೀಸ್ ನೇಮಕ ಮಾಡಿಕೊಳ್ಳುವುದಕ್ಕೆ ಕೆಲವು ಕ್ಲಾಜುಗಳನ್ನು ಸೇರಿಸಲಾಗಿದೆ. ನನ್ನ ಅಭಿಪ್ರಾಯವೇನೆಂದರೆ ನಮಗೆ ಈಗಾಗಲೇ ತಲೆಭಾರವಾಗುವಷ್ಟು ಪೋಲೀಸ್ ಅಧಿಕಾರಿಗಳು ಇದ್ದಾರೆ. ಅಂಥಾ ಒಂದು ಚಿತ್ರ ನಮ್ಮ ಕಣ್ಣ ಮುಂದೆ ಇರುವಾಗ ಕೆಲವು ಅಧಿಕಾರಿಗಳಿಗೆ ಬಡ್ತಿ ಕೊಡುವುದಕ್ಕೆ ಇಂಥ ಒಂದು ಕಾನೂನನ್ನು ತರುವುದರಿಂದ ಏನೂ ಉಪಯೋಗವಾಗುವುದಿಲ್ಲ. ಇದನ್ನು ಕೈ ಬಿಡಬೇಕೆಂದು ನನ್ನ ಅಭಿಪ್ರಾಯ. ಯಾವ ಒಬ್ಬ ಸೂಪರಿನ್‌ಟೆಂಡೆಂಟ್ ಆಗಲಿ ಡಿಸ್ಟ್ರಿಕ್ಟ್ ಸೂಪರಿಂಟೆಂಡೆಂಟ್ ಆಗಲಿ ಯಾರನ್ನೂ ಕೂಡ ಹೆಚ್ಚು ಮಾಡುವುದು ಬೇಕಾಗಿಲ್ಲ ಎಂದು ನನ್ನ ಅಭಿಪ್ರಾಯ. ಇದೂ ಅಲ್ಲದೆ ಕ್ಲಾಜ್ 19-20ರ ಪ್ರಕಾರ ಸ್ಪೆಷಲ್ ಪೋಲೀಸ್ ಆಫೀಸರನ್ನು ನೇಮಕ ಮಾಡಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಡಲಾಗಿದೆ. ಇಂಥ ಒಂದು ಅಧಿಕಾರ ಬೇಡ. ಏಕೆಂದರೆ ನಮ್ಮ ಜನತೆಯಲ್ಲಿ ನಂಬಿಕೆ ಇಡೋಣ, ಅದರಲ್ಲೂ ಕರ್ನಾಟಕದಲ್ಲಿ ದೊಂಬಿ ಮಾಡತಕ್ಕ ರೌಡಿಗಳು ಅಷ್ಟು ಇಲ್ಲ. ಅಂಥ ಒಂದು ಪರಿಸ್ಥಿತಿ ಬಂದಾಗ ನಾವು ಬೇಕಾದರೆ ನೋಡಿಕೊಳ್ಳೋಣ. ಸದ್ಯಕ್ಕೆ ಬೇಡ ಎಂದು ನಾನು ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತೇನೆ. ?

78ನೇ ಸೆಕ್ಷನ್‌ನಲ್ಲಿ ಗೇಮಿಂಗ್ ಹೌಸ್ ಬಗ್ಗೆ ಹೇಳಿದ್ದಾರೆ. ಅದರ ಸಬ್ ಸೆಕ್ಷನ್ 3ರನ್ನು ಓದಿ ಬಹಳ ಆಶ್ಚರ್ಯವಾಯಿತು. ಅದರಲ್ಲಿ ಈ ರೀತಿ ಇದೆ:-

"(3) Whoever is found gaming on any of the objects specified in sub-section (1) in any public street or throughfare or in any place to which the public have or are permitted to have access shall, on conviction be punished with imprisonment...."

That is a public place.

**Sri R.M. PATIL.-** Plese read it further. There are certain places which are deemed as public.

ಶ್ರೀ **ಕೆ.ಎಚ್. ರಂಗನಾಥ್.-** Public access ಇಲ್ಲ ಎಂದ ಮೇಲೆ ಅಲ್ಲಿ ಗೇಮಿಂಗ್ ನಡೆಯುತ್ತಾ ಇದ್ದರೂ ಅವರನ್ನು ಹಿಡಿಯಲಿಕ್ಕೆ ಸಾಧ್ಯವಿಲ್ಲ. ಒಂದು ಪ್ರಶ್ನೆ ಕೇಳುತ್ತೇನೆ. ಇವತ್ತಿನ ದಿವಸ ಬೆಂಗಳೂರು ನಗರದಲ್ಲಿರತಕ್ಕ ಹೊಟೇಲುಗಳಲ್ಲಿ ಎಷ್ಟೋ ಕಡೆ ಗೇಮಿಂಗ್ ನಡೆಯುತ್ತಾ ಇಲ್ಲ? ಕೆಲವು ದಿವಸಗಳ ಕೆಳಗೆ ಹೈ ಕೋರ್ಟ್ ತೀರ್ಮಾನ ಕೂಡ ಒಂದು ಆಯಿತು, ಹೈದರಾಬಾದ್-ಕರ್ನಾಟಕ ಏರಿಯಾದಲ್ಲಿ ಒಂದು ಹೋಟೆಲಿನ ರೂಮಿನಲ್ಲಿ ಗೇಮಿಂಗ್ ನಡೆಯುತ್ತಿದ್ದಾಗ ಪೊಲೀಸಿನವರು ಅವರನ್ನು ಹಿಡಿದು ಕೇಸು ಹಾಕಿದರು ಎಂದು ತೀರ್ಮಾನವಾಗಿದೆ. ಹೀಗೆ ಅಸ್ಪಷ್ಟವಾಗಿರುವುದು ಬೇಡ.

**Sri R.M. PATIL.-** It ws decided on the provision of that Act, The provisions of this Actr are different.

**Sri K.H. RANGANATH.-** The hotel-keeper must allow the public to go in, there.

**Sri R.M. PATIL.-** Please read the full clause.

**Mr. SPEAKER.-** Please see clause 163 (4):

"All rules made by the Government under this Act, shall be laid as soon as may be after they are made, before each House of the State Legislature while it is in session, for a total period of thirty days, which may be comprised in one session or in two successive sessions and if, before the expiry of the session in which it is so laid or the session immediately following, both Houses agree in making any modification in the rule or both Houses agree that the rule should not be made, the rule shall thereafter have effect only in such modified form or be of no effect. as the case effect only in such modified form or be of no effect, as the case may be........."

So, the rule that is framed by Government will come before the House.

ಶ್ರೀ ಕೆ.ಎಚ್. ರಂಗನಾಥ್.- ಕ್ಲಾಜ್ 78ರ ಒಳಕ್ಲಾಜ್ (3)ರಲ್ಲಿ ಹೇಳಿರತಕ್ಕದ್ದು ಸರಿಯಿಲ್ಲ. ಸಾಧ್ಯವಾದಮಟ್ಟಿಗೂ ಇದನ್ನು ಸರಿಮಾಡಬೇಕೇಂದು ಸೂಚನೆ ಕೊಡುತ್ತೇನೆ. Clause 82 : Presumption ಇನ್ನು ಪ್ರಿಸೆಂಪ್ಷನ್ ಬಗ್ಗೆ ಕ್ಲಾಜ್ 82ರಲ್ಲಿ ರುಜುವಾತು

ಭಾರವನ್ನು ತಕ್ಷೀರುದಾರನ ಮೇಲೆ ಹಾಕಲಾಗಿದೆ. ಹಿಂದೆ ಪ್ರೊಹಿಬಿಷನ್ ಕಾನೂನು ಬಂದ ಕಾಲಕ್ಕೆ ಬಂದ ಈ ಪ್ರಿಸಂಷನ್ ಈಗ ಖಾಯಂ ಆಗಿ ಎಲ್ಲ ಮಸೂದೆಗೆ ಪ್ರವೇಶ ಮಾಡುತ್ತಿದೆ. ಇದು ಕ್ರಿಮಿನಲ್ ಜೂರಿಸ್‌ಪ್ರೆಡೆನ್ಸಿಗೆ ಬಹಳ ವಿರುದ್ಧವಾಗಿದೆ. ಆದುದರಿಂದ ನಾವೀಗ ಇದನ್ನು ಒಂದು ಪರಿಪಾಠವಾಗಿ ಅನುಸರಿಸುವುದು ಬೇಡ. ಕೋರ್ಟಿನಲ್ಲಿ ವಿಚಾರಣೆ ಪೂರ್ತಿಯಾಗಿ ಆತನು ಅಪರಾಧಿ ಎಂದು ತೀರ್ಮಾನವಾಗುವ ತನಕ ಈ 82ನೇ ಕಲಮನ್ನು ಪ್ರಯೋಗ ಮಾಡುವುದು ಬೇಡ ಎಂದು ಹೇಳುತ್ತೇನೆ.

"Presumptive proof of keeping of gaming in common gaming house : (1) When any instrument of gaming has been seized in any building, room, tent, enclosure, vehicle, vessel or place entered or searched under Section 81 or on a person found therein, and in the case of any other thing so seized, if the court is satisfied that the police officer who entered such building, room, tent or place. enclosure, vehicle, vessel had reasonable grounds for suspecting that the thing so seized was an instrument of gaming, the seizure of such instrument or thing shall be evidence, until the contrary is proved........"

ಸಮಾಜದಲ್ಲಿ ಇಸ್ಪೀಟ್ ಆಟಕ್ಕಿಂತ ಕೆಟ್ಟ ಆಟಗಳು ಇನ್ನೂ ಎಷ್ಟೋ ಇರುತ್ತದೆ. ಹಾಗಿರುವಾಗ ಅವರನ್ನೆಲ್ಲ ಕೈಬಿಟ್ಟು ಇಸ್ಪೀಟ್ ಆಟದವರ ಮೇಲೆ ಕಣ್ಣಿಟ್ಟಿರಾಯಿತೆ? ಬರಿ ಒಂದು ಕೇಸನ್ನು ಹಾಕುವುದಕ್ಕೆ ಮಾತ್ರ ಕಾನೂನು ಮಾಡಬೇಕೆಂಬ ಅಭಿಪ್ರಾಯವಿದ್ದರೆ ಮಾಡಿಕೊಳ್ಳಿ. Unless a person is proved to be guilty, he must not be considered guilty.

ಇನ್ನು ಕೆಲವು ಪೋಲೀಸ್ ಅಧಿಕಾರಿಗಳಿಗೆ ಶಿಕ್ಷೆ ಕೊಡತಕ್ಕ ವಿಚಾರದಲ್ಲಿ ಅಪರೇಟ್ ಅಥಾರಿಟಿ ಬಗ್ಗೆ ಒಂದು ವಿಚಾರ ಹೇಳಿದ್ದಾರೆ.

**Sri K.S. SURYANARAYANA RAO.-** A man is found in a place where they ordinarily resort to gambling and is it the presumption of the member that he is innocent;

**Sri K.H. RANGANATH.-** That is not my idea, ಪೋಲೀಸ್ ಇಲಾಖೆಯಲ್ಲಿ ಇರುವ ಅಧಿಕಾರಿಗಳನ್ನು ವಿಚಾರಣೆ ಮಾಡದೆ ಹಾಗೆ ಶಿಕ್ಷೆ ವಿಧಿಸತಕ್ಕ ಕೆಲವು ಸಂದರ್ಭಗಳಿವೆ. ಆದರೆ ಹಾಗೆ ಒಂದು ತೀರ್ಮಾನಕ್ಕೆ ಬರುವ ಮುನ್ನ ಐ.ಜಿ.ಪಿ. ಅವರು ಆ ಅಧಿಕಾರಿಗಳಿಗೆ ಅಪೀಲ್ ಮಾಡಿಕೊಳ್ಳುವ ಒಂದು ಅವಕಾಶ ಕಲ್ಪಿಸಿಕೊಡಬೇಕೆಂದು ನಾನು ಹೇಳುತ್ತೇನೆ.

ಇದು ನನ್ನ ಅಭಿಪ್ರಾಯ. ಈಗ ಕೇವಲ ಒಂದು ಕಾನ್‌ಫಿಡೆನ್‌ಷಿಯಲ್ ರಿಪೋರ್ಟಿನ ಮೇಲೆ ಶಿಕ್ಷೆ ವಿಧಿಸುತ್ತಿದ್ದಾರೆ. ಹಿಂದಿನಿಂದಲೂ ಇದು ಹಾಗೆಯೇ ನಡೆದುಕೊಂಡು ಬರುತ್ತಿವೆ. ಇಲ್ಲಿಯತನಕ ಮೈಸೂರು ರಾಜ್ಯದಲ್ಲಿ ಪೋಲೀಸ್ ಖಾತೆಯಲ್ಲಿ ಎರಡು ಗುಂಪುಗಳಿದ್ದವು ಎಂಬುದು ಎಲ್ಲರಿಗೂ ಗೊತ್ತಿರುವ ವಿಚಾರ. ಬೇಡವಾದ ಗುಂಪಿನವರ ಅಧಿಕಾರಿಗಳ ಮೇಲೆ ದೊಡ್ಡ ಸ್ಥಾನದಲ್ಲಿರತಕ್ಕ ಅಧಿಕಾರಿಗಳು ಅನವಶ್ಯಕವಾಗಿ ಏನಾದರೂ ಒಂದನ್ನು ಬರೆದು ಕಳುಹಿಸಿದರೆ ವಿಚಾರಣೆಯನ್ನೇ ಮಾಡದೆ ಅವರ ಮೇಲೆ ಕ್ರಮ ಕೈಗೊಳ್ಳುತ್ತಿದ್ದರು. ಹಾಗೆ ಮಾಡುವುದು ಸರಿಯಲ್ಲ ಎಂದು ಹೇಳುತ್ತೇನೆ.

ನಮ್ಮ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿ ಎಲ್ಲಾ ಜಿಲ್ಲೆಗಳಿಗೂ ಹೋಗಿ ಇನ್ಸ್‌ಪೆಕ್ಷನನ್ನು ಮಾಡಿಕೊಂಡು ಬರುತ್ತಿದ್ದರು. ಈಚೆಗೆ ಬರುವಂತಹ ಐ.ಜಿ.ಪಿ. ಅಧಿಕಾರಿಗಳು ಎಲ್ಲಿಯೂ ಇನ್ಸ್‌ಪೆಕ್ಷನ್ನಿಗಾಗಿ ಹೋದಂತೆ ಕಾಣುವುದಿಲ್ಲ. ಅದೂ ಅಲ್ಲದೆ ಅವರುಗಳು ಈಗ ಐ.ಪಿ.ಎಸ್. ಅಧಿಕಾರಿಗಳಾಗಿರುವುದರಿಂದ ಅವರ ಮೇಲೆ ರಾಜ್ಯಸರಕಾರದ ಅಧಿಕಾರವೂ ಕೂಡ ಇಲ್ಲ, ಮತ್ತು ಯಾವ ವಿಧವಾದ ಕಂಟ್ರೋಲು ಸಹಾ ಇಲ್ಲ. ಇಂತಹ ಅಧಿಕಾರಿಗಳು ಇನ್ನು ಮುಂದಾದರೂ ಎಲ್ಲ ಜಿಲ್ಲೆಗಳಿಗೂ ಆಗಿಂದಾಗ್ಗೆ ಹೋಗಿ ಇನ್ಸ್‌ಪೆಕ್ಷನ್ನು ಮಾಡಿಕೊಂಡು ಬಂದರೆ ದಕ್ಷತೆ ಹೆಚ್ಚಲು ಅನುಕೂಲವಾಗುತ್ತದೆ.

*****

## ಪೋಲೀಸ್ ಖಾತೆಯಿಂದ ಉಪಯೋಗವೇನು?

11 ಮಾರ್ಚ್ 1964

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ).- ಮಾನ್ಯ ಅಧ್ಯಕ್ಷರೇ, ನಾನು ಮಾತನಾಡುವುದಕ್ಕಿಂತ ಮೊದಲು ಎಲ್ಲಾ ಡಿಮ್ಯಾಂಡುಗಳ ಮೇಲೂ ಮಾತನಾಡುವುದಕ್ಕೆ ಇಷ್ಟಪಡುವುದಿಲ್ಲ ಅಂತ ಹೇಳುತ್ತೇನೆ. ಪೋಲೀಸು, ಜೈಲ್ ಮತ್ತು ಟ್ಯಾಕೇಶನ್ ಖಾತೆಗಳ ಬಗ್ಗೆ ಮಾತನಾಡಲು ಇಷ್ಟಪಡುತ್ತೇನೆ.

ನನ್ನ ಹಿಂದೆ ಮಾತನಾಡಿದ ನನ್ನ ಮಿತ್ರರಾದ ಶ್ರೀ ಪಾಟೀಲರವರು ಪೋಲೀಸು ಖಾತೆಯ ಬಗ್ಗೆ ಸಮಂಜಸವಾಗಿ ಹೇಳಿದ್ದಾರೆ. ನನಗೆ ಗೊತ್ತು, ಸರಕಾರ ಇಲ್ಲಿಂದ ಬಂದಂಥ

ಟೀಕೆಗಳನ್ನು ಅಷ್ಟು ಗಮನಕ್ಕೆ ತೆಗೆದುಕೊಳ್ಳುತ್ತಿಲ್ಲವೆಂದು. ಆದರೂ ಕೂಡ ಕರ್ತವ್ಯವಿದೆ. ಆ ಕರ್ತವ್ಯದ ಹೊಣೆಯನ್ನು ನಿರ್ವಹಿಸುವುದಕ್ಕೋಸ್ಕರ ನಾನು ಹೇಳುತ್ತಾ ಇದ್ದೇನೆ.

ಇವತ್ತಿನ ದಿವಸ ಪೋಲೀಸು ಖಾತೆಗೆ ನಾವು ಸಾಧಾರಣವಾಗಿ ಐದು ಕೋಟಿ ರೂಪಾಯಿಗನ್ನು ಇಟ್ಟಿದ್ದೇವೆ. ವಿದ್ಯಾಖಾತೆಗೆ ಖರ್ಚುಮಾಡುವ ನಾಲ್ಕನೇ ಒಂದು ಭಾಗದಷ್ಟನ್ನು ಪೋಲೀಸು ಖಾತೆಗೆ ಖರ್ಚು ಮಾಡುತ್ತಾ ಇದ್ದೇವೆ. ಇಷ್ಟು ದೇಶದ ಹಣ ಖರ್ಚು ಮಾಡುವಾಗ ಈ ಖಾತೆಯಿಂದ ದೇಶಕ್ಕಾಗಲಿ, ಜನಗಳಿಗಾಗಲಿ ಯಾವ ವಿಧವಾದ ಉಪಯೋಗವಾಗುತ್ತಿದೆ. ನನ್ನ ಅನುಭವದಲ್ಲಿ ಕಂಡಂತೆ ಪ್ರತಿನಿತ್ಯ ಪೋಲೀಸ್ ಹಾವಳಿ ದೇಶದಲ್ಲಿ ಕಾಣುತ್ತಿದೆಯೇ ವಿನಃ ಪೋಲೀಸರಿಂದ ಜನಗಳ ರಕ್ಷಣೆಯಾಗಲಿ, ಮಾನ ಸಂರಕ್ಷಣೆಯಾಗಲಿ ನಮ್ಮ ಮೈಸೂರು ಸಂಸ್ಥಾನದಲ್ಲಿ ಆಗುತ್ತಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ನನ್ನ ವಾದವನ್ನು ಸಮರ್ಥನೆ ಮಾಡುವುದಕ್ಕೋಸ್ಕರ ಕೆಲವಾರು ಉದಾಹರಣೆಗಳನ್ನು ಕೊಡುತ್ತೇನೆ.

ಬಿಜಾಪುರ ಜಿಲ್ಲೆ ನಿಡೋಣಿಯಲ್ಲಿ ಹರಿಜನರ ಮೇಲೆ ಅಮಾನುಷ ಕೃತ್ಯ ನಡೆದ ಕಾಲದಲ್ಲಿ ಪೋಲೀಸರು ಇದ್ದರು. ಸ್ಪೆಷಲ್ ಪೋಲೀಸು ಹಾಕಲಾಗಿತ್ತು. ಇಂಥ ಪರಿಸ್ಥಿತಿ ಇದ್ದಾಗ್ಯೂ ಕೂಡ, ಅದು ಮೇಲ್ಪಟ್ಟ ಪೋಲೀಸು ಅಧಿಕಾರಿಗಳಿಗೆ ಗೊತ್ತಿದ್ದರೂ ಕೂಡ ಏಕೆ ಆ ದುರ್ಘಟನೆಯನ್ನು ತಪ್ಪಿಸಲಿಲ್ಲ ಎಂದು ಸರಕಾರಕ್ಕೆ ನೇರವಾದ ಪ್ರಶ್ನೆ ಹಾಕಲು ಇಷ್ಟಪಡುತ್ತೇನೆ. ಏನು ಒಬ್ಬರೆ, 4-6 ಜನಗಳನ್ನು ಓಡಿಸಿಕೊಂಡು ಹೋಗಿ ಜೀವಸಹಿತ ಸುಟ್ಟಿದ್ದಾರೆ. ಕೊಂದಿದ್ದಾರೆ. ಈ ಅಮಾನುಷ ಕೃತ್ಯ ರೀಆರ್ಗನೈಸೇಷನ್ ಆದಮೇಲೆ ನಡೆದಿದೆ. ಇಂಥದೇ ಒಂದು ಪರಿಸ್ಥಿತಿ. ಮೊನ್ನೆಮೊನ್ನೆ ನಡೆದಿದೆ.

ರಾಯಚೂರು ಜಿಲ್ಲೆಯ ಇಡಪನೂರಿನಲ್ಲಿ 20 ಜನಗಳನ್ನು ಕೊಂದರು ಅಂತ ಹೇಳಿದರು. ಅಲ್ಲಿದ್ದಂಥ ಹಗೆತನ ಪೋಲೀಸಿನವರಿಗೆ ಗೊತ್ತಿರಲಿಲ್ಲವೆ? ಆ ಬಗ್ಗೆ ಸರಕಾರಕ್ಕೆ ಪೋಲೀಸಿಗೆ ಮನವಿ ಕೊಟ್ಟಿರಲಿಲ್ಲವೆ? ಇಂಥ ಬೇಜವಾಬ್ದಾರಿ ಪೋಲೀಸು ಅಧಿಕಾರಿಗಳು ಇರತಕ್ಕಂಥ ಸರಕಾರ, ಇದು ಒಂದು ಸುಸಂಸ್ಕೃತ ಸರಕಾರವೆ? ಈ ಸರಕಾರಕ್ಕೆ ಕೆಲಸಮಾಡತಕ್ಕಂಥ ಶಕ್ತಿ ಇಲ್ಲವೆಂದು ಬಹಳ ವ್ಯಥೆಯಿಂದ ಹೇಳುತ್ತಿದ್ದೇನೆ.

ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನಲ್ಲಿ ಒಬ್ಬ ಪಟೇಲ ನಾಲ್ಕು ಜನ ಹರಿಜನರನ್ನು ಕೊಂದಿದ್ದಾನೆ. ಮೊಗಲ್ ಕಾಲದ ದರ್ಬಾರಿನಲ್ಲಿ ಇಂಥದನ್ನು ಕಾಣಬಹುದು. ಇಂತ ಕೃತ್ಯಗಳನ್ನು ಪಟೇಲ ಮಾಡುವುದೆಂದರೆ ಬಹಳ ನಾಚಿಕೆಗೇಡಿನ ಪರಿಸ್ಥಿತಿ. ಈ ಇಲಾಖೆಗೆ ನಾಲ್ಕು ಕೋಟಿ ರೂಪಾಯಿ ಖರ್ಚು ಮಾಡುವುದನ್ನು ನೋಡಿದರೆ, ಹಣ ಒದಗಿಸಿರುವುದರಲ್ಲಿ ಮೂರು ಕೋಟಿ ಬರೀ ಎಸ್ಟಾಬ್ಲಿಷ್‌ಮೆಂಟಿಗೇ ಖರ್ಚಾಗುತ್ತದೆ. ಈ ಒಂದು ಕ್ರಿಮಿನಲ್ ಇನ್‌ವೆಸ್ಟಿಗೇಷನ್ ಡಿಪಾರ್ಟ್‌ಮೆಂಟಿಗೆ ಸಾಧಾರಣವಾಗಿ 17,70,200 ರೂಪಾಯಿ

ಇಟ್ಟಿದ್ದಾರೆ. ಈ ಇನ್‌ವೆಸ್ಟಿಗೇಷನ್ ಡಿಪಾರ್ಟ್‌ಮೆಂಟ್ ಏನು ಕೆಲಸ ಮಾಡುತ್ತಿದೆ? ಯಾವ ತರಹ ಇನ್‌ವೆಸ್ಟಿಗೇಷನ್ ಮಾಡುತ್ತಿದ್ದಾರೆಂದು ಕೇಳಬಯಸುತ್ತೇನೆ. ಕೋರ್ಟಿನಲ್ಲಿ ಯಾವುದಾದರೂ ಸ್ಟ್ರಿಕ್ಚರುಗಳನ್ನು ಪಾಸುಮಾಡಿದರೆ, ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಏನು ಕ್ರಮ ತೆಗೆದುಕೊಂಡಿದ್ದೀರ ಎಂದು ಹೇಳುತ್ತೀರ? ಧಾರವಾಡ ಜಿಲ್ಲೆಯಲ್ಲಿ ಒಬ್ಬ ಸಿವಿಲ್ ಸರ್ಜನ್ ಮೇಲೆ ಆಂಟಿಕರಪ್ಷನ್ ಇಲಾಖೆಯವರು ಹಾಕಿದ ಕೇಸಿನಲ್ಲಿ, ಹೈಕೋರ್ಟಿನವರು ಅವರ ಇನ್‌ವೆಸ್ಟಿಗೇಷನ್ ಆಫೀಸರ ಮೇಲೆ ಸ್ಟ್ರಿಕ್ಚರ್ ಪಾಸುಮಾಡಿದರು; ಆ ಆಫೀಸರು ಮೇಲೆ ಏನು ಕ್ರಮವನ್ನು ತೆಗೆದುಕೊಂಡಿದ್ದೀರ? ಇದು ಆಗಿ ಸಾಧಾರಣ 2-3 ವರ್ಷವಾಗಿದೆ. ಇಂಥ ವಿಚಾರಗಳನ್ನು ಗಣನೆಗೆ ತೆಗೆದುಕೊಂಡು ನಾವು ಮಾತನಾಡುತ್ತಾ ಇದ್ದೇವೆ. ನೀವು ನಿಮ್ಮ ಇಂಥ ಒಂದು ಕೃತ್ಯದಿಂದ ಜನಗಳನ್ನು ನಂಬಿಕೆಗೆ ತೆಗೆದುಕೊಳ್ಳುತ್ತಿಲ್ಲ. ಪೋಲೀಸರನ್ನು ನಿಮ್ಮ ಸ್ವೇಚ್ಛೆ ಪ್ರಕಾರ ಕಾಂಗ್ರೆಸ್ಸಿನವರನ್ನು ಮತ್ತು ಕಾಂಗ್ರೆಸ್ ರಾಜ್ಯವನ್ನು ಕಾಪಾಡುವುದಕ್ಕೆ ಒಂದು ಮೆಷಿನೆರಿಯಾಗಿ ಉಪಯೋಗಿಸುತ್ತಿದ್ದೀರಿ ಎಂದು ನಾನು ಬಹಳ ವಿಷಾದದಿಂದ ಹೇಳಬೇಕಾಗಿದೆ. ಮೊನ್ನೆ ಒಂದು ವಿಷಯದ ಬಗ್ಗೆ ನಾನು ಶ್ರೀ ರೇವಣ್ಣಸಿದ್ದಪ್ಪನವರು ಮತ್ತು ಶ್ರೀ ರಂಗಪ್ಪನವರು ಮಾನ್ಯ ಗೃಹಮಂತ್ರಿಗಳ ಚೇಂಬರಿಗೆ ಹೋಗಿ ಒಂದು ಅರ್ಜಿ ಕೊಡಲಿಕ್ಕೆ ಪ್ರಯತ್ನಪಟ್ಟೆವು. ಮಾನ್ಯ ಮಂತ್ರಿಗಳು ಅರ್ಜಿಯನ್ನು ನಿರಾಕರಿಸಿದರು. ಇಷ್ಟು ಲಘುವಾಗಿ ತಾವು ನಮ್ಮ ಮನವಿಗಳ ಬಗ್ಗೆ ಕಾಣುವುದಾದರೆ ಈ ಸರಕಾರ ಇದೆಯೆ ಎಂದು ಪ್ರಶ್ನೆ ಮಾಡುತ್ತಾ ಇದ್ದೇವೆ.

ಹಿಂದೆ ಶ್ರೀ ಚನ್ನಬಸಪ್ಪನವರು ಹೋಂ ಖಾತೆ ಮಂತ್ರಿಯಾಗಿದ್ದಾಗ ಒಬ್ಬ ಪೋಲೀಸು ಸೂಪರಿಂಟ್‌ಂಡೆಂಟ್ ಮೇಲೆ ಇನ್‌ವೆಸ್ಟಿಗೇಟ್ ಮಾಡಿಸಿ, ಐ.ಪಿ.ಸಿ. ಯಲ್ಲಿ ಯಾವ ಯಾವ ಸೆಕ್ಷನುಗಳಿವೆಯೋ ಆ ಅಪರಾಧಗಳನ್ನು ಮಾಡಿದ್ದಾರೆಂದು ಬರೆದು, ಅವರನ್ನು ಸಸ್ಪೆಂಡ್ ಮಾಡಿದರು.

ಇದರ ಬಗ್ಗೆ ಇನ್‌ಕ್ವಾಯರಿ ನಡೆಯಲಿಲ್ಲ ಎಂದು ಕಾಣುತ್ತದೆ. ಪುನಃ ಆ ಪೋಲೀಸ್ ಅಧಿಕಾರಿಯನ್ನು ರೀ-ಇನ್‌ಸ್ಟೇಟ್ ಮಾಡಿದರು ಎಂದು ತಿಳಿದುಬಂದಿದೆ. ಜನರಿಗೆ ರಕ್ಷಣೆ ಕೊಡುವುದಕ್ಕಾಗಿ ಪೋಲೀಸ್ ಖಾತೆ ಇದೆಯೇ ಇಲ್ಲವೇ ಎಂದು ಕೇಳುತ್ತೇನೆ. ಕ್ರಿಮಿನಲ್ ಇನ್‌ವೆಸ್ಟಿಗೇಷನ್ ಡಿಪಾರ್ಟ್‌ಮೆಂಟಿನಲ್ಲಿ ಏನೂ ಮಾಡುವುದಿಲ್ಲ. ಈ ಇಲಾಖೆಯಲ್ಲಿರುವ ನನ್ನ ಮಿತ್ರರು ಅನೇಕರು ಇದನ್ನು ಹೇಳಿದ್ದಾರೆ. ಎಲ್ಲಿಯಾದರೂ ಒಂದು ರಾಜಕೀಯ ಪಕ್ಷದ ಮೀಟಿಂಗ್ ನಡೆದರೆ ಅಲ್ಲಿಗೆ ಬರೆದುಕೊಳ್ಳುವುದಕ್ಕೆ ಬರುತ್ತಾರೆ. ಇಂಥ ಕೆಲಸ ಅಷ್ಟೇ ಮಾಡುತ್ತಾರೆ. ಎಲ್ಲಿಯಾದರೂ ಒಂದು ಹೀನ ಕೃತ್ಯ ನಡೆಯುವ ಸಮಾಚಾರ ಬಂದರೆ ಮುಂಜಾಗರೂಕತೆಯ ಕ್ರಮ ಕೈಕೊಳ್ಳುವ ಕೆಲಸ ಮಾಡುತ್ತಾ ಇಲ್ಲ. ಹಳ್ಳಿಗಳಲ್ಲಿ ಫ್ಯಾಕ್ಷನ್ ಅಂದರೆ ಪಕ್ಷ ಪಕ್ಷಗಳಲ್ಲಿ ಮೈಮನಸ್ಸು ಒಡಕು ಇದ್ದರೆ ಅದನ್ನು ಬಗೆಹರಿಸಲು ಯಾರು ತೀರ್ಮಾನ ಮಾಡತಕ್ಕದ್ದು? ಮಂತ್ರಿಗಳು ಈ ಕೆಲಸ ಮಾಡುತ್ತಾರೆಯೇ? ನಿಮಗೆ

ಯಾರಿಂದಲಾದರೂ ಒಂದು ರಿಪ್ರೋರ್ಟು ಬರಬೇಕೇ? ಫ್ಯಾಕ್ಷನ್ ಬಗ್ಗೆ ಯಾರು ಹೇಳಿದರೆ ನಿಮಗೆ ವೇದವಾಕ್ಯ ಆಗುತ್ತದೆ? ಇದನ್ನು ಟೀಕೆ ಮಾಡುವ ಉದ್ದೇಶದಿಂದ ಹೇಳುತ್ತಾ ಇಲ್ಲ. ಬಹಳ ಕಳಕಳಿಯಿಂದ ಹೇಳುತ್ತಿದ್ದೇನೆ. ಇಂದು ಹಳ್ಳಿಗಳಲ್ಲಿ ಪರಿಸ್ಥಿತಿ ಏನಾಗಿದೆ ಎಂದರೆ ಮಾನ ಮರ್ಯಾದೆಯಿಂದ ಬಾಳುವೆ ಮಾಡಲು ಸಾಧ್ಯವಿಲ್ಲವಾಗಿದೆ. ಪೋಲೀಸರಿಗೆ ಕೊಡುವ ಎಲ್ಲಾ ಸಮತ್ತು ಸೌಕರ್ಯ ಕೊಡಲು ನಮ್ಮೆಲ್ಲರ ಸಹಾನುಭೂತಿ ಇದೆ. ಆದರೆ ಅವರು ಸರಿಯಾಗಿ ಕೆಲಸಕಾರ್ಯಗಳನ್ನು ನಡೆಸಬೇಕು ಎಂಬುದು ಅಗತ್ಯವಾಗಿದೆ. ಕೇಸುಗಳನ್ನು ನಡೆಸಲು ನಾನು ಕೋರ್ಟುಗಳಿಗೆ ಹೋದಾಗ್ಗೆ ನೋಡಿದ್ದೇನೆ. ಅನೇಕ ಪೋಲೀಸ್ ಅಧಿಕಾರಿಗಳು 1954-55 ರಿಂದ ಮಂಗಳೂರಿನಲ್ಲಿಯೇ ಇದ್ದಾರೆ. ಅವರು ಟ್ರಾನ್ಸ್‌ಫರ್ ಆಗಿ ಹೋಗಿಲ್ಲ. ಅವರು ಮೇಲಾಧಿಕಾರಿಗಳೊಂದಿಗೆ ನಿಕಟ ಸಂಬಂಧ ಇಟ್ಟುಕೊಂಡಿದ್ದಾರೆ. ಅವರು ಹೇಗೆ ಕೆಲಸ ಮಾಡುತ್ತಾರೆ ಎಂಬುದನ್ನು ಪರೀಕ್ಷಿಸಬೇಕಾಗಿದ್ದರೆ ತಾವು ವೇಷ ಬದಲಿಸಿ ಮೆಜೆಸ್ಟಿಕ್ ಸರ್ಕಲ್‌ಗೆ ಬಂದು ನೋಡಬೇಕು. ಎಲ್ಲವೂ ಸರಿಯಾಗಿದೆ ಎಂದು ಆಫೀಸಿನಲ್ಲಿ ಕುಳಿತು ಬರೆದರೆ ಆಗುವುದಿಲ್ಲ. ಮುಖ್ಯವಾಗಿ ಪೋಲೀಸಿನವರು ಕಾನೂನು ತಿಳಿಯದೇ ಇರತಕ್ಕಂಥ ಅವಿದ್ಯಾವಂತರನ್ನು ಸಂರಕ್ಷಣೆ ಮಾಡಬೇಕಾದುದು ಅಗತ್ಯ.

ಪೋಲೀಸ್ ಕಾನ್‌ಸ್ಟೇಬಲ್ ನೇಮಕ ಮಾಡುವಾಗ್ಗೆ ಎಸ್.ಎಸ್.ಎಲ್. ಸಿ. ಪಾಸಾಗಿದ್ದವರನ್ನು ನೇಮಿಸಿಕೊಳ್ಳಬೇಕು. ಎಂದು ಮನವಿ ಮಾಡಿಕೊಳ್ಳುತ್ತೇನೆ. ಅವರಿಗೆ ಹೆಚ್ಚು ಸಂಬಳ ಕೊಟ್ಟರೆ ಹೆಚ್ಚು ಜನ ಕೆಲಸಕ್ಕೆ ಬರುತ್ತಾರೆ. ಇದಲ್ಲದೆ ಪೋಲೀಸ್ ಅಧಿಕಾರಿಯ ನೇಮಕ ಮಾಡುವಾಗ್ಗೆ ಅವರ ಅಂಟಿಸಿಡೆಂಟ್ಸ್ ವಿಚಾರ ಮಾಡಿ ನ್ಯಾಯವಾಗಿ ರೀತಿ ನೀತಿ ಇರುವವರನ್ನು ಸೇರಿಸಿಕೊಳ್ಳಬೇಕು. ಇನ್ನೊಂದು ವಿಚಾರ ಹೇಳುವುದಾದರೆ ಈ ಪ್ರೊಹಿಬಿಷನ್ ನೀತಿಯಿಂದ ಪೋಲೀಸನವರಿಗೆ ಬಹಳ ಅನುಕೂಲವಾಗಿದೆ. ಇದು ದೇಶಕ್ಕೆ ಮಾತ್ರ ಅನುಕೂಲವಾಗಿಲ್ಲ ಮಲೆನಾಡು ಪ್ರದೇಶದಲ್ಲಿ ಹೆಂಡ ಸಾರಾಯಿ ತಯಾರ್‍ಮಾಡಿ ಮಾರಾಟ ಮಾಡುವುದು ಪೋಲೀಸಿನವರ ಸಹಾಯದಿಂದ ಮಾಮೂಲಾಗಿ ನಡೆಯುತ್ತಿದೆ. ಭಟ್ಟಿ ಸರಾಯಿ ಮಾಮೂಲಾಗಿ ಪೋಲೀಸನವರಿಗೆ, ಡಿ.ಎಸ್.ಪಿ.ಯವರಿಗೆ ಹೆಚ್ಚಾಗಿ ಕೊಡಬೇಕಾಗುತ್ತದೆ ಎಂದು ಹೇಳುತ್ತೇನೆ. ನಾನು ಹೇಳುವುದರಲ್ಲಿ ಕಿಂಚಿತ್ ಅತಿಶಯೋಕ್ತಿ ಇರಬಹುದು. ಆದರೆ ನಿಜವಾಗಿಯೂ ಇದು ನಡೆಯುತ್ತಿರುರ ವಿಚಾರ. ಇದನ್ನು ಸಂಪೂರ್ಣವಾಗಿ ವಿಚಾರ ಮಾಡಿ ಪ್ರೊಹಿಬಿಷನ್ ತೆಗೆದು ಹಾಕಿ ಬಿಡಬೇಕು. ಇಲ್ಲವೆ ನಡೆಸುವುದಾದರೆ ಅದನ್ನು ಸರಿಯಾಗಿ ನಡೆಸಬೇಕು ಎಂದು ಕೇಳಿಕೊಳ್ಳುತ್ತೇನೆ.

ಕ್ರಿಮಿನಲ್ ಇನ್‌ವೆಸ್ಟಿಗೇಶನ್ ಡಿಪಾರ್ಟ್‌ಮೆಂಟಿಗೆ ಒದಗಿಸಿರತಕ್ಕ ಹಣ ಕಡಿಮೆಯಾಗಿದೆ. ಇನ್ನೂ ಹೆಚ್ಚು ಹಣ ಒದಗಿಸುವುದು ಅಗತ್ಯ. ಅವರಿಗೆ ಸ್ಪೆಷಲ್ ಟ್ರೈನಿಂಗ್ ಕೊಟ್ಟು ಅಂಥವರನ್ನು ನೇಮಕ ಮಾಡಿಕೊಳ್ಳಬೇಕು. ಯಾಕೆಂದರೆ ಈ ಖಾತೆಯಲ್ಲಿ ಪರಿಣಿತರನ್ನು ನೇಮಕ ಮಾಡತಕ್ಕದ್ದು ಒಳ್ಳೆಯದು. ಪರದೇಶಗಳಲ್ಲಿ ಇರುವ ಹಾಗೆ ಇಲ್ಲಿಯೂ

ಉತ್ತಮ ರೀತಿಯಿಂದ ಇನ್‌ವೆಸ್ಟಿಗೇಷನ್ಸ್ ನಡೆಯಬೇಕು. ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಖೂನಿ ಕೇಸುಗಳು ಪ್ರೂವ್ ಆಗುವುದಿಲ್ಲ. ಅದಕ್ಕೆ ಕಾರಣವೇನೆಂದರೆ ಡಿಫೆಕ್ಟಿವ್ ಇನ್‌ವೆಸ್ಟಿಗೇಶನ್ ಆಗಿರುತ್ತದೆ. ಈ ವಿಚಾರದ ಬಗ್ಗೆ ಸರಕಾರ ಹೆಚ್ಚು ನಿಗಾ ವಹಿಸಿ ದೇಶದಲ್ಲಿ ಆದಷ್ಟು ಮಟ್ಟಿಗೆ ಖೂನಿ ಡಕಾಯಿತಿ ಕಡಿಮೆಯಾಗುವಂತೆ ಮಾಡಬೇಕೆಂದು ನಾನು ಸರಕಾರಕ್ಕೆ ಕಳಕಳಿಯಿಂದ ಕೇಳಿಕೊಳ್ಳುತ್ತೇನೆ.

ಇನ್ನು ಜೈಲ್ ವಿಚಾರ ಮಾತನಾಡುವುದಾದರೆ ಜೈಲ್ ಬಾಬಿಗೆ ಒಟ್ಟು 45,00,500 ರೂಪಾಯಿ ಒದಗಿಸಿರುವುದರಲ್ಲಿ 11,44,700 ರೂಪಾಯಿ ಜೇಲ್ ಮ್ಯಾನುಫ್ಯಾಕ್ಚರ್ಸ ಬಗ್ಗೆ ಅಲೋಕೇಷನ್ ಮಾಡುವುದಕ್ಕೆ ಇಟ್ಟಿದ್ದೀರಿ. ಇದರಲ್ಲಿಯೂ ಕೂಡ ವೇಜ್ ಅರ್ನಿಂಗ್ ಸ್ಕೀಂ ಬಗ್ಗೆ 52,700 ರೂ. ಒದಗಿಸಿದ್ದೀರಿ. ಇದರ ಬಗ್ಗೆ ಹೇಳುವುದಾದರೆ ಬರತಕ್ಕಂಥ ಉತ್ಪತ್ತಿ ಕಡಿಮೆ ಇದೆ. ಇನ್ನು ಜೈಲ್ ಡಿಪಾರ್ಟ್‌ಮೆಂಟ್ ಬಗ್ಗೆ ಹೇಳುವುದಾದರೆ 3-4 ಜನ ಟ್ರೈನಿಂಗ್ ಪಡೆದಂತ ಸೂಪರಿಂಟೆಂಡೆಂಟ್ಸ್ ಇದ್ದಾರೆ. ಬಾಕಿಯವರು ಅಷ್ಟು ಪರಿಣಿತರಲ್ಲ. ಇದನ್ನು ಒಂದು ವ್ಯವಸ್ಥಿತ ರೂಪದಲ್ಲಿ ಕೆಲಸ ಮಾಡಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನೊಂದು ಸೂಚನೆ ಮಾಡಲು ಬಯಸುತ್ತೇನೆ. ಡಿಸ್ಚಾರ್ಜ್ ಪ್ರಿಜನರ್ಸ್ ಪುನಃ ಕೈದಿಯಾಗಿ ಬರುವ ಹಾಗೆ ಮಾಡದೆ ಅಂಥವರು ಯಾವುದಾದರೂ ಒಂದು ಜೀವನ ಮಾರ್ಗ ಅನುಸರಿಸಿಕೊಂಡು ಜೀವನ ಮಾಡುವಂತೆ ಒಂದು ಸ್ಕೀಂ ಮಾಡಬೇಕು. ಹಿಂದಕ್ಕೆ ಇಂಥ ಒಂದು ಸ್ಕೀಂ ಮಾಡಿದರು ಒಂದು ಕೋ-ಅಪರೇಟಿವ್ ಫಾರ್ಮ್ ಮಾಡಿ ಅಲ್ಲಿ ಎಲ್ಲಿ ಡಿಸ್ಚಾರ್ಜ್ ಪ್ರಿಜನರ್ಸ್ ಒಟ್ಟುಗೂಡಿ ಸರಕಾರದ ಕಂಟ್ರೋಲ್‌ನಲ್ಲಿ ಇರುವ ಹಾಗೆ ಒಂದು ಜೀವನ ಮಾರ್ಗ ಕಲ್ಪಿಸಿ ಕೊಡಬೇಕು. ಈ ಸ್ಕೀಂ ಕಾರ್ಯರೂಪಕ್ಕೆ ತರಬೇಕು ಮತ್ತು ಡಿಸ್ಚಾರ್ಜ್ ಪ್ರಿಜನರ್ಸ್ ಬಗ್ಗೆ ಒಂದು ಸರಿಯಾದ ವ್ಯವಸ್ಥೆ ಮಾಡಬೇಕು. ಜೈಲಿನಿಂದ ಹೊರಗೆ ಬಂದಂಥವನನ್ನು ಪುನಃ ಪೋಲೀಸಿನವರು ಸಸ್ಪೆಕ್ಟ್ ಮಾಡಿ ಕೈದಿಯಾಗಿ ಮಾಡುತ್ತಾರೆ. ಇದು ಸರಿಯಲ್ಲ ಎಂದು ಹೇಳುತ್ತೇನೆ.

ಇನ್ನು ಜುವೆನೈಲ್ ಆಫೆಂಡರ್ಸ್ ಬಗ್ಗೆ ಒಂದು ಮಾತು ಹೇಳಲು ಬಯಸುತ್ತೇನೆ. ಜುವೆನೈಲ್ ಆಪೆಂಡರ್ಸಿಗಾಗಿ ಒಂದು ಬೋರ್ಸಟರ್ ಸ್ಕೂಲು ಬೆಂಗಳೂರಿನಲ್ಲಿಯೂ ಧಾರವಾಡದಲ್ಲಿಯೂ ಇವೆ. ಈ ಸ್ಕೂಲುಗಳನ್ನು ಇನ್ನೂ ಹೆಚ್ಚು ವಿಸ್ತರಿಸಬೇಕು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಚಿಕ್ಕ ವಯಸ್ಸಿನ ಹುಡುಗರು ಕಳ್ಳತನ ಅಪರಾಧ ಮಾಡಿದವರಿಗೆ ಒಳ್ಳೇ ದಾರಿಗೆ ಬರುವ ಹಾಗೆ ವಿದ್ಯೆ ಕಲಿಸತಕ್ಕದ್ದು, ಅದಕ್ಕಾಗಿ ವ್ಯವಸ್ಥೆ ಮಾಡತಕ್ಕದ್ದು ಅಗತ್ಯ. ಇದಲ್ಲದೆ ಆ ರೀತಿ ಮತ್ತೆ ಅಪರಾಧ ಮಾಡದಂತೆ ವಿದ್ಯೆ ಹೇಳಿಕೊಡಬೇಕು. ಇದಕ್ಕಾಗಿ ಒದಗಿಸಿರುವ ಹಣ ಕಡಿಮೆ ಇದೆ. ಎಷ್ಟು ಹಣ ಹೆಚ್ಚು ಒದಗಿಸಿಯೂ ಸಹ ಅದು ಕಡಿಮೆ ಆದುದರಿಂದ ಈ ಬಾಬಿಗೆ ಹೆಚ್ಚು ಹಣ ಒದಗಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಸೆಂಟ್ರಲ್ ಜೈಲಿನಲ್ಲಿ ರತ್ನಕಂಬಳಿಗಳನ್ನು ತಯಾರುಮಾಡುತ್ತಿದ್ದಾರೆಂದು ಕೇಳಿದ್ದೇನೆ. ಆದರೆ 45 ಲಕ್ಷರೂಪಾಯಿಗಳನ್ನು ಒದಗಿಸಿದ್ದರೆ 11 ಲಕ್ಷ ರೂಪಾಯಿಗಳ ಉತ್ಪತ್ತಿ ಮಾತ್ರ ಬಂದು ಸುಮಾರು 33 ಲಕ್ಷ ಖರ್ಚಾಗಿದೆ. ಈ ಸಂಬಂಧದಲ್ಲಿ ಖರ್ಚಿಗನುಸಾರವಾಗಿ ಉತ್ಪತ್ತಿ ಮಾಡುವಂತೆ ವ್ಯವಸ್ಥೆ ಮಾಡಬೇಕೆಂದು ಸಲಹೆ ಕೊಡಲು ಬಯಸುತ್ತೇನೆ. ಲೈಬ್ರರಿ ವಗೈರೆ ಅನುಕೂಲ ಅಷ್ಟು ಹೆಚ್ಚಾಗಿಲ್ಲ. ಆಸ್ಪತ್ರೆಗಾಗಿ 80 ಸಾವಿರ ರೂಪಾಯಿಗಳನ್ನು ಕೊಟ್ಟಿದ್ದಾರೆ. ಇದು ಸಾಲದು. ಆರೋಗ್ಯದ ಬಾಬಿಗೆ ಹೆಚ್ಚು ಕೊಡಬೇಕು. ಲೈಬ್ರರಿಗೆ ಮತ್ತು ಆರೋಗ್ಯ ಕಾಪಾಡುವುದಕ್ಕೆ ಅನುಕೂಲ ಹೆಚ್ಚಿಸಬೇಕು.

ಇನ್ನು ತೆರಿಗೆ ಬಗ್ಗೆ ನಾಲ್ಕಾರು ಮಾತು, ಮೋಟಾರು ವಾಹನಗಳ ತೆರಿಗೆಯಿಂದ ಹೋದ ವರ್ಷ 6 ಕೋಟಿ ರೂಪಾಯಿಗಳ ವರಮಾನ ಬಂದಿತ್ತು. ಈ ವರ್ಷ ಅದು 5 ಕೋಟಿ ಚಿಲ್ಲರೆ ಎಂದು ನಮೂದಿಸಲಾಗಿದೆ. ಇದರಿಂದ ಸಾಧಾರಣವಾಗಿ 80 ಲಕ್ಷದಷ್ಟು ಕಡಿಮೆಯಾಗಿದೆ.

ಶ್ರೀ ಆರ್.ಎಂ. ಪಾಟೀಲ್.- ಜಾಸ್ತಿಯಾಗಿದೆ, ತಾವು ಸರಿಯಾಗಿ ನೋಡಿದಂತೆ ಕಾಣಲಿಲ್ಲ.

ಶ್ರೀ ಕೆ.ಎಚ್. ರಂಗನಾಥ್.- ಈ ಖಾತೆಯಲ್ಲಿ ಲಂಚದ ಹಾವಳಿ ಜಾಸ್ತಿಯಾಗಿದೆಯೆಂದು ಹೇಳಿದರೆ ತಪ್ಪಲ್ಲ. ಬೆಂಗಳೂರು ಆರ್.ಟಿ.ಓ. ಆಫೀಸಿನಲ್ಲಿ ನಡೆಯುವ ವಿದ್ಯಮಾನಗಳು ನಮಗೆ ಗೊತ್ತಾಗುತ್ತಿವೆ. ಸರ್ಕಾರ ಹೆಚ್ಚು ನಿಗಾವಹಿಸಬೇಕು. ಯಾವ ಬ್ರೇಕ್ ಇನ್‌ಸ್ಪೆಕ್ಟರೇ ಆಗಲೀ 10 ರೂಪಾಯಿಗಳನ್ನು ಕೊಟ್ಟರೇ ಚೆಕ್ ಮಾಡುವುದು, ಇಲ್ಲದಿದ್ದರೆ ಮಾಡುವುದಿಲ್ಲ, ಇಂಥ ಪರಿಸ್ಥಿತಿಯಿದೆ. ಅಲ್ಲದೆ ಬ್ರೇಕ್ ಸರಿಯಾಗಿಲ್ಲದಿರುವ ಬಂಡಿಗಳಿಗೆ ಸರ್ಟಿಫಿಕೇಟ್ ಕೊಡುತ್ತಾರೆ. ಇದನ್ನೆಲ್ಲಾ ಗಮನವಿಟ್ಟು ನೋಡಬೇಕೆಂದು ಕೇಳಿಕೊಳ್ಳುತ್ತೇನೆ. ಈ ತೆರಿಗೆ ಇನ್ನೂ ಹೆಚ್ಚಾಗುವ ಪರಿಸ್ಥಿತಿಯಿದೆ. ಬೆಂಗಳೂರು ಸಿಟಿಯಲ್ಲಿ ಖಾಸಗಿ ಮಾಲೀಕರು ತಮ್ಮ ಕಾರುಗಳನ್ನು ಟ್ಯಾಕ್ಸಿ ರೂಪದಲ್ಲಿ ಓಡಿಸುವುದರರಿಂದ ಸರ್ಕಾರಕ್ಕೆ ಬರಬೇಕಾದ ಉತ್ಪತ್ತಿ ಕಡಿಮೆಯಾಗುತ್ತಿದೆ. ಇದರ ಕಡೆಗೆ ಇನ್‌ಸ್ಪೆಕ್ಟರುಗಳಿಗೆ ಗಮನ ಕೊಟ್ಟರೆ ಹೆಚ್ಚು ಉತ್ಪತ್ತಿ ಬರಬಹುದೆಂಬ ಭಾವನೆಯಿದೆ. ಮಾನ್ಯಮಂತ್ರಿಗಳು ಸದಸ್ಯರ ಸಲಹೆಯನ್ನು ಬಹಳ ಲಘುವಾಗಿ ನೋಡುವುದು ಅಷ್ಟು ಸರಿಯಲ್ಲ, ತೀವ್ರತೆಯಿಂದ ಈ ಎರಡು ಖಾತೆಗಳ ಉನ್ನತಿಗೆ ಗಮನ ಕೊಡಬೇಕು ಎಂದು ಮನವಿ ಮಾಡಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

*****

# ಸಾಲ ವಿಮುಕ್ತಿ ಕಾನೂನು: ಗಾತ್ರ ಚಿಕ್ಕದು ಗುರಿ ದೊಡ್ಡದು

30 ಜುಲೈ, 1973

ಶ್ರೀ ಕೆ.ಎಚ್. ರಂಗನಾಥ್:- ಸನ್ಮಾನ್ಯ ಅಧ್ಯಕ್ಷರೇ, ಈ ಒಂದು ಕಾನೂನು ಗಾತ್ರದಲ್ಲಿ ಚಿಕ್ಕದಾದರೂ ಕೂಡ ಗುರಿಯಲ್ಲಿ ಬಹಳ ಮಹತ್ವಪೂರ್ಣವಾದ ಪ್ರಗತಿದಾಯಕವಾದ ಕಾನೂನು ಎಂದು ಹೇಳಿದರೆ ತಪ್ಪಾಗಲಾರದು. ಸಣ್ಣ ಹಿಡುವಳಿದಾರರೂ, ರೈತ ಕೂಲಿಗಾರರು ಮತ್ತು ದುರ್ಬಲ ವರ್ಗಕ್ಕೆ ಸೇರಿರತಕ್ಕ ಜನ ಏನು ಇದ್ದಾರೆ. ಅವರುಗಳನ್ನು ಸಾಲದ ಬಾಧೆಯಿಂದ ಎರಡು ವರ್ಷಗಳು ವಿಮುಕ್ತರನ್ನಾಗಿ ಮಾಡುವುದಕ್ಕಾಗಿ ಈ ಕಾನೂನನ್ನು ತರಲಾಗಿದೆ. ಸನ್ಮಾನ್ಯ ಅಧ್ಯಕ್ಷರೇ, ಈ ಕಾನೂನಿನಲ್ಲಿ ಕೆಲವು ಸಾಲಗಳನ್ನು ಹೊರತುಪಡಿಸಲಾಗಿದೆ. ಮತ್ತೆ ಈ ಕಾನೂನಿನಲ್ಲಿ ಸಣ್ಣ ಹಿಡುವಳಿದಾರರು ಯಾರು ಎನ್ನುವುದಕ್ಕೆ ಒಂದು ಉತ್ತಮವಾದಂಥ ಅರ್ಥ ವಿವರಣೆಯನ್ನು ಕೊಡಲಾಗಿದೆ. ಅದು ಏನು ಅಂದರೆ ದುರ್ಬಲವರ್ಗಕ್ಕೆ ಸೇರಿದವರು ಯಾರು ಇದ್ದಾರೆ, ಯಾರು ಸಣ್ಣ ಹಿಡುವಳಿದಾರರು ಅಲ್ಲವೋ, ರೈತ ಕೂಲಿಗಾರರು ಅಲ್ಲವೋ, ಯಾರ ಆದಾಯ 2,400 ರೂಪಾಯಿಗಳಿಗಿಂತ ಒಳಗೆ ಇರುತ್ತದೆಯೋ, ಅದು ಕಾನೂನಿನ ವ್ಯಾಪ್ತಿಯ ಒಳಗಡೆ ಬರುತ್ತದೆ.

ಕಾನೂನಿನಲ್ಲಿ ಕಲಮು 4, 6, 7, 8 ಬಹಳ ಪ್ರಾಮುಖ್ಯವಾಗಿರತಕ್ಕಂಥ ಕಾನೂನುಗಳು ಇವತ್ತಿನ ದಿವಸ ಈ ಒಂದು ಸಾಲದಿಂದ ಎರಡು ವರ್ಷಗಳವರೆಗೆ ಆತನಿಗೆ ಬಡ್ಡಿ ಹಾಕದೇ ಇರತಕ್ಕದ್ದು ಮತ್ತು ಅವನಿಂದಾಗಲೀ ಅವನ ಯಾವುದೇ ಚರ ಮತ್ತು ಸ್ಥಿರ ಆಸ್ತಿಗಳಿಂದ ವಸೂಲು ಮಾಡದೇ ಇರತಕ್ಕ ಒಂದು ಪರಿಹಾರವನ್ನು ಅವನಿಗೆ ಕೊಡಲಾಗಿದೆ. ಅಷ್ಟೇ ಅಲ್ಲ, ಯಾವ ಕೋರ್ಟಿನಲ್ಲಿಯೂ ದಾವೆ ಮಾಡದೇ ಇರತಕ್ಕ ಪ್ರತಿಬಂಧಕವನ್ನೂ ಕೂಡ ಈ ಕಾನೂನಿನಲ್ಲಿ ಮಾಡಲಾಗಿದೆ. ಇನ್ನು ಕಾಲಂ 7ರಲ್ಲಿ ಸಾಲವನ್ನು ಸಾಬೀತು ಮಾಡತಕ್ಕ ಹೊಣೆಗಾರಿಕೆಯನ್ನು ಸಾಲ ಕೊಟ್ಟವನ ಮೇಲೆ ಹೊರಿಸಲಾಗಿದೆ. ಮತ್ತೆ ಕಾಲಮು 8, ಇದರಿಂದ ಯಾವುದೇ ಒಬ್ಬ ವ್ಯಕ್ತಿ ತನ್ನ ಯಾವುದೇ ರೀತಿಯ ಸಾಲವನ್ನು ತನ್ನ ದುಡಿಮೆಯಿಂದ ತೀರಿಸುತ್ತೇನೆಂದು ಯಾವುದಾದರೂ ಸಾಂಪ್ರದಾಯಿಕವಾಗಿ ಒಂದು ಅಗ್ರಿಮೆಂಟ್ ಮೂಲಕವಾಗಲೀ ಬಂಧನಕ್ಕೆ ಒಳಗಾಗಿದ್ದರೆ ಅಂಥ ಬಂಧನ ಈ ಕಾನೂನಿಂದ "ಸಿಂಧು" ಅಲ್ಲ ಎಂದು ಹೇಳಿ 8ನೇ ಕಲಮು ಮೂಲಕ ಘೋಷಣೆ ಮಾಡಲಾಗಿದೆ. ಇದರಿಂದ ಇವತ್ತಿನ ದಿವಸ ಲಕ್ಷಾಂತರ ಜನ ಸಣ್ಣ ಹಿಡುವಳಿದಾರರಿಗೆ, ರೈತ ಕೂಲಿಕಾರರಿಗೆ ಮತ್ತೆ ದುರ್ಬಲ ವರ್ಗಕ್ಕೆ ಸೇರತಕ್ಕ ಜನಕ್ಕೆ ತಾತ್ಕಾಲಿಕ ಪರಿಹಾರವನ್ನು ಕೊಟ್ಟು, ಅವರು ಮಾಡಿದ ಸಾಲಕ್ಕೆ ಬಡ್ಡಿ ಹಾಕದೇ ಇರತಕ್ಕ ರೀತಿಯಲ್ಲಿ, ಎರಡು ವರ್ಷಗಳವರೆಗೆ ರಿಲೀಫ್ ಇರತಕ್ಕ ರೀತಿಯಲ್ಲಿ ತಾತ್ಕಾಲಿಕ ಪರಿಹಾರ ಕೊಡಲಾಗಿದೆ.

ಇದೇ ಸಮಯದಲ್ಲಿ ಸಾಲಕೊಟ್ಟವನಿಗೂ ಕೂಡ ಅನುಕೂಲ ಮಾಡಿಕೊಡಲಾಗಿದೆ. ಕಾಲಂ 5ರ ಪ್ರಕಾರ ಅವನಿಗೂ ಕೂಡ ಒಂದು ಅನುಕೂಲವನ್ನು ಈ ಕಾನೂನಿನಲ್ಲಿ ಮಾಡಲಾಗಿದೆ. ಯಾವ ಒಂದು ಸಣ್ಣ ವರ್ಗದ ಜನ ಇದ್ದಾರೆ, ಅವರ ಅನುಕೂಲಕ್ಕಾಗಿ ತಂದಿರತಕ್ಕ ಈ ಕಾನೂನಿಗೆ ಸಭೆ ಒಪ್ಪಿಗೆ ಕೊಡಬೇಕೆಂದು ಹೇಳಿ ಕಾನೂನನ್ನು ಸಭೆಯ ಮುಂದೆ ಮಂಡಿಸುತ್ತೇನೆ.

(ಶ್ರೀ ಕೆ.ಆರ್. ಶ್ರೀನಿವಾಸಲು ನಾಯ್ಡು ಅವರ ಚರ್ಚೆಯ ನಂತರ):

ಅಧ್ಯಕ್ಷರೆ, ಮಾನ್ಯ ಸ್ನೇಹಿತರುಗಳು ಈ ಬಿಲ್ಲನ್ನು ಸ್ವಾಗತಮಾಡಿದ್ದಾರೆ. ಅವರಿಗೆ ನನ್ನ ಅಭಿನಂದನೆಗಳನ್ನು ಸಮರ್ಪಣೆ ಮಾಡುತ್ತೇನೆ. ಈ ಬಿಲ್ ಮೇಲೆ ಮಾನ್ಯ ಸದಸ್ಯರುಗಳು ಮಾತನಾಡುತ್ತಾ ಕೆಲವಾರು ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. ಈ ಬಿಲ್ಲಿನಿಂದ ರೈತ ತನ್ನ ಸಾಲದ ಬಾಧೆಯಿಂದ ವಿಮುಕ್ತನಾಗುವುದಿಲ್ಲ. ಸಾಲವನ್ನು ವಾಪಸ್ ಕೊಡತಕ್ಕದ್ದನ್ನು ಎರಡು ವರ್ಷದವರೆಗೆ ತಡೆಹಿಡಿಯಲಾಗಿದೆ. ಅಲ್ಲಿಯವರೆಗೆ ಇಂಟರೆಸ್ಟ್ ಅನ್ನು ಅದಕ್ಕೆ ಸೇರಿಸಲಿಕ್ಕೆ ಸಾಧ್ಯವಿಲ್ಲ. ಇಷ್ಟು ಇದರಲ್ಲಿದೆಯೇ ವಿನಹ ಅವನು ಸಾಲದಿಂದ ಬಿಡುಗಡೆಯಾಗಲಿಕ್ಕೆ ಸಾಧ್ಯವಿಲ್ಲ. ಅವನ ಸಾಲವನ್ನು ವಜಾ ಮಾಡತಕ್ಕದ್ದರ ಬಗ್ಗೆ ಈ ಸಮಯದಲ್ಲಿ ನಾನು ಏನನ್ನೂ ಹೇಳುವುದಕ್ಕೆ ಇಷ್ಟಪಡುವುದಿಲ್ಲ.

ಮಾನ್ಯ ಪ್ರಭಾಕರ್ ಅವರು ಮಾತನಾಡುತ್ತಾ ಪೀನಲ್ ಇಂಟರೆಸ್ಟ್ ಬಗ್ಗೆ ಸಹಕಾರ ಸಂಘಗಳವರೇ ಹಾಕುತ್ತಾರೆ ಎನ್ನುವ ಮಾತನ್ನು ಹೇಳಿದ್ದಾರೆ. ಇವತ್ತಿನ ದಿವಸ ಸರ್ಕಾರದಿಂದ ಹಣ ಕೊಟ್ಟ ಮೇಲೆ ಅದನ್ನು ವಸೂಲು ಮಾಡಬೇಕಾಗುತ್ತದೆ. ಕೊಟ್ಟ ಹಣವನ್ನು ವಸೂಲು ಮಾಡದೆ ಇರತಕ್ಕ ಪರಿಸ್ಥಿತಿ ಇನ್ನೂ ಬಂದಿಲ್ಲ, ಅಷ್ಟು ಶ್ರೀಮಂತ ಸರ್ಕಾರ ಇವತ್ತಿನ ದಿವಸ ನಮ್ಮಲ್ಲಿಲ್ಲ. ಆದರೆ ಖಾಸಗಿ ಸಾಲಗಾರರು ಕೊಡತಕ್ಕ ಸಾಲಕ್ಕೂ ಸರ್ಕಾರದವರು ಕೊಡತಕ್ಕ ಸಾಲಕ್ಕೂ ವ್ಯತ್ಯಾಸವಿದೆ. ಅವನು ಹಣವನ್ನು ಇನ್‌ವೆಸ್ಟ್ ಮಾಡಿದ ಮೇಲೆ ಅದರ ಮೇಲೆ ಬಡ್ಡಿಯನ್ನು ಸಂಪಾದನೆ ಮಾಡತಕ್ಕ ದೃಷ್ಟಿಯಿಂದ ಸಾಲ ಕೊಡುತ್ತಾನೆ. ಸರ್ಕಾರ ಕೊಡತಕ್ಕ ಸಾಲ ರೈತರಾಗಲಿ, ವ್ಯವಸಾಯದ ಕೂಲಿಗಾರರಾಗಲೀ ತಮ್ಮ ಕಾಲ ಮೇಲೆ ತಾವು ನಿಂತುಕೊಳ್ಳಲಿ ಎನ್ನುವ ಹಿನ್ನಲೆಯಲ್ಲಿ ಅವನಿಗೆ ಅನುಕೂಲವಾಗತಕ್ಕ ರೀತಿಯಲ್ಲಿ ಕೊಡುತ್ತಿದ್ದೇವೆ. ಮಾನ್ಯ ಸದಸ್ಯರು ಪೀನಲ್ ಇಂಟರೆಸ್ಟ್ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ, ನಾನು ಅದರ ಬಗ್ಗೆ ಉತ್ತರ ಕೊಡಲಿಕ್ಕೆ ಹೋಗುವುದಿಲ್ಲ.

ಮಾನ್ಯ ವಿ.ಎನ್. ಪಾಟೀಲರು ಇಂಡಸ್ಟ್ರಿಯಲ್ ವರ್ಕರ್ಸ್‌ಗೆ ಡೆಫಿನೀಷನ್ ಆಫ್ ವೀಕರ್‌ಸೆಕ್ಷನ್ 2400 ರೂಪಾಯಿಗಿಂತ ಹೆಚ್ಚು ಇದರಲ್ಲಿ ಇರಬೇಕು ಎನ್ನುವ ಮಾತನ್ನು ಹೇಳಿದ್ದಾರೆ. ಅಗ್ರಿಕಲ್ಚರಲ್ ಸ್ಮಾಲ್ ಫಾರ್ಮರ್ ಯಾರಿದ್ದಾರೆ ಅವರ ಬಗ್ಗೆ ಎರಡು ಹೆಕ್ಟೇರ್‌ಗೆ ಒಂದು ಯುನಿಟ್ ಎಂದು ಡೆಫಿನಿಷನ್ ಕೊಟ್ಟಿದೆ. ಅದಕ್ಕೋಸ್ಕರ ಸಾಮಾನ್ಯರಿಗೆ ಅನ್ವಯವಾಗುವ ರೀತಿಯಲ್ಲಿ 2400 ರೂಪಾಯಿಗಳು ಎಂದು ನಿಗದಿ ಮಾಡಿದ್ದೇವೆ. ಇದನ್ನು ನಾಲ್ಕೈದು ಸಾವಿರ ರೂಪಾಯಿಗಳಿಗೆ ಹೆಚ್ಚು ಮಾಡುವ ಪ್ರಶ್ನೆ ಸದ್ಯಕ್ಕೆ ಬರುವುದಿಲ್ಲ. ಕಾರ್ಮಿಕ

ವರ್ಗದವರು ಇರಲಿ, ಸಣ್ಣ ಹಿಡುವಳಿದಾರರು ಇರಲಿ, ರೈತ ಕೂಲಿಗಾರರು ಇರಲೀ, ಇಷ್ಟು ವರಮಾನ ಬರತಕ್ಕವರು ಈ ಬಿಲ್ಲಿನ ವ್ಯಾಪ್ತಿಯೊಳಗೆ ಬರುತ್ತಾರೆ; ಎಂದು ನಾನು ತಿಳಿದುಕೊಂಡಿದ್ದೇನೆ.

ಮಾನ್ಯ ಚಂದ್ರಶೇಖರ್ ಅವರು ಕೆಲವು ವಿಚಾರಗಳನ್ನು ಪ್ರಸ್ತಾಪ ಮಾಡಿದರು. ಮಾನ್ಯ ಸದಸ್ಯರು ಹೇಳತಕ್ಕದ್ದಕ್ಕೆ ದಾಖಲೆ ವಗೈರೆ ಏನೂ ಇರುವುದಿಲ್ಲ. ರೈತ ಮಾಡಿದಂಥ ಸಾಲವನ್ನು ಅವನ ಮಗ ಕೊಡಬೇಕು ಇಲ್ಲದಿದ್ದರೆ ನರಕಕ್ಕೆ ಹೋಗುತ್ತಾನೆ ಎನ್ನುವುದು ಏನು ಪದ್ಧತಿಯಲ್ಲಿದೆ ಅದನ್ನು ನಾವು ಕಾನೂನಿನಿಂದ ತೆಗೆಯಲಿಕ್ಕೆ ಸಾಧ್ಯವಾಗುವುದಿಲ್ಲ. ಅದನ್ನು ತೆಗೆಯಬೇಕಾಗಿದ್ದರೆ ಮಾನ್ಯ ವಿ.ಎನ್. ಪಾಟೀಲರು ಮತ್ತು ನಮ್ಮ ಪಕ್ಷದ ಕಾರ್ಯಕರ್ತರು ಎಲ್ಲರೂ ಹಳ್ಳಿಗಾಡಿನಲ್ಲಿರತಕ್ಕ ಜನರಿಗೆ ಸರಿಯಾದ ಬುದ್ಧಿ ಹೇಳಬೇಕು. ಈ ಬಗ್ಗೆ ನಾವು ಶಿಕ್ಷಣ ಕೊಡಬೇಕಾಗುತ್ತದೆ. ಈ ಅಂಧ ಶ್ರದ್ಧೆಯಿಂದ ಅವನನ್ನು ನಾವು ತೆಗೆಯಬೇಕಾಗುತ್ತದೆ. ಅಲ್ಲಿಯವರೆಗೆ ಇದಕ್ಕೆ ನಾವು ಏನನ್ನೂ ಕೂಡ ಮಾಡುವುದಕ್ಕೆ ಆಗುವುದಿಲ್ಲ. ಬರೀ ಕಾನೂನಿನಲ್ಲಿ ಇದನ್ನು ತೆಗೆಯುತ್ತೇವೆಂದು ಹೇಳಿದರೆ ಅದು ಆಗುವುದಿಲ್ಲ. ಇಂಥ ಕಾನೂನು ಬಂದಾಗ ಅದರ ಅನುಕೂಲವನ್ನು ಪಡೆಯುವುದಕ್ಕೆ ಬಡ ಜನರಿಗೆ ತಿಳಿಸಬೇಕು. ಇದರ ಬಗ್ಗೆ ತಿಳುವಳಿಕೆ ಕೊಡಬೇಕಾಗುತ್ತದೆ.

ಇವತ್ತಿನ ದಿವಸ ಲ್ಯಾಂಡ್ ರಿಫಾರಂಸ್ ಬಂದಿದ್ದರೂ ಕೂಡ ಗೇಣಿದಾರರು ಡಿಕ್ಲರೇಷನ್ ಕೊಡದೆ ಇರತಕ್ಕ ಪರಿಸ್ಥಿತಿ ಇದೆ. ಇದನ್ನು ನಾವು ನೋಡುತ್ತಿದ್ದೇವೆ. ಇದಕ್ಕೆ ಕಾನೂನಿನಲ್ಲಿ ಅವಕಾಶ ಮಾಡಲಿಕ್ಕೆ ಸಾಧ್ಯವಾಗುವುದಿಲ್ಲ. ಇರತಕ್ಕ ಕಾನೂನನ್ನು ನಾವು ಸರಿಯಾಗಿ ಉಪಯೋಗ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಮಾಡಬೇಕು ಎನ್ನುವ ಮಾತನ್ನು ಹೇಳುತ್ತಾ ಈ ಒಂದು ಕಾನೂನಿನ ಬಗ್ಗೆ ಹೆಚ್ಚಾಗಿ ಹೇಳುವುದು ಏನೂ ಇಲ್ಲ, ಇದನ್ನು ಒಪ್ಪಬೇಕು ಎಂದು ನಾನು ಮಾನ್ಯ ಸದಸ್ಯರುಗಳಲ್ಲಿ ಕೇಳಿಕೊಳ್ಳುತ್ತೇನೆ.

*****

## ಉದಾರೀಕರಣ : ಎದೆಗಾರಿಕೆಯಿದೆಯೆ ?

ಶ್ರೀ ಕೆ.ಎಚ್. ರಂಗನಾಥ್: I am sorry for the interruption ಈಗ ಉದಾರೀಕರಣದಲ್ಲಿ ಎಲ್ಲರೂ ಭಾಗಿಗಳಾಗಿಬಿಟ್ಟಿದ್ದೇವಲ್ಲ; ರಾಜ್ಯದಲ್ಲಿ ಎಲ್ಲಾ ರಾಜಕೀಯ ಪಕ್ಷಗಳೂ, ಧೈರ್ಯದಿಂದ ಇದು ಬೇಡ ಎಂದು ಹೇಳತಕ್ಕ ಗಂಡಸ್ತನ ನಿಮಗೆ ಇದೆಯೋ ಎಂದು ಕೇಳಿದೆ.' ಕ್ಷಮಿಸಿ, ನಿಮಗೆ ಆ ಎದೆಗಾರಿಕೆ ಇದೆಯಾ? ಇಲ್ಲಿ ನಾನು ಎದೆಗಾರಿಕೆ ಎಂತಲೇ ಬಳಸುತ್ತೇನೆ, ನಾನು ಸ್ವಲ್ಪ ಬೇಕಾಗಿಯೇ ಬಳಸಿದೆ, ದಯಮಾಡಿ ಕ್ಷಮಿಸಿ. ಏಕೆಂದರೆ ಅನಿವಾರ್ಯವಾದಂತಹ ಪರಿಸ್ಥಿತಿ ಬಂದಾಗ ಈ ತರಹ ಆಗುತ್ತದೆ. Coalition- it is permanent phenomenon ಎನ್ನುವ ರೀತಿಯಲ್ಲಿ ಇವತ್ತು ನಾವು ಪ್ರಸ್ತಾಪ ಮಾಡುತ್ತಿದ್ದೇವೆ. ಹಾಗಾದರೆ ನೀವು ಅನಿವಾರ್ಯವಾಗಿ ತಲೆ ಕೊಡತಕ್ಕ ಪರಿಸ್ಥಿತಿ ಬರುತ್ತದೆ; ಇದೊಂದು. ಪ್ರಪಂಚ ವೇಗವಾಗಿ ಬೆಳೆಯುತ್ತಿರುವಾಗ ನಾನು ಎಲ್ಲೋ ಒಂದು ಮೂಲೆಯಲ್ಲಿರುತ್ತೇನೆಂದು ಹೇಳುವುದು ಕೂಡ ಒಂದು ತೊಂದರೆಯಾಗತಕ್ಕಂಥ ಧೋರಣೆ. ಆಗ ಪ್ರಪಂಚದ ಜೊತೆಗೆ ಓಡಬೇಕಾದರೆ ಹಂತ ಹಂತವಾಗಿ ಯಾವ ರೀತಿ ತಯಾರು ಮಾಡಬೇಕು ಎನ್ನುವುದನ್ನು ಕೂಡ ನಾವು ವಿಚಾರ ಮಾಡಬೇಕಾಗುತ್ತದೆ. ಈ ವ್ಯವಸಾಯದ

ವಿಚಾರ ತೆಗೆದುಕೊಳ್ಳೋಣ ಕಬ್ಬಿನ ಪ್ರಶ್ನೆಯೇ ತೆಗೆದುಕೊಳ್ಳೋಣ, ನಿಮ್ಮ ಸಕ್ಕರೆ ಹೊರ ದೇಶದ ಮಾರುಕಟ್ಟೆಯಲ್ಲಿ ಬಳಸತಕ್ಕ ರೀತಿಯಲ್ಲಿ ನಾವು ಮಾಡುತ್ತಿದ್ದೇವೆಯೋ? ಎಷ್ಟು ಕಬ್ಬಿನ ಲೈಸೆನ್ಸನ್ನು ನಾವು ಸಕ್ಕರೆ ಕಂಪನಿಗಳಿಗೆ ಕೊಟ್ಟಿದ್ದೇನೆ. ನಮ್ಮ ಆ ಸಕ್ಕರೆ, ಇಲ್ಲಿ ತಯಾರು ಆದಂತಹ ಸಕ್ಕರೆ ಹೊರ ದೇಶದಲ್ಲಿ ಮಾರಾಟ ಮಾಡುವುದಕ್ಕೆ ಮಾರುಕಟ್ಟೆ ಇದೆಯೋ?

ಆ ರೀತಿ ನಾವು ವ್ಯವಸ್ಥೆ ಮಾಡಿಕೊಂಡಿದ್ದರೆ We would have also been competitions in the world market. ಗ್ಯಾಟ್ ನಮಗೆ ತೊಂದರೆ ಮಾಡಿದೆ. ಅದರಿಂದ ಇನ್ನೂ ತೊಂದರೆ ಆಗುತ್ತದೆ. ಇವತ್ತು ಅಷ್ಟೆ ಅಲ್ಲ ಇನ್ನೂ ತೊಂದರೆ ಆಗುತ್ತದೆ. ಅದನ್ನು ನಾವು ಗಮನದಲ್ಲಿಟ್ಟುಕೊಳ್ಳುವಾಗ ಹೇಗೆ ತಯಾರಾಗಬೇಕು ಎನ್ನುವುದನ್ನು ಕೂಡ ನಾವುಗಳು ವಿಚಾರ ಮಾಡಬೇಕಾಗುತ್ತದೆ. ನಾವೆಲ್ಲ ರಾಜಕೀಯ ಪಕ್ಷಗಳು ವಿಚಾರ ಮಾಡಬೇಕಾಗುತ್ತದೆ. ಇದು ಇಲ್ಲದೇ ಹೋದರೆ ಏನೂ ಪ್ರಯೋಜನ ಆಗುವುದಿಲ್ಲ. ತಾವು ಹೆಚ್ಚು ಒತ್ತನ್ನು ಆ ವಿಚಾರಕ್ಕೆ ಕೊಟ್ಟಿದ್ದರಿಂದ ನಾನು ಪ್ರಸ್ತಾಪ ಮಾಡಿದೆ. ಉದಾರೀಕರಣಕ್ಕೆ, ಆ ನೀತಿಗೆ, ಅದು ಎಲ್ಲಾ ರೀತಿಯಲ್ಲಿ ಬರುತ್ತಿರುವ ವಿಚಾರವನ್ನು ತಾವು ಪ್ರಸ್ತಾಪ ಮಾಡಿದಿರಿ. ಆಸ್ಟ್ರೇಲಿಯಾದಿಂದ ಜೂಸ್ ಬರುತ್ತಿದೆ ಎಂದು ಹೇಳಿದಿರಿ. ಅದನ್ನು ಬಳಸತಕ್ಕಂಥವರ ಸಂಖ್ಯೆಯನ್ನು ನಾವು ಬೇರೆ ಮಾಡಿದ್ದೇವಲ್ಲ. ನಾನೂ ನೀವು ಇವತ್ತಿನ ದಿವಸ ಬಳಸದೇ ಇರಬಹುದು. ಇವತ್ತು ಬಾಸುಮತಿ ಅಕ್ಕಿ ಬೆಲೆ ಎಷ್ಟಾಗಿದೆ? ಇವತ್ತು ಐದು ರೂಪಾಯಿ ಬೆಲೆ ಇದ್ದುದು 50 ರೂಪಾಯಿ 60 ರೂಪಾಯಿಗೆ ಹೋಗಿದೆ. ಅದನ್ನೇ ಬಳಸಿಕೊಂಡು ಮದುವೆ ಮಾಡತಕ್ಕಂಥ ಜನಸಂಖ್ಯೆ ಕೂಡ ಇವತ್ತು ಜಾಸ್ತಿ ಆಗಿದೆ. ಈ ದೃಷ್ಟಿಕೋನದಿಂದ ಇದನ್ನೂ ಕೂಡ ಆ ಒಂದು ವ್ಯವಸ್ಥೆಯಲ್ಲಿ ವಿಚಾರ ಮಾಡಿ ಮಾಡಬೇಕಾಗುತ್ತದೆ. ಈಗ ತಮ್ಮದ್ದೇ ಜಿಲ್ಲೆ ಇದೆ. ತಮ್ಮ ಜಿಲ್ಲೆಯ ರೈತರು ಅನುಕರಣೀಯವಾಗಿರತಕ್ಕಂಥವರು. ಎರಡು ಎಕರೆ, ಒಂದು ಎಕರೆ ಇರತಕ್ಕಂಥ ರೈತರು. ಒಂದಾನೊಂದು ಕಾಲದಲ್ಲಿ ಭೂಸುಧಾರಣೆ ತರುವಾಗ ಸಣ್ಣ ಹಿಡುವಳಿ ಇದ್ದರೆ ವ್ಯವಸಾಯ ಅಭಿವೃದ್ಧಿ ಆಗುವುದಿಲ್ಲ ಎಂದು ಹೇಳುತ್ತಿದ್ದರು. ಅದಕ್ಕೆ ಅಪವಾದ ಆ ಮಾತಿಗೆ, ಕೋಲಾರ ಜಿಲ್ಲೆಯಲ್ಲಿ ಅದನ್ನು ಮಾಡಿ ತೋರಿಸಿದ್ದಾರೆ, ಮಂಡ್ಯ ಜಿಲ್ಲೆಯಲ್ಲಿ ಅದನ್ನು ಮಾಡಿ ತೋರಿಸಿದ್ದಾರೆ. ಮಂಡ್ಯದಲ್ಲಿರತಕ್ಕ ರೈತರು ಮಾಡಿ ತೋರಿಸಿದ್ದಾರೆ. ಅಲ್ಲೇನು 60 ಎಕರೆ, 70 ಎಕರೆ, 80 ಎಕರೆ ಹಿಡುವಳಿ ಇಲ್ಲ. ಆದರೆ ಒಂದು ಎಕರೆ ಇರತಕ್ಕಂಥ ಒಬ್ಬ ರೈತ ಕನಿಷ್ಠ 20, 25, 30 ಸಾವಿರ ರೂಪಾಯಿ ನಮ್ಮಲ್ಲಿ ಮಾಡುತ್ತಾರೆ. ಇವತ್ತು ಅದನ್ನು ಇಟ್ಟುಕೊಂಡು ಹಾಲಿನ ಹೊಳೆ ಕೋಲಾರದಲ್ಲಿ ಹರಿಯುತ್ತದೆ. ಅಲ್ಲಿ ದೊಡ್ಡ ದೊಡ್ಡ ರೈತರೇನೂ ಇಲ್ಲ. ಆದರೆ ಅದನ್ನು ಹೇಗೆ ಬಳಕೆ ಮಾಡಿಕೊಳ್ಳಬೇಕು ಎನ್ನುವುದರ ಬಗ್ಗೆ ನಮ್ಮಲ್ಲಿ ನೀತಿ ಇಲ್ಲ. ಈ ಬಗ್ಗೆ ಸ್ವಲ್ಪ ಯೋಚನೆ ಮಾಡಬೇಕು. ನಾವು ಯಾವುದೋ ಒಂದು ಎಳೆ ಹಿಡಿದುಕೊಂಡು ಉದಾರೀಕರಣದ ಪ್ರಸ್ತಾಪ ಮಾಡತಕ್ಕದ್ದು ಅಲ್ಲ. ಇದರ ಬಗ್ಗೆ ಈ ಮನೆ ವಿಚಾರ ಮಾಡಬೇಕಾಗುತ್ತದೆ. ಎಲ್ಲಾ ಪಕ್ಷಗಳೂ ಇದನ್ನು ವಿಚಾರ ಮಾಡಬೇಕಾಗುತ್ತದೆ. ಒಂದು ಕಡೆ ಅದು ಸರಿ ಎಂದು ಹೇಳತಕ್ಕವರು ಇದ್ದಾರಲ್ಲ. ಈಗ ರೇಷ್ಮೆ ತಮಗೆ ಗೊತ್ತಿರುವ ಹಾಗೆ ಏಕೆ ಇಂಪೋರ್ಟ್ ಆಯಿತು? ನಾವು ಈಗ ಸಕ್ಕರೆ ಮಾರಾಟ ಮಾಡುವುದಕ್ಕೆ ಆಗುವುದಿಲ್ಲ, ಏಕೆ ಆಯಿತು? ಕ್ರೂಡ್ ಆಯಿಲ್ ವಿಚಾರ, ಅನಿವಾರ್ಯವಾಗಿ ಏರಿಸಿದ್ದೇವೆ ಎಂದು ಹೇಳಿದರು. ಏನು ಇತ್ತೋ ಅದೂ ಗೊತ್ತಾಗುವ ಹಾಗೆ ಇಲ್ಲ. ಇದೆಲ್ಲ ದೊಡ್ಡ ವಿಚಾರ ಇದೆ. ಎಂಟು ದಿವಸದಲ್ಲಿ ತಯಾರಾದ ರಾಜ್ಯಪಾಲರ ಭಾಷಣದಲ್ಲಿ ತಾವು ಪ್ರಸ್ತಾಪ ಮಾಡಿದರೆ ಕಷ್ಟವಾಗಬಹುದೇನೋ?

*****

## ಕಾಫಿ ಏಲಕ್ಕಿ ಬೆಳೆಗಾರರಿಗೆ ಪ್ರೋತ್ಸಾಹವಿಲ್ಲ!

20 ಸೆಪ್ಟೆಂಬರ್ 1963

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ).- ಸ್ವಾಮಿ, ಸಭೆಯ ಮುಂದೆ ಬಂದಿರತಕ್ಕ ಈ ಅಗ್ರಿಕಲ್ಚರಲ್ ಇನ್‌ಕಂ-ಟ್ಯಾಕ್ಸ್ ಬಿಲ್ಲನ್ನು ನಾನು ಸಂಪೂರ್ಣವಾಗಿ ವಿರೋಧಿಸುತ್ತಾ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಸಾಮಾನ್ಯವಾಗಿ ಇದು ಮೈದಾನದಲ್ಲಿರತಕ್ಕ ಹೆಚ್ಚು ಜನ ರೈತರನ್ನು ಭಾಧಿಸದೇ ಇದ್ದಾಗ್ಯೂ ಮಲೆನಾಡಿನಲ್ಲಿರತಕ್ಕ ರೈತರನ್ನು ಹೆಚ್ಚಾಗಿ ಬಾಧಿಸುತ್ತದೆ ಎಂದು ಹೇಳಲು ವಿಷಾದಪಡುತ್ತೇನೆ. ಏಕೆಂದರೆ ಈ ತಿದ್ದುಪಡಿ ಮಸೂದೆಯನ್ನು ಕೊಟ್ಟಿರತಕ್ಕ ಧ್ಯೇಯ ಮತ್ತು ಉದ್ದೇಶಗಳನ್ನು ನೋಡುವಾಗ ಯಾವ ಉದ್ದೇಶದಿಂದ ಇದನ್ನು ತರಲಾಗಿದೆ ಎಂಬುದನ್ನು ಮಾನ್ಯ ಮಂತ್ರಿಗಳು ಹೇಳಿರುತ್ತಾರೆ. ಕೋರ್ಟು ಏನೊಂದು ನಿರ್ಣಯ ಕೊಟ್ಟಿದೆಯೋ ಆ ನಿರ್ಣಯವನ್ನು ಅನುಸರಣೆ ಮಾಡುವುದಕ್ಕಾಗಿ ಈ ತಿದ್ದುಪಡಿಯನ್ನು ತಂದಿಲ್ಲ, ಆ ನಿರ್ಣಯಕ್ಕೆ ಅನುಕೂಲವಾಗುವಂತೆ ಕಾನೂನನ್ನು ತಿದ್ದುಪಡಿ ಮಾಡುವುದಕ್ಕೆ ಈ ಬಿಲ್ಲನ್ನು ಸಭೆಯ ಮುಂದಿಟ್ಟಿದ್ದಾರೆ. ಈ ಬಿಲ್‌ನಲ್ಲಿ ಕ್ಲಾಸ್ (3) ಅತೀ ಮುಖ್ಯವಾದುದ್ದು. ಪ್ಲಾಂಟೇಷನ್ ಕ್ರಾಪ್‌ಗಳ ಬಗ್ಗೆ ಹೇಳುವುದಾದರೆ ಮೈಸೂರು ಸಂಸ್ಥಾನದಲ್ಲಿ 1959-60ನೆಯ ಅಂಕಿಅಂಶಗಳ ಪ್ರಕಾರ 1,68,099 ಎಕರೆ ಪ್ರದೇಶದ ಜಮೀನಿನಲ್ಲಿ ಕಾಫಿ ಬೆಳೆ ಇದೆ. ಇದನ್ನು ನೋಡುವಾಗ ಇಡೀ ಹಿಂದುಸ್ತಾನದಲ್ಲಿ ಮೈಸೂರು ಸಂಸ್ಥಾನದಲ್ಲಿಯೇ ಕಾಫಿ ಉತ್ಪಾದನೆ ಹೆಚ್ಚು ಎಂಬುದು ಗೊತ್ತಾಗುತ್ತದೆ. ನಾನು ಅಂಕಿ ಅಂಶಗಳನ್ನು ಹೇಳುವುದಾದರೆ;

1960-61ನೇ ಸಾಲಿಗೆ ಭಾರತದ ಉತ್ಪನ್ನದ ಶೇಕಡ 76 ಭಾಗ ಮೈಸೂರು ಸಂಸ್ಥಾನದ ಉತ್ಪನ್ನವಾಗಿದೆ. 1961-62ಕ್ಕೆ ಶೇಕಡಾ 69ಕ್ಕೆ ಇಳಿದಿದೆ, 1962-63ಕ್ಕೆ ಶೇಕಡ 72 ಇದೆ ಎಂದು ಮೇಲೆ ಈ ಮೂರು ವರ್ಷಗಳ ಉತ್ಪನ್ನವನ್ನು ನೋಡುವಾಗ ದಿನೇ ದಿನೇ ಕಡಿಮೆಯಾಗುತ್ತಾ ಇದೆಯೇ ವಿನಾ ಹೆಚ್ಚಾಗುತ್ತಾ ಇಲ್ಲ. ಇನ್ನು ಸಂಸ್ಥಾನದಲ್ಲಿರತಕ್ಕ ಎಸ್ಟೇಟುಗಳ ವಿಷಯವನ್ನು ತೆಗೆದುಕೊಂಡರೆ 100 ಎಕರೆಗೂ ಹೆಚ್ಚು ಇರತಕ್ಕ ಎಸ್ಟೇಟ್ 340 ಇವೆ. 100 ಎಕರೆಗಿಂತ ಕಡಿಮೆ ಇರತಕ್ಕ ಎಸ್ಟೇಟ್‌ಗಳು 15,087 ಇವೆ. ಒಟ್ಟು 16,420 ಎಸ್ಟೇಟುಗಳು ಇವೆ. ಈ ಒಂದು ವ್ಯವಸಾಯದ ಉದ್ಯಮವನ್ನವಲಂಬಿಸಿರತಕ್ಕ, ಕೂಲಿಯನ್ನು ಹೊಂದತಕ್ಕ ಒಂದು ಲಕ್ಷ ಜನ ಮೈಸೂರು ಸಂಸ್ಥಾನದಲ್ಲಿದ್ದಾರೆ. ಇಂಥಾ ಉದ್ಯಮಕ್ಕೆ ಮೈಸೂರು ಸಂಸ್ಥಾನದಲ್ಲಿ ಯಾವ ವಿಧವಾದ ಪ್ರೋತ್ಸಾಹವಿದೆ ಎಂಬ ಹಿನ್ನೆಲೆಯಲ್ಲಿ ಈ ಅಗ್ರಿಕಲ್ಚರಲ್ ಇನ್‌ಕಂ-ಟ್ಯಾಕ್ಸ್ ತಿದ್ದುಪಡಿ ಮಸೂದೆಯನ್ನು ನೋಡುವುದಾದರೆ, ಇದಕ್ಕೆ ಯಾವ ವಿಧವಾದ ಪ್ರೋತ್ಸಾಹ ಸಿಕ್ಕುತ್ತದೆ ಎಂಬುದನ್ನು ಅಂಕಿಅಂಶಗಳ ಆಧಾರದ ಮೇಲೆ ಹೇಳಬಯಸುತ್ತೇನೆ.

1960-61 ರಲ್ಲಿ ಮೈಸೂರು ಸಂಸ್ಥಾನದಲ್ಲಿ 51,561 ಟನ್ ಕಾಫಿ ಬೆಳೆ ಆಗಿದೆ.
1961-62 ರಲ್ಲಿ ಮೈಸೂರು ಸಂಸ್ಥಾನದಲ್ಲಿ 31,900 ಟನ್ ಕಾಫಿ ಬೆಳೆ ಆಗಿದೆ.
1962-63 ರಲ್ಲಿ ಮೈಸೂರು ಸಂಸ್ಥಾನದಲ್ಲಿ 41,253 ಟನ್ ಕಾಫಿ ಬೆಳೆ ಆಗಿದೆ.

ಈ ಮೂರು ವರ್ಷಗಳ ಅಂಕಿಅಂಶಗಳನ್ನು ತೆಗೆದುಕೊಳ್ಳುವುದಾದರೆ ದಿನದಿನಕ್ಕೆ ಬೆಳೆ ಕಡಿಮೆಯಾಗುತ್ತಾ ಇದೆ; ಮತ್ತು ಪರದೇಶಕ್ಕೆ ಕಾಫಿ ಕಳುಹಿಸುವುದರಿಂದ ನಮಗೆ ಎಷ್ಟು ಸಂಪಾದನೆಯಾಗಿದೆ ಎಂದರೆ;

1960-61 ರಲ್ಲಿ ಸುಮಾರು 7 ಕೋಟಿ 15 ಲಕ್ಷ ರೂಪಾಯಿ ಸಂಪಾದನೆ ಆಗಿದೆ.
1961-62 ರಲ್ಲಿ ಸುಮಾರು 8 ಕೋಟಿ 99 ಲಕ್ಷ ರೂಪಾಯಿ ಸಂಪಾದನೆ ಆಗಿದೆ.
1962-63 ರಲ್ಲಿ ಸುಮಾರು 7 ಕೋಟಿ 58 ಲಕ್ಷ ರೂಪಾಯಿ ಸಂಪಾದನೆ ಆಗಿದೆ.

ಇಷ್ಟು ಹಣ ನಮಗೆ ಫಾರಿನ್ ಎಕ್ಸ್‌ಚೇಂಜ್ ಸಂಪಾದನೆ ಮಾಡತಕ್ಕ ಈ ಒಂದು ಉದ್ಯಮದ ಬಗ್ಗೆ ಸರ್ಕಾರದವರು ಉಪೇಕ್ಷೆ ಮಾಡುತ್ತಾ ಇದ್ದಾರೆ ಎಂಬುದು ಬಹಳ ವಿಷಾದದ ಸಂಗತಿ. ಭಾರತ ಸರ್ಕಾರದವರು 3ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇದಕ್ಕೆ ಹೆಚ್ಚಿನ ಮಹತ್ವದ ಸ್ಥಾನವನ್ನು ಕೊಡಬೇಕೆಂದು ಒತ್ತಿ ಹೇಳಿದ್ದಾರೆ.

ಇಂಥ ಒಂದು ಘನ ಉದ್ದೇಶವನ್ನು ಭಾರತ ಸರ್ಕಾರದವರಿಟ್ಟುಕೊಂಡಿದ್ದಾಗ್ಯೂ, ಇಲ್ಲಿ ನಮ್ಮ ಸರ್ಕಾರದವರು ನಮ್ಮ ಸಂಸ್ಥಾನದಲ್ಲಿ ಶೇಕಡ 70ರಷ್ಟು ಉತ್ಪತ್ತಿಕೊಡತಕ್ಕ-ಕಾಫಿ ರಬ್ಬರ್ ಮತ್ತು ಟೀ ಬೆಳೆಗಳಿಗೆ ಯಾವ ಉತ್ತೇಜನವನ್ನೂ ಕೊಡದಿರುವುದು ಶೋಚನೀಯ. ಮೈಸೂರು ರಾಜ್ಯದ ಯೋಜನೆಯಲ್ಲಿ ಈ ಬೆಳೆಗಳನ್ನಿಡತಕ್ಕ ರೈತನ ಬಗ್ಗೆ ಒಂದು ಚಕಾರಕೂಡ ಹೇಳಿಲ್ಲ. ಇನ್ನು ಏಲಕ್ಕಿಯ ಬಗ್ಗೆ ಒಂದು ಸಂಶೋಧನಾ ಕೇಂದ್ರವನ್ನು ತೆರೆಯಲಾಗಿರುತ್ತದೆಂದು ಹೇಳಲಾಗಿದೆ. ಆದರೆ ಕಾಫಿ, ರಬ್ಬರ್, ಟೀ ಬೆಳೆಗಳ ವಿಚಾರದಲ್ಲಿ ಇಷ್ಟು ತಾತ್ಸಾರ ಮನೋಭಾವನೆಯಿಂದಿರುವುದು ಸರಿಯಿಲ್ಲ. ಈಗ ಇವರು ತಂದಿರತಕ್ಕ ತಿದ್ದುಪಡಿಯು ಹೆಚ್ಚಿನ ವ್ಯವಸಾಯೋತ್ಪನ್ನ ಕೊಡತಕ್ಕ ಬೆಳೆಗಳನ್ನು ಈ ರಾಜ್ಯದಲ್ಲಿ ಕಡಿಮೆ ಮಾಡುವುದಕ್ಕೆ ಬಹಳ ಅನುಕೂಲವಾಗಿದೆ. ಇಲ್ಲಿ ಕ್ಲಾಪ್ (3)ರ ಪ್ರೊವೈಚೋನಲ್ಲಿ ಹೀಗೆ ಹೇಳಿದ್ದಾರೆ.

"In the case of a firm, any payment of interest, salary, bonus, commission or remuneration made by the firm to any partner of the firm;"

"(ii) in the case of a company, any expenditure which results directly or indirectly in the provision of any remuneration or benefit or amenity to a director or to a person who has sub-stantial interest in the

company or to a relative of the director. be expenditure laid out or expended for the purpose of deriving the agricultural income."

ಈ ರೀತಿ ತಾವು ಒಂದು ವ್ಯವಸ್ಥೆ ಮಾಡುವುದಾದರೆ ಈ ಪ್ಲಾಂಟೇಷನ್ನುಗಳು ನಾಲ್ಕಾರು ಜನ ಪಾಲುದಾರರ ಕೈಗೆ ಸಿಕ್ಕಿ ಅವರು ಈ ಉದ್ಯಮದ ಖರ್ಚುವೆಚ್ಚಗಳಿಗೆ ಡಿಡಕ್ಷನ್ ಕೊಡದೆ ಹೋದರೆ ಏನು ಮಾಡುವುದು? ಈಗ ಈ ಡಿವಿಡೆಂಟ್ ರೂಪದಲ್ಲಿ ಲಾಭ ಬಂದರೆ ಅದನ್ನು ನಾನು ಅಗ್ರಿಕಲ್‌ಚರಲ್ ಇನ್‌ಕಂ ಎಂದು ಭಾವಿಸಲು ವಿರೋಧವಿಲ್ಲ. ಇನ್ನೂ ಮುಂದೆ ಈ ಬಿಲ್ಲಿನಲ್ಲಿ ಹೆಚ್ಚು ಕರಾಳವಾದ ವಿಚಾರಗಳನ್ನು ಹೇಳಿದ್ದಾರೆ. ಈ ಬೆಳೆಯ ಆಯುಸ್ಸೆಲ್ಲ ಕೇವಲ 40 ವರ್ಷ ಮಾತ್ರ. ಈ ವಿಚಾರವನ್ನು ರಿಸೋರ್ಸ್ ಅಂಡ್ ಎಕನಾಮಿ ಕಮಿಟಿಯವರು ಹೇಳಿದ್ದಾರೆ. ಆ ರೈತ ಈ ಗಿಡಗಳು ಬಿದ್ದು ಹೋಗುವುದರೊಳಗಾಗಿ ಮತ್ತೆ ಹೊಸ ಗಿಡಗಳನ್ನು ಬೆಳೆಯುವುದು ಬೇಡವೆ, ಆ ಖರ್ಚನ್ನಾದರೂ ಅವನಿಗೆ ಬಿಡುವುದು ಬೇಡವೆ? ಈ ದಿವಸ ಟೆಕ್ಸ್‌ಟೈಲ್ ಇತ್ಯಾದಿ ಕೈಗಾರಿಕೆಗಳಿಗೆ ಸರ್ಕಾರ ಯಾವ ರೀತಿ ಪ್ರೋತ್ಸಾಹವನ್ನು ತೋರಿಸುತ್ತಿದೆಯೋ ಅದೇ ರೀತಿ ಇವರಿಗೂ ಏಕೆ ತೋರಿಸಬಾರದು? ಬೆಳೆ ಹಾಳಾಗುವ ಪರಿಸ್ಥಿತಿಗೆ ಬಂದಾಗ ದಿನ ದಿನಕ್ಕೂ ವಯಸ್ಸು ಕಡಿಮೆಯಾಗುತ್ತಾ ಉತ್ಪತ್ತಿ ಸಹಾ ಕಡಿಮೆಯಾಗುತ್ತದೆ. ಇಂಥವರಿಗೆ ಉತ್ತೇಜನ ಕೊಡದೆ ಹೋದರೆ....

ಶ್ರೀ ಬಿ.ಡಿ. ಜತ್ತಿ.-- ತಾವು ದಯವಿಟ್ಟು ಎರಡನೆಯ ಕ್ಲಾಜನ್ನು ನೋಡಿ?

ಶ್ರೀ ಕೆ.ಎಚ್. ರಂಗನಾಥ್.- ಮದ್ರಾಸಿನಲ್ಲಿ ಈ ಬೆಳೆ ಇರುವುದೆಲ್ಲ 20 ಪರ್ಸೆಂಟ್, ನಮ್ಮ ರಾಜ್ಯದಲ್ಲಿ 70 ಪರ್ಸೆಂಟಿದೆ. ಆದರೂ ಅವರು ಅಲ್ಲಿ ಆ ಬೆಳೆ ತೆಗೆಯತಕ್ಕವರಿಗೆ ಹೆಚ್ಚಿನ ಸಹಾಯವನ್ನು ನೀಡುತ್ತಿದ್ದಾರೆ. ತಾವೂ ಇಲ್ಲಿ ಇವರಿಗೆ ಸಹಾಯ ನೀಡಿದರೆ ಈ ದಾಮಾಷ ಪ್ರಕಾರ ಅನುಕೂಲ ದೊರೆತೇ ದೊರೆಯುತ್ತದೆ. ಈ ವಿಚಾರವಾಗಿ ನಾನಾಗಲೇ ತಮಗೆ 3 ವರ್ಷದ ಅಂಕಿ ಅಂಶಗಳನ್ನು ತಿಳಿಸಿರುತ್ತೇನೆ. ಇದರಿಂದ ಸರ್ಕಾರಕ್ಕೇನೂ ನಷ್ಟವಾಗುವುದಿಲ್ಲ. ಆದುದರಿಂದ ಈಗ ಬೆಳೆಗಳ ಮೇಲೆ ಇಷ್ಟು ನಿರ್ಬಂಧ ಹಾಕುವುದು ಸರಿಯಲ್ಲ. ಈ ನಾಲ್ಕು ವರ್ಷಗಳಿಗೆ ಮಾಫಿ ಮಾಡಿದರೆ 40 ವರ್ಷಕಾಲ ಸರ್ಕಾರಕ್ಕೆ ಉತ್ಪತ್ತಿ ಬರುತ್ತದೆ. ರೈತನಿಗೂ ಅನುಕೂಲವಾಗುತ್ತದೆ. ಈ ಕಾರಣಗಳಿಂದ ರೈತರಿಗೆ ಹೆಚ್ಚಿನ ಉತ್ಪನ್ನ ಕೊಡತಕ್ಕ ಈ ಬೆಳೆಗಳ ಬಗ್ಗೆ ಸರ್ಕಾರ ಇಷ್ಟು ತಾತ್ಸಾರ ಭಾವನೆ ತಾಳಬಾರದೆಂದು ಹೇಳುತ್ತೇನೆ. ನಮ್ಮಲ್ಲಿ 15 ಎಕರೆಗಳಿಗಿಂತ ಕಡಿಮೆ ಆಸ್ತಿಯಿರತಕ್ಕ ಸಂದರ್ಭಗಳು 15 ಸಾವಿರಕ್ಕೂ ಮೇಲಿವೆ. ನಮ್ಮಲ್ಲಿ 25-30 ಎಕರೆ ಇರುವಂಥ ಎಸ್ಟೇಟುಗಳೇ ಜಾಸ್ತಿ ಇವೆ. ಈ ರೈತರ ವಿಚಾರ ಬಹಳ ಕಳವಳ ಪರಿಸ್ಥಿತಿಯಲ್ಲಿದೆ. ಸಾಲದುದಕ್ಕೆ ಭೂಕಂದಾಯ ಈಗ ಒಂದಕ್ಕೆ ಎರಡರಷ್ಟಾಗಿದೆ. ಅವರು ಈ ದಿವಸ ಸಾಲ-ಸೋಲ ಮಾಡಿ ಆಸ್ತಿಗಳನ್ನು ಅಭಿವೃದ್ಧಿಪಡಿಸುತ್ತಿರುವಾಗ ಅವರ ಉತ್ಸಾಹವನ್ನು ಮೊಟಕು ಮಾಡುವುದು ಖಂಡಿತ ಸರಿಯಲ್ಲ. ಈ ನೀತಿಯೇ ಮುಂದುಬಂದಲ್ಲಿ ಮೈಸೂರು ರಾಜ್ಯದಲ್ಲಿ ಈ ಉದ್ಯಮ ಖಂಡಿತ ಬೆಳೆಯುವುದಿಲ್ಲ ಎಂದು ನಾನು ಹೇಳುತ್ತೇನೆ.

ಏಲಕ್ಕಿಗೆ ಈ ಹಿಂದೆ ಬಹಳ ರಿಯಾಯಿತಿ ಇತ್ತು. ಇವತ್ತು ಇದೊಂದು ದೊಡ್ಡ ಕರಾಳ ಪ್ರಶ್ನೆಯಾಗಿದೆ. 400 ರೂಪಾಯಿಗಳಿದ್ದದ್ದು ಈ ದಿವಸ 150 ರೂಪಾಯಿಗಳಿಗಿಳಿದಿದೆ. ಸಂಶೋಧನೆಯೇನೋ ನಡೆಯುತ್ತಿದೆ. ಆದರೆ ಉತ್ತಮ ಬೀಜಗಳಿನ್ನೂ ಬಂದಿಲ್ಲ. ರೋಗಕ್ಕೆ ಸರಿಯಾದ ಔಷಧಿಗಳನ್ನು ಕಂಡುಹಿಡಿದಿಲ್ಲ. ಈ ದಿವಸ ಹತ್ತಾರು ರೂಪಾಯಿಗಳ ಉಳಿತಾಯಕ್ಕೆ ಇಂಥ ಬೆಳೆಯನ್ನು ಮೊಟಕು ಮಾಡಲು ಇಂಥ ಒಂದು ಕಾನೂನನ್ನು ತರುವುದು ಬುದ್ಧಿವಂತಿಕೆಯ ಕೆಲಸವಲ್ಲ ಎಂದು ಹೇಳುತ್ತೇನೆ. ಇದರಿಂದ ನಮ್ಮಲ್ಲಿ ಲಕ್ಷಾಂತರ ಜನ ಹಾಳಾಗುತ್ತಾರೆ. ಈ ವಿಚಾರವನ್ನು ಆ ಎಕಾನಮಿ ಕಮಿಟಿಯವರು ಚೆನ್ನಾಗಿ ಹೇಳಿದ್ದಾರೆ.

ಮೊದಲಿನಿಂದಲೂ ರೈತರಿಗೆ ಯಾವ ವಿಧವಾದ ಪ್ರೋತ್ಸಾಹವನ್ನೂ ಕೊಡುತ್ತಿಲ್ಲ. ರೈತರು ಕಷ್ಟಪಟ್ಟು ಬೆಳೆಸಿಕೊಂಡು ಬಂದಿರತಕ್ಕ ಸಮಯದಲ್ಲಿ ಇದನ್ನು ಮೊಟಕು ಮಾಡತಕ್ಕದ್ದು ಸರಿಯಾದ ಒಂದು ಕಾರ್ಯಕ್ರಮವಲ್ಲ ಎಂದು ಹೇಳಬಯಸುತ್ತೇನೆ. ಮರ ಮುಟ್ಟುಗಳು ಈ ಕಾನೂನಿನೊಳಗೆ ಬರಲಿಲ್ಲ; ಆದಕ್ಕೆ ಒಂದು ಅಮೆಂಡುಮೆಂಟನ್ನು ತರಲಾಗಿದೆ ಎಂದು ಹೇಳಿದ್ದಾರೆ. ಸರಕಾರವನ್ನು ಈ ಬಗ್ಗೆ ಒಂದು ಪ್ರಶ್ನೆ ಕೇಳಬೇಕಾಗಿದೆ. ಮೊದಲಿನಿಂದಲೂ ಈ ದೇಶದಲ್ಲಿ ಮರಮುಟ್ಟುಗಳನ್ನು ಬೆಳೆಸಿಕೊಂಡು ಬಂದಿರುವ ಎಷ್ಟು ಟಿಂಬರ್ ಪ್ಲಾಂಟೇಷನ್ನುಗಳಿವೆ ಎನ್ನುವುದರ ಬಗೆಗೆ ಅಂಕಿ ಸಂಖ್ಯೆಗಳೇನಾದರೂ ಇವೆಯೇ ಎಂದರೆ ಅದೂ ಇಲ್ಲಿಲ್ಲ. ಅಂತಹ ಅಂಕಿ ಸಂಖ್ಯೆಗಳೇನಾದರೂ ಇದ್ದರೆ ಅವನ್ನು ಇಲ್ಲಿ ವಿಚಾರ ಮಾಡಬಹುದಾಗಿತ್ತು.

ಮಲೆನಾಡಿನಲ್ಲಿ ಪ್ಲಾಂಟೇಷನ್ನಿನಲ್ಲಿ ವ್ಯವಸಾಯ ಮಾಡತಕ್ಕ ಜನ, ಮರ ಮುಟ್ಟು ಮಾಡತಕ್ಕವರು ಎಷ್ಟಿದ್ದಾರೆ? 15 ಎಕರೆ, 20 ಎಕರೆಗಳಷ್ಟು ಇರುವ ಕಾಫೀ ಮತ್ತು ಕಾರ್ಡಮಂ ಪ್ಲಾಂಟೇಷನ್ನುಗಳಲ್ಲಿ ರೈತರಿಗೋಸ್ಕರ ಎಷ್ಟು ಹಣ ಖರ್ಚು ಮಾಡುತ್ತಿದ್ದಾರೆ ಎನ್ನುವ ಅಂಕಿ ಸಂಖ್ಯೆಗಳೂ ಇಲ್ಲಿಲ್ಲ. ಅಥವಾ ಬೇರಾವ ವಿವರಗಳನ್ನು ಕೊಡುವ ಪಟ್ಟಿಯೂ ಕೂಡ ಇಲ್ಲಿಲ್ಲ. ಮೈಸೂರು ದೇಶದಲ್ಲಿ ಇದರಿಂದ ಎಷ್ಟು ದುಡ್ಡು ಬರುತ್ತದೆ ಎನ್ನುವುದನ್ನು ಮಂತ್ರಿಗಳು ಇದನ್ನು ಮಂಡಿಸುವಾಗ ಹೇಳಲಿಲ್ಲ. ಇಂತಹ ಒಂದು ಅಮೆಂಡುಮೆಂಟನ್ನು ತಂದು ಕಾನೂನು ಮಾಡುವಾಗ ಎಷ್ಟು ಸಾವಿರ ಎಕರೆಗಳಲ್ಲಿ ಎಷ್ಟು ಜನ ರೈತರು ಈ ಮಸೂದೆಯೊಳಗೆ ಬರುತ್ತಾರೆ ಎನ್ನುವ ವಿವರಗಳು ಇದರಲ್ಲಿ ಸ್ಪಷ್ಟವಾಗಿ ತೋರಿಸಿಲ್ಲ. ಅಲ್ಲದೇ ಈ ಕಾನೂನನ್ನು ಮಾಡಿ ಅವಿದ್ಯಾವಂತರಾಗಿರುವ ರೈತರನ್ನು ಕೋರ್ಟಿಗೆ ಸಿಕ್ಕಿಸಿ ಇಲ್ಲದ ವ್ಯವಹಾರಗಳಿಗೆ ಅವಕಾಶ ಮಾಡಿಕೊಡುತ್ತಿದ್ದೀರಿ. ಇದರಲ್ಲಿರುವ ಸ್ಟೇಟ್‌ಮೆಂಟ್ ಆಫ್ ಅಬ್ಜೆಕ್ಟ್ಸ್ ಮತ್ತು ರೀಸನ್ಸ್‌ಗಳಲ್ಲಿ ಈ ಕಾನೂನು ಮಾಡುವುದರಿಂದ ನಮಗೆ ಎಷ್ಟು ದುಡ್ಡು ಬರುತ್ತದೆ, ಪ್ರೈಮರಿ ಪ್ಲಾಂಟೇಷನ್ನುಗಳಿಂದ ಬರುವ ಆದಾಯವೇನು, ಖರ್ಚು ಎಷ್ಟು ಬರುತ್ತದೆ ಎನ್ನುವ ನಿಖರವಾದ ಅಂಕಿ ಸಂಖ್ಯೆಗಳೂ ಇಲ್ಲ.

ಇವೊತ್ತು ಇರುವ ಪ್ಲಾಂಟೇಷನ್ನು ಉದ್ಯಮ ವ್ಯಾಪಾರಸ್ಥರ ಹಾಗೆ ರಾಮನ ಲೆಕ್ಕ ಇದು, ಕೃಷ್ಣನ ಲೆಕ್ಕ ಇದು ಎಂದು ಇಡುವುದಕ್ಕೆ ಸಾಧ್ಯವಿಲ್ಲ. ರೈತರ ಬಗ್ಗೆ ಸರಕಾರ ಯಾವ ವಿಧವಾದ ನೆರವು ಕೊಡಬೇಕು ಎನ್ನುವುದನ್ನು ನೋಡದೆ ಅವನಿಗೆ ತೊಂದರೆಯಾಗುವಂತಹ ಕಾನೂನನ್ನು ತರಬಾರದು. ಮಾನ್ಯ ಮಂತ್ರಿಗಳು ದೊಡ್ಡ ಮನಸ್ಸು ಮಾಡಿ ಇದನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ನಾನು ಸಲಹೆ ಮಾಡುತ್ತೇನೆ. ಇದನ್ನು ಸರಿಯಾಗಿ ವಿಚಾರ ಮಾಡಿಲ್ಲ. 1962ನೇ ಇಸವಿಯಲ್ಲಿ ಅಗ್ರಿಕಲ್ಚರು ಇನ್‌ಕಂಟ್ಯಾಕ್ಸ್ ಕೊಡದೇ ಇರುವಾಗ ಹೈಕೋರ್ಟಿಗೆ ಹೋಗಿ ಒಂದು ತೀರ್ಪಾಯಿತು ಎನ್ನುವುದರ ಆಗುಹೋಗುಗಳನ್ನು ನೋಡದೆ ಇಂತಹ ಒಂದು ಅಮೆಂಡ್‌ಮೆಂಟನ್ನು ತರುವ ಪದ್ಧತಿ ಸರಿಯಾದುದಲ್ಲ. ಇದರಿಂದ ಜನಗಳಿಗೆ ಆಗುವ ತೊಂದರೆಗಳೇನು? ಇದರ ಆಗುಹೋಗುಗಳೇನು ಎನ್ನುವುದೊಂದನ್ನೂ ವಿಚಾರ ಮಾಡಿಲ್ಲ. ಸುಮ್ಮನೆ ಅವಸರವಸರವಾಗಿ ಅಮೆಂಡ್‌ಮೆಂಟನ್ನು ತಂದರೇನು ಪ್ರಯೋಜನ? ರೈತರ ಉತ್ಸಾಹವನ್ನು ಮೊಟಕು ಮಾಡುವುದಕ್ಕಾಗಿ ಇದನ್ನು ತಂದಿದ್ದಾರೆ ಎಂದು ಹೇಳಬೇಕಾಗಿದೆ. ಎಷ್ಟು ಎಕರೆಗಳಷ್ಟು ಭೂಮಿ ಇದೆ. ಎಷ್ಟು ಉತ್ಪತ್ತಿ ಬರುತ್ತದೆ, ರೀಪ್ಲಾಂಟೇಷನ್ನು ಮಾಡಲು ಎಷ್ಟು ಖರ್ಚು ಬರುತ್ತದೆ, ಎನ್ನುವ ವಿವರಗಳೊಂದೂ ಇದರಲಿಲ್ಲ.

ಶ್ರೀ ಬಿ.ಡಿ. ಜತ್ತಿ.- ಇದನ್ನು ಇನ್ನೂ ಕ್ಯಾಲ್ಕುಲೇಷನ್ನು ಮಾಡಬೇಕು. ಒಂದು ವರ್ಷದ ಎಕ್ಸ್‌ಪೀರಿಯನ್ಸನ್ನು ನೋಡಿಕೊಂಡು ಮಾಡಬೇಕಾಗಿದೆ.

ಶ್ರೀ ಕೆ.ಎಚ್. ರಂಗನಾಥ್.- ಯಾವ ಐಟಂಗಳನ್ನು ತೆಗೆದುಕೊಂಡು ಹೆಚ್ಚಿನ ಉತ್ಪತ್ತಿ ಏನು ಬರುತ್ತದೆ ಎನ್ನುವುದನ್ನು ನೋಡಿದರೆ ಕೋಟ್ಯಾಂತರ ರೂಪಾಯಿಗಳೂ ಇದರಿಂದ ಬರುವ ಸ್ಥಿತಿಯೂ ಇಲ್ಲ. ಹಾಗಿರುವಾಗ ಅವಸರವಸರವಾಗಿ ಇಂತಹ ಕಾರ್ಯಕ್ರಮವನ್ನೇಕೆ ತೆಗೆದುಕೊಳ್ಳಿ ್ತರಿ? ದಯವಿಟ್ಟು ಈ ಬಿಲ್ಲನ್ನು ವಾಪಸು ತೆಗೆದುಕೊಳ್ಳಿ ಎಂದು ಹೇಳುತ್ತೇನೆ. ಮಲೆನಾಡನ್ನು ಬಿಜಾಪುರದ ಬಯಲನ್ನಾಗಿ ಮಾಡಬೇಡಿ, ಇರತಕ್ಕ ಹಳೆಯ ಪ್ಲಾಂಟೇಷನ್ನುಗಳು ಅಷ್ಟೇನೂ ಹೆಚ್ಚಾಗಿಲ್ಲ. ಇದರೊಳಗಿರುವ ರೈತರಿಗೆ ಉತ್ತೇಜನ ಕೊಡದೇ ಹೋದರೆ ಸರಿಯಾಗಿರುವುದಿಲ್ಲ, ಈಗಾಗಲೆ ಎಷ್ಟೋ ಕಡೆ ಬೀಟೆ ಮರಗಳು ಹಾಳಾಗಿ ಹೋದವು, ಅವಸರವಸರವಾಗಿ ಇಂತಹ ಕಾನೂನನ್ನು ತರುವುದು ಒಳ್ಳೆಯದಲ್ಲ, ಮಾನ್ಯ ಮಂತ್ರಿಗಳು ಇದನ್ನೆಲ್ಲಾ ವಿಚಾರ ಮಾಡಿ ಈ ಬಿಲ್ಲನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಹೇಳಿ ನನ್ನ ಈ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

*****

# ಕೃಷಿ ಕೈಗಾರಿಕೆ ಇಲಾಖೆಗಳು

10 ಅಕ್ಟೋಬರ್ 1963

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ).- ಸ್ವಾಮಿ, ನಾನೀಗ ಸಭೆಯ ಮುಂದೆ ಮಂಡಿಸಿರತಕ್ಕ ಅಡಿಷನಲ್ ಸಪ್ಲಿಮೆಂಟರಿ ಗ್ರಾಂಟುಗಳ ಮೇಲೆ ಮಾತನಾಡಲು ಇಷ್ಟ ಪಡುತ್ತೇನೆ. ನಮ್ಮ ರಾಜ್ಯಾಂಗದಲ್ಲಿರತಕ್ಕ ಆರ್ಟಿಕಲ್ 205ರ ಪ್ರಕಾರ ಇಂಥ ಒಂದು ಸೂಚನೆಯನ್ನು ಸಭೆಯ ಮುಂದೆ ಮಂಡಿಸಲು ಅವಕಾಶವಿದೆ. ಆದರೆ ಈ ಒಂದು ಅವಕಾಶವನ್ನು ನಮ್ಮ ಸರ್ಕಾರ ದುರುಪಯೋಗಪಡಿಸಿಕೊಂಡು ಪ್ರತಿ ವರ್ಷವೂ ಹೀಗೇ ಇದನ್ನು ತರುತ್ತಿರುವುದನ್ನು ನೋಡಿದರೆ, ವರ್ಷಾರಂಭದಲ್ಲಿ ಬಡ್ಜೆಟ್ಟನ್ನು ತಯಾರಿಸತಕ್ಕ ಕಾಲದಲ್ಲಿ ಈ ಸಂಬಂಧಪಟ್ಟ ಕಛೇರಿಯಲ್ಲಿ ಕೆಲಸ ಮಾಡತಕ್ಕವರು ಸರಿಯಾಗಿ ವಿವೇಚನೆಯನ್ನು ಉಪಯೋಗಿಸದೆ ಇರುವುದರಿಂದ ಹೀಗಾಗುತ್ತಿದೆ. ಇದು ನಮ್ಮ ದೇಶದ ಒಂದು ದುರ್ದೈವ ಎಂದು ಹೇಳದೇ ವಿಧಿಯಿಲ್ಲ. ಇನ್ನು ಈ ಸಭೆಗೆ ಒದಗಿಸಿರತಕ್ಕ 1963ನೆಯ ಆಡಿಟ್ ವರದಿಯನ್ನು ನೋಡಿದರೆ ಈ ಒಂದು ಆಯವ್ಯಯವನ್ನು ತಯಾರು ಮಾಡುವ ಕಾರ್ಯಾಲಯ ಸರಿಯಾಗಿ ಮಾಡುತ್ತಿಲ್ಲ ಎಂಬುದಕ್ಕೆ ಇಲ್ಲಿ ಬೇಕಾದಷ್ಟು ಆಧಾರಗಳು ಸಿಕ್ಕುತ್ತವೆ.

1963ನೆಯ ಆಡಿಟ್ ರಿಪೋರ್ಟ್ ಪ್ರಕಾರ ನಮ್ಮ ಬಡ್ಜೆಟ್ಟಿನಲ್ಲಿ 15.8 ಕೋಟಿ ರೂಪಾಯಿಗಳ ಉಳಿತಾಯವಾಗಿದೆ. ಇದನ್ನು ನಾವು ಸ್ವಲ್ಪ ದೀರ್ಘವಾಗಿ ಆಲೋಚನೆ ಮಾಡಿ ನೋಡಿದರೆ ಈ ಮಾನ್ಯ ಸಭೆ ಸರ್ಕಾರಕ್ಕೆ ಒಂದು ವರ್ಷ ಕಾಲದಲ್ಲಿ ಏನೊಂದು ಹಣವನ್ನು ಖರ್ಚುಮಾಡಬೇಕೆಂದು ಕೊಟ್ಟಿರುತ್ತದೋ ಹಣವನ್ನು ಸರ್ಕಾರ ಸರಿಯಾಗಿ ಖರ್ಚುಮಾಡದೆ ಇರುವುದರಿಂದ ನಮ್ಮ ಪ್ಲಾನಿನಲ್ಲಿ ಕಂಡ ಕೆಲಸಕಾರ್ಯಗಳು ನಿಯಮಿತ ಕಾಲಕ್ಕೆ ಸರಿಯಾಗಿ ಆಗದೆ ಅವು ಹಿಂದೆ ಬೀಳಲು ಕಾರಣವಾಗಿರುತ್ತೆ ಎಂಬುದು ಇದರಿಂದ ಚೆನ್ನಾಗಿ ವೇದ್ಯವಾಗುತ್ತದೆ. ಇದರಿಂದ ನಮ್ಮ ಎಕಾನಮಿಗೆ ಧಕ್ಕೆ ಬರುತ್ತಿದೆ. ನಾವು ಯಾವ ಕೆಲಸಗಳನ್ನು ಎಷ್ಟು ಕಾಲದಲ್ಲಿ ಮುಗಿಸಬೇಕೆಂದು ಒಂದು ಆದೇಶವನ್ನು ಕೊಟ್ಟಿರುತ್ತೇವೋ ಅದು ಆ ಕಾಲಕ್ಕೆ ಆಗುತ್ತಿಲ್ಲ. ಇದರಿಂದ ದೇಶದ ಉತ್ಪತ್ತಿಗೆ ಕುಂದಕ ಉಂಟಾಗಿದೆ. ಹೀಗೆ ಬಡ್ಜೆಟ್ಟಿನಲ್ಲಿ ಒದಗಿಸಿರತಕ್ಕ ಹಣವೇ ಲ್ಯಾಪ್ಸಾಗುತ್ತಿರುವಾಗ ಮತ್ತೆ 61-62ನೇ ಆಡಿಟ್ ವರದಿಯಲ್ಲಿ ಹೇಳಿರುವಂತೆ ಆ ಸಾಲಿನಲ್ಲಿ ಪುನಃ ಸಪ್ಲಿಮೆಂಟರಿ ಗ್ರಾಂಟ್ ರೂಪದಲ್ಲಿ ಒದಗಿಸಿರತಕ್ಕ 27.78 ಕೋಟಿ ರೂಪಾಯಿಗಳು ಅನವಶ್ಯಕವಾಗುತ್ತಿತ್ತು ಎಂಬುದಾಗಿ ಆಡಿಟರ್ ಜನರಲ್ಲೂ ಹೇಳಿದ್ದಾರೆ: ಹೀಗೆ ಸಪ್ಲಿಮೆಂಟರಿ ಗ್ರಾಂಟು ಬೇಕಾಗದೆ ಇದ್ದರೂ ಅದನ್ನು ಮಂಜೂರು ಮಾಡಿಸಿಕೊಳ್ಳುತ್ತಿದ್ದಾರೆ. ಇದರಿಂದ ಆ ವರ್ಷದ ನಮ್ಮ ಖೋತಾ ಇನ್ನೂ ಕಡಿಮೆಯಾಗುತ್ತಿತ್ತು ಎಂದು ಅವರು ಹೇಳಿದ್ದಾರೆ. ಇದನ್ನು ನಾನು ಏತಕ್ಕೆ ಹೇಳುತ್ತಿದ್ದೇನೆಂದರೆ; ನಮ್ಮ ಸರ್ಕಾರದವರಿಗೆ ಒಂದು ವರ್ಷಕ್ಕೆ ಅವರಿಗೆ ನಿಖರವಾಗಿ ಎಷ್ಟು ಹಣ ಬೇಕು

ಎಂಬುದೇ ಅವರಿಗೆ ಗೊತ್ತಿರುವುದಿಲ್ಲ ಎಂಬ ಅಂಶವನ್ನು ನಾನು ಬಹಳ ವ್ಯಸನದಿಂದ ಹೇಳಬೇಕಾಗಿದೆ. ಇವರು ಹಣವನ್ನು ಖರ್ಚು ಮಾಡುತ್ತಿರುವ ವಿಧಾನವಾದರೋ ತುಂಬಾ ವ್ಯಸನಕರವಾಗಿದೆ. ಈ ಡಿಮ್ಯಾಂಡಿನಲ್ಲಿ ಅದನ್ನು ಸಮರ್ಥಿಸಲು ಬೇಕಾದಷ್ಟು ನಿದರ್ಶನಗಳಿವೆ.

ಡಿಮ್ಯಾಂಡು 20ರಲ್ಲಿ ವ್ಯವಸಾಯದ ಇಲಾಖೆಗಾಗಿ ಸುಮಾರು 32,10,300 ರೂಪಾಯಿಗಳು ಬೇಕೆಂದು ಕೇಳಿದ್ದಾರೆ. ವ್ಯವಸಾಯ ಇಲಾಖೆ ಯಾವ ರೀತಿ ಕೆಲಸ ಮಾಡುತ್ತಿದೆ. ಎನ್ನುವುದನ್ನು ಹೇಳಲು ಇವೊತ್ತು ಬಹಳ ವ್ಯಸನವಾಗುತ್ತದೆ. ವ್ಯವಸಾಯದ ಇಲಾಖೆ ಅತೀ ಮುಖ್ಯವಾದ ಇಲಾಖೆ. ಅದು ತನ್ನ ಕೆಲಸವನ್ನರಿತು ಕೆಲಸ ಮಾಡುವದಾದರೆ ಬಹಳ ಒಳ್ಳೆಯದಾಗುತ್ತಿತ್ತು. ಆದರೆ ಅದಕ್ಕಾಗಿ ಈ ಸಭೆಯ ಮುಂದೆ ಹಣವನ್ನು ಒದಗಿಸಿ ಕೊಟ್ಟಿದ್ದರೂ ಆ ಇಲಾಖೆ ತನ್ನ ಕಾರ್ಯವನ್ನು ಸರಿಯಾಗಿ ಮಾಡುತ್ತಿಲ್ಲ. ಇಲಾಖೆಯ ಅಧಿಕಾರಿಗಳು ಅವರ ಕಾರ್ಯದ ಬಗ್ಗೆ ಹೆಚ್ಚು ನಿಗಾವಹಿಸದೇ ಬಹಳ ಲಘುವಾಗಿ ತೆಗೆದುಕೊಂಡಿದ್ದಾರೆ. ಅಗ್ರಿಕಲ್‌ಚರಿನ ಬಗ್ಗೆ ಆಡಿಟ್ಟು ರಿಪೋರ್ಟಿನಲ್ಲಿ ಹೇಳಿರುವಂತೆ 24 ಲಕ್ಷ ರೂಪಾಯಿಗಳಷ್ಟು ಉಳಿತಾಯವನ್ನು ತೋರಿಸಿದ್ದಾರೆ. ಸರಿಯಾಗಿ ಅಲ್ಲಿನ ಕೆಲಸಗಳನ್ನು ಕಾರ್ಯಗತ ಮಾಡದೆ, ಸಾಯಲ್ ಕನ್‌ಸರ್‌ವೇಷನ್ನಿಗಾಗಿ ಏನೂ ಪ್ರಾಮುಖ್ಯತೆ ಕೊಡದೇ ಇರುವುದೇ ಇದಕ್ಕೆ ಕಾರಣವಾಗಿದೆ. ಹಿಂದೆ ನಾವು ಕೊಟ್ಟ ಹಣವನ್ನೇ ಸರಿಯಾಗಿ ಉಪಯೋಗಿಸಿದ್ದ ಪಕ್ಷದಲ್ಲಿ ಈ ಹಿಂದೆ ನಾವು ಬರಗಾಲದ ಪರಿಸ್ಥಿತಿ ಬಗ್ಗೆ ಇಲ್ಲ ಹೆಚ್ಚು ಮಾತನಾಡುವ ಆವಶ್ಯಕತೆಯೇ ಇರುತ್ತಿರಲಿಲ್ಲ.

**Sri B.D. JATTI.-** The point is, if the Hon'ble Member is speaking about any specific item, we can reply. If it is generally about the framing of the Budget or if you go on talking about the audit report of 1961, what is the use of it?

**Sri K.H. RANGANATH.-** I have said that I am speaking with reference to Demand No. 20.

**Mr. SPEAKER.-** I have not fixed any time limit. I have not been helped with the list of names of members except four names which have been given on behalf of one party. If one member goes on like this, we will not be able to close at 6 P.M.

**Sri V.S. PATIL (Belgaum I).-** As many Members want to participate a time limit may be imposed from now onwards. Otherwise, at the end of the day, there will be grambling.

**Mr. SPEAKER.-** That is why I have always appealed to the whips to give me names. May I request the whips to retire to the lounge for a few minutes and give me the time break-up. Let it be remembered that there are also members who do not belong to any party.

What time does he take?

**Sri K.H. RANGANATH.-** I want half-an-hour.

**Mr. SPEAKER.-** Les him kindly get into touch with the whips and make some adjustment of the time.

ಶ್ರೀ ಕೆ.ಎಚ್. ರಂಗನಾಥ್.- ಈ ಸಪ್ಲಿಮೆಂಟರಿ ಬಡ್ಜೆಟ್ಟಿನಲ್ಲಿ ಆಗ್ರಿಕಲ್‌ಚರ್‌ಗಾಗಿ ಇಷ್ಟು ದುಡ್ಡು ಬೇಕೆಂದು ಕೇಳಿದ್ದಾರೆ. ಅದರ ಬಗ್ಗೆ ಮಾತ್ರ ಇಲ್ಲಿ ಹೇಳತ್ತಿದ್ದೇನೆ. ಆಗ್ರಿಕಲ್‌ಚರಿನ ವಿಷಯವಾಗಿ ದುಡ್ಡು ಕೇಳಿದ್ದಾರೆ. ಈ ಇಲಾಖೆಯ ಮೇಲೆ ಮಾತನಾಡಬೇಕಾದರೆ ಎರಡು ದಿವಸಗಳಾದರೂ ಸಾಲುವುದಿಲ್ಲ. ನಾನು ಈ ಇಲಾಖೆಯು ಸರಿಯಾಗಿ ಕೆಲಸ ಮಾಡುತ್ತಿಲ್ಲ ಸೇವಿಂಗ್ಸ್‌ನ್ನು ತೋರಿಸುತ್ತಿದೆ ಎಂದು ಆದರ ಉದಾಹರಣೆ ತೋರಿಸಲು ಇದರಲ್ಲಿ Item No. 4ನಲ್ಲಿ ಇಪ್ಪತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ U.S.S.R. Machinery ತರುವುದಕ್ಕಾಗಿ ಎಂದಿದೆ. ಈ ಬಗ್ಗೆ ಹೇಳುವುದಾದರೆ, ವ್ಯವಸಾಯ ಇಲಾಖೆಯಲ್ಲಿರತಕ್ಕ ಟ್ರಾಕ್ಟರುಗಳು, ಬುಲ್‌ಡೋಜರುಗಳಿಗಾಗಿ ಸರಕಾರಕ್ಕೆ 22.20 ಲಕ್ಷ ರೂಪಾಯಿಗಳಷ್ಟು ನಷ್ಟವಾಗಿದೆ. ಲಕ್ಷಾಂತರ ರೂಪಾಯಿಗಳಷ್ಟು ವೆಚ್ಚ ಮಾಡಿ, ಈಗ 33 ಟ್ರಾಕ್ಟರುಗಳು, 13 ಬುಲ್‌ಡೋಜರುಗಳು 1951ರಿಂದ 1961ನೇ ಇಸವಿಯವರೆಗೆ ಕೆಲಸ ಮಾಡದೇ ರಿಪೇರಿಗಾಗಿ ಹಾಗೆ ನಿಂತಿವೆ. ಇದರಿಂದಾಗಿ ಸುಮಾರು ಇಪ್ಪತ್ತೆರಡು ಲಕ್ಷ ರೂಪಾಯಿಗಳಷ್ಟು ನಷ್ಟವಾಗಿದೆ. ನಾನು ಹೇಳುವುದಾದರೂ ಬುಲ್‌ಡೋಜರುಗಳಿಗಾಗಿ ಮತ್ತು ಟ್ರಾಕ್ಟರುಗಳಿಗಾಗಿ ಈಗಾಗಲೇ ಸಾಧಾರಣವಾಗಿ 63.26 ಲಕ್ಷ ರೂಪಾಯಿಗಳಷ್ಟು ಖರ್ಚು ಮಾಡುತ್ತಿದ್ದೇವೆ. ಹಾಗೂ ಪ್ರತಿಯೊಂದು ಟ್ರಾಕ್ಟರಿಂದಲೂ 500 ಎಕರೆಯಷ್ಟು ಭೂಮಿಯ ಕೆಲಸ ಮಾಡಬೇಕು, ಒಂದು ವರ್ಷಕ್ಕೆ ನೂರು ಗಂಟೆಗಳಷ್ಟಾದರೂ ಕೆಲಸ ಮಾಡಬೇಕೆಂದು ಟಾರ್ಜೆಟ್ಟನ್ನು ಇಟ್ಟುಕೊಳ್ಳಬೇಕು ಎನ್ನುವ ಉದ್ದೇಶಕ್ಕೇ ಧಕ್ಕೆ ತರಲಿದೆ. ಇಲ್ಲಿ ಕೊಟ್ಟಿರುವ ಅಂಕಿ ಅಂಶಗಳಂತೆ ನೋಡಿದರೆ 88 ಗಂಟೆಗಳಷ್ಟು ಕೆಲಸ ಮಾಡಿ 292 ಎಕರೆಯಷ್ಟು ಮಾಡಿದೆ ಎಂದರೆ ನಿಗದಿಯಾದುದನ್ನೂ ಭರ್ತಿ ಮಾಡಲಾಗಲಿಲ್ಲ. ಅಲ್ಲದೆ 33 ಟ್ರಾಕ್ಟರುಗಳು ಮತ್ತು 13 ಬುಲ್‌ಡೋಜರುಗಳು 51 ರಿಂದ 61 ರವರೆಗೆ ರಿಪೇರಿ ಆಗದೇ ಹಾಗೇ ನಿಂತಿವೆ. ಇದರ ಬಗ್ಗೆ ಸ್ಟೇಟಿನ ವ್ಯವಸಾಯ ಇಲಾಖೆಯುವರು ನಿಗಾವಹಿಸಿದ್ದಿದ್ದರೆ ಇನ್ನೂ ಹೆಚ್ಚಿನ ಉಪಯೋಗ ಪಡೆಯ ಬಹುದಾಗಿತ್ತು.

ಈ ಒಂದು ಉದಾಹರಣೆಯಿಂದಲೇ ನೋಡಿದರೆ ಇಲಾಖೆ ಎಷ್ಟು ಮಟ್ಟಿಗೆ ಕೆಲಸ ಮಾಡುತ್ತಿದೆ. ಇಲಾಖೆಯ ಅಧಿಕಾರಿಗಳು ಸಾರ್ವಜನಿಕ ಕ್ಷೇತ್ರದಲ್ಲಿ ಸರಿಯಾದ ಕೆಲಸವನ್ನು ನಿರ್ವಹಿಸುತ್ತಿಲ್ಲ ಎಂದು ಮತ್ತೆ ಒತ್ತಿ ಹೇಳಬೇಕಾಗಿದೆ. ಅಲ್ಲದೆ ನಮಗೆ ಹೈರ್ ಚಾರ್ಜಸ್‌ಗಾಗಿ ಸುಮಾರು 4.5 ಲಕ್ಷ ರೂಪಾಯಿಗಳಷ್ಟು ಬರಬೇಕಾಗಿದೆ; ಪ್ರೈವೇಟ್ ಪಾರ್ಟಿಗಳಿಂದ ಸುಮಾರು 83,690 ರೂಪಾಯಿಗಳಷ್ಟು ಬಾಕಿ ಬರಬೇಕಾಗಿದೆ.

ಈ ರೀತಿ ಬಾಕಿ ಬೀಳಲು ಕಾರಣವೇನು, ಸರಕಾರದವರು ಕೇಳಬೇಡವೆ? ಇದು ಸರಕಾರಕ್ಕೆ ಬರಬೇಕಾದ ಆದಾಯವಲ್ಲವೇ? ಇವೊತ್ತಿನ ದಿವಸ ನಾವು ವಿಚಕ್ಷಣೆಯಿಲ್ಲದಂತಹ ಕರದ ಭಾರವನ್ನು ಹೊರಿಸಿರುವುದರಿಂದ ಅದು ವಿಪರೀತವಾಗಿ ಬರುತ್ತಿದ್ದರೂ ಅಂತಹ ಹಣವನ್ನು ಯಾವ ರೀತಿ ಖರ್ಚು ಮಾಡುತ್ತಿದ್ದೇವೆಂದು ತೋರಿಸುತ್ತಿಲ್ಲ. ಟ್ರಾಕ್ಟರುಗಳು ಮತ್ತು ಬುಲ್‌ಡೋಜರುಗಳಿಂದ ಸುಮಾರು ಇಪ್ಪತ್ತೆರಡು ಲಕ್ಷ ರೂಪಾಯಿಗಳಷ್ಟು ಬರಬೇಕಾಗಿದೆ. ಅದರ ಬಗ್ಗೆ ಸರಕಾರ ಯಾವ ಕಾರ್ಯಕ್ರಮವನ್ನೂ ತೆಗೆದುಕೊಂಡಿಲ್ಲ. 1957-58 ರಿಂದಲೂ ಯಾವ ವಿಧವಾದ ಕಾರ್ಯಕ್ರಮವನ್ನೂ ತೆಗೆದುಕೊಂಡಿಲ್ಲ ಎಂದು ನಮಗೆ ಕೊಟ್ಟಿರುವ ಆಡಿಟ್ ರಿಪೋರ್ಟಿನಲ್ಲಿ ಪದೇ ಪದೇ ಹೇಳಲಾಗಿದೆ.

ಮೊನ್ನೆ ತಾನೇ ಹೇಳಿದ ಹಾಗೆ, ಸುಮಾರು 1,17,000 ರೂಪಾಯಿಗಳಷ್ಟು ಬೆಲೆಯ ವರ್ಕ್‌ಶಾಪ್ ಮೆಷಿನರಿಯು ರಾಯಚೂರಿನಲ್ಲಿ ಐಡಲ್ ಆಗಿ 1957, 1958-59 ರಿಂದಲೂ ಇದ್ದರೂ ಇಲ್ಲಿಯವರೆಗೂ ಹಾಗೇ ಇದೆ ಎಂದು ಆಡಿಟ್ ರಿಪೋರ್ಟಿನಲ್ಲಿಯೂ ಬಂದಿದೆ. ಇದಕ್ಕೆ ಇನ್ನೂ ಯಾವ ಒಂದು ಪ್ಲಾನನ್ನಾಗಲೀ, ಎಸ್ಟಿಮೇಟನ್ನಾಗಲೀ ತಯಾರುಮಾಡಿಲ್ಲ. ಇದು ಬಹು ವಿಷಾದಕರವಾದ ಸಂಗತಿ. ಈ ಒಂದು ಇಲಾಖೆಯಲ್ಲಿ ಅಧಿಕಾರಿಗಳೇನಿದ್ದಾರೆ ಅವರ ಪಾರ್ಟ್ ಮಾಡುತ್ತಿದ್ದಾರೆಂದು ಕೇಳುತ್ತೇನೆ. ಯಾವ ವಿಧವಾದ ಕೆಲಸವನ್ನು ಮಾಡುತ್ತಿಲ್ಲ.

ಸಾಯಲ್ ಕನ್‌ಸರ್‌ವೇಷನ್ನು ಮಾಡುವ ಬಗ್ಗೆ ಈ ಸಭೆಯ ಸದಸ್ಯರು ಎಷ್ಟೋ ಸಲಹೆಗಳನ್ನು ಕೊಟ್ಟಿದ್ದರೂ ಕೂಡ ಅದರ ಬಗ್ಗೆ ಹೆಚ್ಚು ಅನುಕೂಲವಾಗುವಂತಹ ಯಾವ ಕೆಲಸವನ್ನೂ ಮಾಡಲಿಲ್ಲ. ಇದರ ಬಗ್ಗೆ ಸೂಕ್ತವಾದ ಕಾರ್ಯಕ್ರಮವನ್ನು ತೆಗೆದುಕೊಂಡಿದ್ದರೆ ನಮಗೆ ಈ ಕೆಲಸ ಸುಲಭವಾಗುತ್ತಿತ್ತು. ಇದರಲ್ಲೂ ಕೂಡ ಹಣ ಉಳಿತಾಯ ಮಾಡಿ ಮಂಜೂರು ಮಾಡಿದ್ದ ಹಣವನ್ನು ಖರ್ಚು ಮಾಡದಿರುವುದು ಇಲಾಖೆಯ ದೂರದರ್ಶಿತ್ವ ತೋರಿಸುತ್ತದೆ. ಅಲ್ಲದೆ ಹಣವನ್ನು ಕೂಡ ವಿಚಕ್ಷಣೆಯಿಂದ ಖರ್ಚು ಮಾಡುತ್ತಿಲ್ಲ. ನಮ್ಮ ಫೈನಾನ್ಸ್ ಮಿನಿಸ್ಟರು ಈ ವಿಚಾರದಲ್ಲಿ ಉಸ್ತುವಾರಿ ವಹಿಸಿ ಹೆಚ್ಚು ನಿಗಾಕೊಟ್ಟಿಲ್ಲ ಎಂದು ಅವರೇ ಹೇಳುತ್ತಾರೆ.

Non-implementation of schemes relating to cotton cultivation, soil conservation, etc.

ಹೀಗೆ ಸ್ಕೀಮುಗಳೂ ಹಾಗೇ ಉಳಿದಿದೆ.

ರೂರಲ್ ಡೆವಲಪ್‌ಮೆಂಟಿನ ವಿಚಾರವಾಗಿಯೂ ಹೇಳುತ್ತ ವ್ಯವಸಾಯದ ಬಾಕಿಯಲ್ಲಿ ಆ ಇಲಾಖೆಯ ಅಧಿಕಾರಿಗಳು ಹೆಚ್ಚು ನಿಗಾವಹಿಸಿ ಹೆಚ್ಚು ಉಪಯೋಗವಾಗುವಂತೆ ಮಾಡುತ್ತಿಲ್ಲ. ಈ ವಿಷಯವನ್ನೇ ನಾವು ತೆಗೆದುಕೊಂಡರೆ ಈ ವ್ಯವಸಾಯ ಇಲಾಖೆಯ ಮುಖ್ಯ ಅಧಿಕಾರಿಗಳು ಮೂರು ಕಾಸಿನ ಕೆಲಸವನ್ನೂ ಮಾಡುತ್ತಿಲ್ಲ. ಅವರು ಬೇರೆ ಅಧಿಕಾರಿಗಳೊಂದಿಗೆ ಕೂಡಿಕೊಂಡು ರಾಜಕೀಯ ಮಾಡುತ್ತಾರೆ. ಅಲ್ಲಿ ಯಾವ ಅಧಿಕಾರಿಗಳಿದ್ದಾರೆ ಎನ್ನುವುದನ್ನು ನಾನು ಇವೊತ್ತಿನವರೆಗೂ ಅವರ ಮುಖವನ್ನೂ ನೋಡಿಲ್ಲ. ನಾನು ಕೇಳಿರತಕ್ಕದ್ದು. ಅವರ ಕೈಕೆಳಗಿರುವ ಅಧಿಕಾರಿಗಳಲ್ಲೇ ಭಿನ್ನ ಭೇದಗಳನ್ನುಂಟು ಮಾಡಿ ಒಬ್ಬ ಅಧಿಕಾರಿಯನ್ನು ಇನ್ನೊಬ್ಬ ಅಧಿಕಾರಿಯ ಮೇಲೆ ಎತ್ತಿಕ್ಕಿ ಅವರ ಪ್ರಮೋಷನ್ನು ಇನ್ನಿತರ ವಿಚಾರಗಳಿಗಾಗಿ ಪ್ರೋತ್ಸಾಹ ಕೊಟ್ಟು ಹೈಕೋರ್ಟಿನಲ್ಲಿ ರಿಟ್ಟುಗಳನ್ನು ಫೈಲು ಮಾಡಿಸುತ್ತಿದ್ದಾರೆಂದು ಕೇಳಿದ್ದೇನೆ.

ಈ ಇಲಾಖೆಯಲ್ಲಿ ಯಾವ ವಿಧವಾದಂಥ ಆಸಕ್ತಿಯೂ ಇಲ್ಲ. ಒಂದು ವಿಷಯ ಹೇಳುವುದಾದರೆ 1957-58ರಿಂದ ರಾಯಚೂರು ಜಿಲ್ಲೆಗೆ 1.17 ಲಕ್ಷಕ್ಕೆ ಖರೀದಿಯಾಗಿರುವ ಮೆಶಿನರಿ ಇವತ್ತಿನವರೆಗೆ ಉಪಯೋಗವಿಲ್ಲದೆ ಹಾಗೆಯೇ ಬಿದ್ದಿದೆ. ಹೀಗಾದರೆ ಇದರ ಬಡ್ಡಿ ಎಷ್ಟು ಆಯಿತು? ಒಂದು ರಿಪೋರ್ಟ್‌ನ್ನೂ ಇಲಾಖೆಯ ಮುಖ್ಯಾಧಿಕಾರಿ ಸರಕಾರಕ್ಕೆ ಕೊಟ್ಟಿಲ್ಲ. ಇದು ಸರಕಾರದ ಬೇಜವಾಬ್ದಾರಿಯನ್ನೂ ಅಸಾಮರ್ಥ್ಯತೆಯನ್ನೂ ತೋರಿಸುವುದಿಲ್ಲವೆ? ಬುಲ್‌ಡೋಜರುಗಳು ಮತ್ತು ಟ್ರಾಕ್ಟರುಗಳಲ್ಲಿ 22 ಲಕ್ಷ ರೂಪಾಯಿ ಲಾಸ್ ಮಾಡಿಕೊಂಡಿದ್ದೇವೆಂದು ಹೇಳುವುದು ಬಹಳ ವಿಷಾದದ ಸಂಗತಿ. ಇವತ್ತಿನ ದಿವಸ ನಾವು ಕಷ್ಟ ಪರಿಸ್ಥಿತಿಯಲ್ಲಿದ್ದೇವೆ. ದೇಶದ ಉದ್ಧಾರದ ಬಗ್ಗೆ ನಿಮಗೆ ಎಷ್ಟು ಕಳಕಳಿ ಇದೆಯೋ ನಮಗೂ ಅಷ್ಟೇ ಕಳಿಕಳಿ ಇದೆ. ಇವತ್ತಿನ ದಿವಸ ಮಂತ್ರಿಗಳು ಅಧಿಕಾರಿಗಳ ವರ್ತನೆಗೆ ಸೋಲುವುದಾದರೆ, ಅಧಿಕಾರಿಗಳು ರಾಜ್ಯಭಾರ ಮಾಡುವುದಾದರೆ, ಸಾಮಾನ್ಯವಾಗಿ ನಾವು ಹಾಕತಕ್ಕ ಯಾವ ಕಾರ್ಯಕ್ರಮವೂ ಮೂರನೆಯ ಯೋಜನೆಯಲ್ಲಿ ಕಾರ್ಯಗತವಾಗಲಾರದು ಎಂದು ನಾನು ಹೇಳಬಯಸುತ್ತೇನೆ.

ಇನ್ನು ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟ್ ಬಗ್ಗೆ ಸ್ವಲ್ಪ ಹೇಳಬೇಕು ಎಂದು ಮನಸ್ಸು ಇದೆ. ಇವತ್ತಿನ ದಿವಸ ಡಿಮ್ಯಾಂಡ್ ನಂಬರ್ 44ರಲ್ಲಿ-ಇಂಡಸ್ಟ್ರೀಸ್ ಅಂಡ್ ಕಾಮರ್ಸ್ ಇಲಾಖೆಗೆ ರೂ. 1,39,-0,250 ಕೇಳಿದ್ದೀರಿ. ಅದರಲ್ಲಿ ರೂ. 1,2-00,000 ಗವರ್ನಮೆಂಟ್ ಎಲೆಕ್ಟ್ರಿಕ್ ಫ್ಯಾಕ್ಟರಿಯನ್ನು ಬಡಾವಣೆ ಮಾಡುವುದಕ್ಕೆ ಕೇಳುತ್ತಾ ಇದ್ದೀರಿ. ನೀವು ಎಕ್ಸ್‌ಪ್ಯಾನ್‌ಶನ್ನಿಗೆ ಈ ಹಣ ಕೇಳುತ್ತೀರಿ ಎಂದು ನಾನು ಒಪ್ಪಿಕೊಳ್ಳುವುದಾದರೂ, ಈ ಇಲಾಖೆಯಲ್ಲಿ ಎಷ್ಟರಮಟ್ಟಿಗೆ ಕೆಲಸ ಕಾರ್ಯಗಳಾಗಿಲ್ಲವೆನ್ನುವುದನ್ನು ಹೇಳುತ್ತೇನೆ. ನೀವು

ಕೊಂಡಂತ ಮೆಶನರಿಗಳು ಇಷ್ಟು ದಿವಸದವರೆಗೂ ಉಪಯೋಗವಾಗದೆ ಹಾಗೆಯೇ ಇವೆ. ಪವರ್ ಲೂಮ್ಸ್ ತೆಗೆದುಕೊಂಡಿದ್ದೀರಿ; ಸುಮಾರು 2,000 ಲೂಮುಗಳು ಖರೀದಿ ಆಗಿವೆ. ಇವುಗಳಲ್ಲಿ ಸಾಧಾರಣವಾಗಿ ಅರ್ಧಕ್ಕೆ ಕೇಂದ್ರ ಸರಕಾರದಿಂದ ದುಡ್ಡು ಬರುತ್ತದೆ. ನಾವು ಅರ್ಧ ಕೊಡುತ್ತೇವೆ.

"A further sum of Rs. 125.090 lakhs is required during the current year for expenditure on construction of buildings, purchase of machinery, equipment......"

ಎಂದು ರಿಪೋರ್ಟಿನಲ್ಲಿ ನಾನು ಈ ಮಾತನ್ನು ಏಕೆ ಹೇಳುತ್ತಿದ್ದೇನೆಂದರೆ, ನಾವು ಬರೀ ಖರೀದಿ ಮಾಡತಕ್ಕಂತಾದ್ದು, ಅವನ್ನು ವರ್ಷಾನುಗಟ್ಟಲೇ ಉಪಯೋಗ ಮಾಡದೆ ಇರತಕ್ಕಂಥಾದ್ದು. ಇದರಿಂದ ಯಾವ ವಿಧವಾದ ಪ್ರಗತಿಯನ್ನೂ ಸಾಧನೆ ಮಾಡಲಿಕ್ಕೆ ಸಾಧ್ಯವಿಲ್ಲ. ಇವತ್ತಿನ ದಿವಸ ಎಲೆಕ್ಟ್ರಿಸಿಟಿ ಸಪ್ಲೈ ಇಲ್ಲದೆ ಮಿಶನರಿ ಎರೆಕ್ಷನ್ ಕೂಡ ಆಗಿಲ್ಲ, ಎರಡು ಸಾವಿರ ಲೂಮುಗಳಲ್ಲಿ 1,256 ಲೂಮುಗಳು ಕೆಲಸ ಮಾಡುವುದಿಲ್ಲ ಎಂದು ಹೇಳುವುದಾದರೆ, ಅದರ ಮೇಲೆ ಹಾಕಿದಂಥ ಹಣ ಎಷ್ಟು ಲುಕ್ಸಾನು ಆಯಿತು? ಇಂಡಸ್ಟ್ರಿಯಲ್ ಎಸ್ಟೇಟುಗಳ ಬಗ್ಗೆ ಹೇಳುವುದಾದರೆ, ನಿಮ್ಮ ಟಾರ್ಗೆಟ್ ಏನಿತ್ತೋ ಅದನ್ನು ಮುಟ್ಟಿಲ್ಲ. ಮೂರನೆ ಯೋಜನೆ ಅವಧಿಯೊಳಗೆ 50 ಇಂಡಸ್ಟ್ರಿಯಲ್ ಎಸ್ಟೇಟುಗಳೂ ಆಗುವುದಿಲ್ಲ. ನಮಗೆ ಅವುಗಳಿಂದ ಬರತಕ್ಕಂಥದ್ದು ರೂ. 1 ಲಕ್ಷ ಚಿಲ್ಲರೆ, ನಾವು 4.7 ಲಕ್ಷ ಚಿಲ್ಲರೆ ಬಡ್ಡಿ ಸೆಂಟ್ರಲ್ ಗವರ್ನ್‌ಮೆಂಟಿಗೆ ಕೊಡುತ್ತಾ ಇದ್ದೇವೆ. ಕೆಲವು ಇಂಡಸ್ಟ್ರಿಯಲ್ ಎಸ್ಟೇಟುಗಳನ್ನು ಕಟ್ಟಿ 156 ಶೆಡ್ಡುಗಳನ್ನು ಅಲಾಟ್ ಮಾಡಿದ್ದಾರೆ. ಅವುಗಳಲ್ಲಿ ಬಹುಭಾಗಕ್ಕೆ ಎಲೆಕ್ಟ್ರಿಸಿಟಿ ಸ ಪ್ಲೈ ಮಾಡಲಿಲ್ಲ. ಎಲೆಕ್ಟ್ರಿಸಿಟಿ ಸಪ್ಲೈ ಮಾಡಿದ ನಂತರವೆ ಬಡ್ಡಿ ಕೊಡಬೇಕು ಎಂಬ ನಿಯಮವಿದೆ ಎಂದು ಹೇಳುತ್ತಾರೆ. ಅಂದರೆ ಎಲೆಕ್ಟ್ರಿಸಿಟಿ ಒದಗಿಸುವವರೆಗೆ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿ ಲುಕ್ಸಾನು ಆಗುತ್ತದೆ. ನಮಗೆ ಬರತಕ್ಕಂಥ ಬಡ್ಡಿ 1 ಲಕ್ಷ ಚಿಲ್ಲರೆ, ನಾವು ಕೇಂದ್ರ ಸರಕಾರಕ್ಕೆ ಕೊಡತಕ್ಕಂಥ ಬಡ್ಡಿ 4 ಲಕ್ಷ ಚಿಲ್ಲರೆ, ಇಂಥ ವ್ಯವಹಾರ ಮಾಡುವುದಾದರೆ, ಸರಕಾರವೆ ನೋಡದೆ ಬರೀ ಅಧಿಕಾರಿಗಳ ಸೂಪರ್‌ವಿಶನ್ನಿಗೇ ಎಲ್ಲವನ್ನೂ ಬಿಡುವುದಾದರೆ ಸರಕಾರ ದಿವಾಳಿಯಾಗುವುದರಲ್ಲಿ ಏನೂ ಸಂಶಯವಿಲ್ಲ.

ರೂರಲ್ ಡೆವಲಪ್‌ಮೆಂಟಿಗೆ ಈ ಸಾರಿ 11 ಲಕ್ಷ ರೂಪಾಯಿ ಚಿಲ್ಲರೆ ಕೇಳಿದ್ದೀರಿ. ನ್ಯಾಷನಲ್ ರೂರಲ್ ವಾಟರ್ ಸಪ್ಲೈ ಸ್ಕೀಮಿಗೆ 1961-62ರಲ್ಲಿ ಸುಮಾರು 62 ಲಕ್ಷ ರೂಪಾಯಿ ಒದಗಿಸಿತ್ತು. ಅದರಲ್ಲಿ? 39.4 ಲಕ್ಷ ಖರ್ಚು ಮಾಡಿದ್ದೀರ, ಅಂದರೆ ಸಾಧಾರಣವಾಗಿ 37 ಲಕ್ಷ ರೂಪಾಯಿ ಉಳಿತಾಯವಾಗಿದೆ. ಹೀಗೆ ಆಯಾ ಕಾಲಕ್ಕೆ ಮಾಡಬೇಕಾದಂಥ ಕಾರ್ಯವನ್ನು ಮಾಡದೆ, ಅದನ್ನು ಮುಂದೂಡಿ ಹಣವನ್ನು ಉಳಿಸಿದ್ದೀರ.

Non-implementation of water supply schemes due to paucity of contractors. The amount spent is Rs. 39,41,000.

ಒದಗಿಸಿದ ಹಣ ಖರ್ಚು ಮಾಡದೆ ಇರತಕ್ಕಂಥ ಪರಿಸ್ಥಿತಿ ನೀವು ತಂದುಕೊಳ್ಳುವುದಾದರೆ, ಸರಕಾರ ಹಣದ ಬಗ್ಗೆ ನಿಗಾ ವಹಿಸುತ್ತಾ ಇಲ್ಲ ಅಂತ ಹೇಳಬೇಕೆ ವಿನಃ ಮತ್ತೆ ಇನ್ನು ಬೇರೆ ಮಾತೇ ಇಲ್ಲ.

ನಾನು ಇಷ್ಟು ಮಾತ್ರ ಹೇಳಿ ಮಾನ್ಯ ಆರ್ಥಿಕ ಮಂತ್ರಿಗಳನ್ನು ಕೇಳಿಕೊಳ್ಳುವುದು ಇಷ್ಟೆ. ಫಾರೆಸ್ಟ್ ಇಲಾಖೆಯಲ್ಲೂ ಸೇವಿಂಗ್ಸ್ ಇದೆ. ಕೆಲವು ಸ್ಕೀಮುಗಳು ಆಗಿಲ್ಲ. ಅನಿಮಲ್ ಹಸ್ಬೆಂಡರಿ ಇಲಾಖೆಯಲ್ಲಿಯೂ ಹಾಗೆಯೇ ಇದೆ. ಕಾಲಕಾಲಕ್ಕೆ ಕೆಲಸವನ್ನು ಮಾಡದಪಕ್ಷದಲ್ಲಿ, ಆ ಕಾರ್ಯ ಮುಂದೆ ಹೋಗುತ್ತಾ ಇರಲಿಲ್ಲ. ಹೆಚ್ಚು ಹಣದ ಕೊರತೆಯೂ ಆಗುತ್ತಾ ಇರಲಿಲ್ಲ. ನಾವು ಒಂದು ಯೋಜನೆಯನ್ನು ಮಾಡತಕ್ಕಂಥ ಕಾಲದಲ್ಲಿ, ಆ ಯೋಜನೆಯನ್ನು ಕಾರ್ಯಗತ ಮಾಡಲು ಬರೀ ಅಧಿಕಾರಿಗಳಿಗೇ ಬಿಡದೆ, ಮಂತ್ರಿಗಳು ಸ್ವತಃ ಆಸಕ್ತಿಯನ್ನು ವಹಿಸಬೇಕು; ಹೆಚ್ಚು ನಿಗಾವಹಿಸಬೇಕು. ಅದರಲ್ಲಿಯೂ ಆರ್ಥಿಕ ಮಂತ್ರಿಗಳು ಹೆಚ್ಚು ನಿಗಾ ವಹಿಸಬೇಕು.

ವ್ಯವಸಾಯದ ಇಲಾಖೆ ಇನ್ನೂ ಒಂದು ಮಾತು ಹೇಳಬೇಕೆಂದು ಬಯಸುತ್ತೇನೆ. ಕೇಂದ್ರ ಸರಕಾರದ ಮಂತ್ರಿಗಳು ಹೇಳುತ್ತಾರೆ: ಆಹಾರ ಉತ್ಪಾದನೆ ಕೆಲಸ ನನ್ನದಲ್ಲ, ರಾಜ್ಯ ಸರಕಾರದ್ದು ಅಂತ. ರಾಜ್ಯ ಸರಕಾರದಲ್ಲಿರತಕ್ಕಂಥ ಈ ಹೊಣೆಗಾರಿಕೆಯನ್ನು ಕೇಂದ್ರದ ಮೇಲೆ ಹಾಕುವುದಕ್ಕೆ ಸಾಧ್ಯವಿಲ್ಲ. ಅದನ್ನು ಈ ಸರಕಾರವೇ ನಿರ್ವಹಿಸಬೇಕು. ಲಕ್ಷಾಂತರ ರೂಪಾಯಿ ದುರ್ವಿನಿಯೋಗವಾಗುತ್ತಿದೆ. ಕೊಟ್ಟಿರತಕ್ಕಂಥ ಹಣ ಖರ್ಚಾಗದೆ ಉಳಿಯುತ್ತದೆ. ಹೀಗಾಗದಿರಲು ಸರಕಾರ ಹೆಚ್ಚು ನಿಗಾವಹಿಸತಕ್ಕಂಥ ಅವಶ್ಯಕತೆ ಇದೆ. ವ್ಯವಸಾಯ ಇಲಾಖೆ ದಕ್ಷತೆಯಿಂದ ಯೋಜನೆಗಳನ್ನು ಕಾರ್ಯಗತ ಮಾಡಬೇಕಾದರೆ, ಮಾನ್ಯ ಮಂತ್ರಿಗಳು ಅದಕ್ಕೆ ಏನಾದರೂ ಚಿಕಿತ್ಸೆ ಮಾಡಬೇಕು. ಆ ಇಲಾಖೆಯ ಮುಖ್ಯಾಧಿಕಾರಿಗಳಿಗೆ ಏನಾದರೂ ಚಿಕಿತ್ಸೆ ಮಾಡದೆಹೋದರೆ ಇನ್‌ಎಫಿಶಿಯನ್ಸಿ ಹೀಗೆಯೇ ಮುಂದುವರಿಯುತ್ತದೆ.

This itself is quite sufficient to prove that he is inefficient to hold the post.

*****

# ಕೃಷಿ ಉತ್ಪನ್ನಗಳ ದುರುಪಯೋಗ : ಒಂದು ಚರ್ಚೆ

12 ಮಾರ್ಚ್ 1976

**SRI K. YENKATAPPA. (Shikaripur).-** I call the attention of the Minister for Co-operation to the misappropriation in Taluk Agricultural Produce Marketing Society Ltd., Shikaripur.

**SRI K.H. RANGANATH (Minister for Cop-operation).-** I wish to make the following statement.-

The Shikaripur Taluk Agricultural Produce Co op. Marketing Society Ltd., Shikaripur was registered on 11th April 1949 as a Taluka Multipurpose Co operative Society and was converted into a Taluk Agricultural Produce Marketing Co operative Society Ltd., on 5th June 1958.

2. The Audit report of the accounts of the society for the year 1970-71 revealed several defects of a serious nature including alleged misappropriation of stocks in the Medical Section assessed at Rs. 6,657.41 alleged to have been committed by the Medical Section Salesman.

3. Besides, the Deputy Registrar of Co-operative Societies, Shimoga noticed disharmony between the Board of Management and the General Body of the Society, as also violation of provisions of the bye laws and unauthorised transactions coupled with lack of supervision and control, resulting in leavy loss. The General Body of the society at its meeting held on 30th October 1972 also resolved to rerquest the department to order an enquiry under section 64 of the Act. The Deputy Registrar of Cooperative Societies issued an order institutiing statutory enquiry into the constitution, working and financial conditions of the society on 4th May 1973, and appointed the special Auditor (procurement) Shimoga, as the Enquiry Officer. The enquiry report revealed that there is no clear case of misappropriation as such, but there are

cases of shortages of stocks and miss of authority. Some of the important findings are listed below;

(i) The Medical Section sustained loss to the extent of Rs. 7,363.61. The Salesman has been held responsible for the loss of Rs. 4,897.91 and the Committee of Management has been held responsible for Rs. 1,759.50

(ii) To proper records have been maintained in respect of hiring out of the lorry. The clerk in charge of this section is held responsible for making good an amount Rs. 3,312.20 actually shown as recoverable from various persors.

(iii) Heavy advances are outstanding from many persons and the management have failed to take timely action.

(iv) The Enquiry Officer has noticed heavy shortages and sale of some quantities of paddy without valid permits.

(v) The Secretary and Salesman have not exercised due diligence in handling sale of Iron and Steel allotted to the Society.

4. The Enquiry Officer has suggested fixing up of responsibility for the losses on the Boards of Directors and Secretary.

54. The following action has been taken:

(i) Rs. 4,488.50 have already been recovered from the concerned parties.

(ii) Arbitration cases have been filed.

(iii) Enquiry under C.C.A. Rules is held against the Secretary.

(iv) Civil action is initiated against the Procurement Committee regarding sales of paddy without valid permiits and other irregulatrities.

(v) Police complaint has been lodged against the following for unauthorised shortage of paddy:

(i) Shri B. Veerappa
(ii) Shri B. Koteshappa
(iii) Shri U. Basappa
(iv) Shri H.S. Nagendrappa

Action for holding the Board of Directors responsible for the ---- is under examination.

ಶ್ರೀ ಕೆ. ಯಂಕಟಪ್ಪ.- ಮಾನ್ಯ ಅಧ್ಯಕ್ಷರೇ, ಇಲ್ಲಿ "Heavy advances are outstanding from many persons and the Management have failed to take timely action." ಎಂದು ಹೇಳಿದ್ದಾರೆ. ಅಂದರೆ ಯಾರಯಾರದ್ದು ಔಟ್‌ಸ್ಟಾಂಡಿಂಗ್ ಇದೆ ಎಂಬುದನ್ನು ಹೇಳಬೇಕು. ಮುಂದೆ "The Enquiry Officer has noticed heavy shortages and sale of some quantities of paddy without valid permits" ಎಂದು ಇಲ್ಲಿ ಹೇಳಿದ್ದಾರೆ. ಅಂದರೆ ಎಷ್ಟು ಕ್ವಿಂಟಾಲ್ ಷಾರ್ಟೇಜ್ ಇತ್ತು ಮತ್ತು ವ್ಯಾಲಿಡ್ ಪರ್ಮೀಟ್ ಇಲ್ಲದೆ ಭತ್ತವನ್ನು ಎಲ್ಲಿಗೆ ಮಾರಾಟ ಮಾಡಿದ್ದಾರೆ ಎಂಬುದನ್ನು ತಿಳಿಸಬೇಕು. ಈ ವಿಚಾರದಲ್ಲಿ ಕ್ರಮ ತೆಗೆದುಕೊಳ್ಳಲು ಇಷ್ಟು ದಿವಸದವರೆಗೆ ತಡವಾಗುವುದಕ್ಕೆ ಕಾರಣವೇನು ?

ಶ್ರೀ ಕೆ.ಎಚ್. ರಂಗನಾಥ್.- 1969-70ರಲ್ಲಿ ಮತ್ತು 1970-71ರಲ್ಲಿ ಈ ರೀತಿ ಎರಡು ಸಲ 31,798-76 ರೂ. ಬೆಲೆ ಬಾಳುವ ಮತ್ತು 59,161-59 ರೂ. ಬೆಲೆ ಬಾಳುವ ಭತ್ತವನ್ನು ಕ್ರೆಡಿಟ್ ಸೇಲ್‌ನಲ್ಲಿ ಕೊಟ್ಟಿದ್ದಾರೆ.

ಶ್ರೀ ಕೆ. ಯಂಕಟಪ್ಪ.- ಇಲ್ಲಿ ಎನ್‌ಕ್ವೈರಿ ಆಫೀಸರ್ ಅವರು ಹೆವಿ-ಷಾರ್ಟೇಜ್ ಎಂದು ಹೇಳಿದ್ದಾರೆ. ಅಂದರೆ ಎಷ್ಟು ಪ್ರಮಾಣವನ್ನು ಮತ್ತು ವ್ಯಾಲಿಡ್ ಪರ್ಮಿಟ್ ಇಲ್ಲದೆ ಭತ್ತವನ್ನು ಎಲ್ಲಿಗೆ ಮಾರಾಟ ಮಾಡಿದ್ದಾರೆಂಬುದನ್ನು ತಿಳಿಸುತ್ತೀರಾ ?

ಶ್ರೀ ಕೆ.ಎಚ್. ರಂಗನಾಥ್.- ಎಲ್ಲಿಗೆ ಮಾರಾಟ ಮಾಡಿದ್ದಾರೆಂಬ ವಿವರ ಇಲ್ಲ; ಆದರೆ ವ್ಯಾಲಿಡ್ ಪರ್ಮಿಟ್ ಇಲ್ಲದೆ ಒಂದು ಸಲ 1007 ಕ್ವಿಂಟಾಲ್ ಅಕ್ಕಿಯನ್ನು ಮತ್ತೊಂದು ಸಲ ಎರಡು ಸಾವಿರ ಕ್ವಿಂಟಾಲ್ ಭತ್ತಕ್ಕೆ ಸಮನಾಗುವಷ್ಟು ಅಕ್ಕಿಯನ್ನು ಮಾರಾಟ ಮಾಡಿದ್ದಾರೆಂದು ತಿಳಿದುಬಂದಿದೆ. ಇದಕ್ಕೆ ಶ್ರೀ ಎಚ್.ಎಸ್. ನಾಗೇಂದ್ರಪ್ಪ ಎಂಬುವರನ್ನು ಜವಾಬ್ದಾರರನ್ನಾಗಿ ಮಾಡಲಾಗಿದೆ.

ಶ್ರೀ ಕೆ. ಯಂಕಟಪ್ಪ.- ವ್ಯಾಲಿಡ್ ಪರ್ಮಿಟ್ ಇಲ್ಲದೆ ಪ್ರೊಕ್ಯೂರ್‌ಮೆಂಟ್ ಕಮಿಟಿಯವರು ಭತ್ತವನ್ನು ಕೇರಳಾಕ್ಕೆ ತೆಗೆದುಕೊಂಡು ಹೋಗಿ ಮಾರಿದ್ದಾರೆಂದು ನಮಗೆ ತಿಳಿದುಬಂದಿದೆ. ಈ ರೀತಿ ಪರ್ಮಿಟ್ ಇಲ್ಲದೆ ಮಾರಾಟ ಮಾಡಿದ್ದಕ್ಕೆ ಮತ್ತು ಹೆವಿ-ಷಾರ್ಟೇಜ್ ಆಗಿರುವ ವಿಚಾರದಲ್ಲಿ ತಕ್ಷಣದಲ್ಲಿ ಏನು ಕ್ರಮ ತೆಗೆದುಕೊಂಡಿದ್ದೀರಿ? ಇಲ್ಲಿ Police Complaint has been lodged against the following for unauthorised shortage of Paddy.

(i) Shri B. Veerappa
(ii) Shri R. Koteshappa
(iii) Shri U. Basappa
(iv) Shri H.S. Nagendrappa"

ಎಂದು ಹೇಳಿದ್ದೀರಿ. ಅಂದರೆ ಪೋಲೀಸ್ ಕಂಪ್ಲೇಂಟ್ ಆಗಿ ಎಷ್ಟು ದಿವಸವಾಯಿತು? ಇಲ್ಲಿಯವರೆಗೆ ಇದರ ಬಗ್ಗೆ ಪೋಲೀಸಿನವರು ಕ್ರಮ ತೆಗೆದುಕೊಳ್ಳದಿರಲು ಕಾರಣವೇನು? ಇದರ ಬಗ್ಗೆ ವಿಚಾರಣೆ ನಡೆಸಲು ತಕ್ಷಣದಲ್ಲಿ ಏನು ವ್ಯವಸ್ಥೆ ಮಾಡಿದ್ದೀರಿ?

ಶ್ರೀ ಕೆ.ಎಚ್. ರಂಗನಾಥ್.- ವ್ಯಾಲಿಡ್ ಪರ್ಮಿಟ್ ಇಲ್ಲದೆ ಯಾರಿಗೆ ಮಾರಾಟ ಮಾಡಿದ್ದಾರೆಂಬ ವಿವರ ಈಗ ಇಲ್ಲ ಎಂದು ಆಗಲೇ ಹೇಳಿದೆ. ಮತ್ತು ಪೋಲೀಸಿನವರು ಕ್ರಮ ಕೈಕೊಳ್ಳಲು ನಿಧಾನವಾಗುವುದಕ್ಕೆ ಕಾರಣವೇನು ಎಂದು ಕೇಳಿದ್ದಾರೆ; ಆದರೆ ಸಾಮಾನ್ಯವಾಗಿ ಪೋಲೀಸಿನವರ ಇಂತಹ ಸಂದರ್ಭಗಳಲ್ಲಿ ತಕ್ಷಣದಲ್ಲಿ ಕ್ರಮ ಕೈಕೊಳ್ಳುವುದಕ್ಕಾಗುವುದಿಲ್ಲ; ಇನ್‌ವೆಸ್ಟಿಗೇಷನ್ ಮಾಡಲು ಸ್ವಲ್ಪ ಕಾಲಾವಕಾಶ ಬೇಕಾಗುತ್ತದೆ.

ಶ್ರೀ ಕೆ. ಯಂಕಟಪ್ಪ.- ಪೋಲೀಸ್ ಕಂಪ್ಲೇಂಟ್ ಯಾವಾಗ ಆಗಿದೆ, ಮತ್ತು ನಿಧಾನವಾಗಲು ಕಾರಣವೇನು?

ಶ್ರೀ ಕೆ.ಎಚ್. ರಂಗನಾಥ್.- ತಕ್ಷಣದಲ್ಲಿ ಕ್ರಮ ಕೈಕೊಳ್ಳುತ್ತೇವೆ.

*****

# ಕೊಳವೆ ಬಾವಿಗಳಿಗೆ ಸಬ್ಸಿಡಿ

9 ಏಪ್ರಿಲ್ 1970

ಶ್ರೀ ಕೆ.ಎಚ್. ರಂಗನಾಥ್.– ಸ್ವಾಮಿ, ಈಗಾಗಲೇ 4 ರೆವಿನ್ಯೂ ಡಿವಿಜನ್‌ಗಳಲ್ಲಿ ಕೂಡ 4 ಕಾರ್ಪೋರೇಷನ್‌ಗಳನ್ನು ಮಾಡಬೇಕು ಎಂದು ಇದ್ದು, ಮಾನ್ಯ ಸದಸ್ಯರು ಏನು ಅಭಿಪ್ರಾಯವನ್ನು ವ್ಯಕ್ತಿಪಡಿಸುತ್ತಿದ್ದಾರೆ. ಆ ರೀತಿ ಕೊಳವೆ ಬಾವಿಗಳನ್ನು ಮಾಡಿ ಸರ್ಕಾರವೇ ನೀರಿನ ಅನುಕೂಲತೆ ಇಲ್ಲದೇ ಇರತಕ್ಕ ಪ್ರದೇಶಗಳಲ್ಲಿ, ಬರಗಾಲಕ್ಕೆ ತುತ್ತಾಗತಕ್ಕ ಪ್ರದೇಶಗಳಲ್ಲಿ ನೀರನ್ನು ಒದಗಿಸತಕ್ಕದ್ದು, ಬೆಟರ್‌ಮೆಂಟ್ ಲೆವಿ ವಸೂಲು ಮಾಡುವ ಹಾಗೆ ಇದಕ್ಕೂ ವಸೂಲು ಮಾಡತಕ್ಕಂಥಾದ್ದು, ತನ್ಮೂಲಕ, ರೈತ ಐ.ಪಿ. ಸೆಲ್ ತೆಗೆದುಕೊಳ್ಳುವುದಕ್ಕೆ ಪಿ.ಎಲ್.ಡಿ. ಬ್ಯಾಂಕ್ ಮುಖಾಂತರ ಸಾಲ ತೆಗೆದುಕೊಂಡು ಸಾಲಗಾರನಾಗುವುದನ್ನು ತಪ್ಪಿಸಬೇಕು ಎಂದು ಸರ್ಕಾರ ವಿಚಾರ ಮಾಡುತ್ತಿದೆ. ಅಷ್ಟೇ ಅಲ್ಲ ಇದು ಆದಷ್ಟು ಶೀಘ್ರವಾಗಿ ಅಂದರೆ 2-3 ತಿಂಗಳಲ್ಲಿ ಕಾರ್ಯಗತವಾಗುವಷ್ಟು ತೀವ್ರ ಪರಿಸ್ಥಿತಿಯಲ್ಲಿದೆ. ಮಾನ್ಯ ಸದಸ್ಯರ ತೀವ್ರತೆಯನ್ನು ಈಗಾಗಲೇ ಸರ್ಕಾರ ಅರಿತಿದೆ ಎಂದು ಹೇಳಲಿಕ್ಕೆ ಇಷ್ಟಪಡುತ್ತೇನೆ.

ಶ್ರೀ ಎಚ್.ಡಿ. ದೇವೇಗೌಡ.– ಕಮ್ಯುನಿಟಿ ಇರಿಗೇಷನ್ ವೆಲ್ಸ್ ಕಾರ್ಯಕ್ರಮವನ್ನು ರಾಜ್ಯ ಸರ್ಕಾರ ಕಾರ್ಯಗತ ಮಾಡುವುದಾದರೆ ಹೆಚ್ಚು ಹಣವನ್ನು ತುಂಬುತ್ತೇವೆ ಎಂದು ಕೇಂದ್ರ ಸರ್ಕಾರದವರು ಈಗಾಗಲೇ ಹೇಳಿದ್ದಾರೆ. ನೀವು ಕಾರ್ಪೋರೇಷನ್‌ಗಳನ್ನು ಮಾಡುವುದಕ್ಕೆ 3 ತಿಂಗಳು ಬೇಕಾಗಿಲ್ಲ.

ಶ್ರೀ ಕೆ.ಎಚ್. ರಂಗನಾಥ್.– ಇದಕ್ಕೆ ಕೆಲವು ತೊಂದರೆಗಳಿವೆ, ಇದನ್ನು ಹೇಗೆ ಮಾಡಬೇಕು ಎನ್ನುವುದು ಇದೆ. ಕೇಂದ್ರ ಸರ್ಕಾರದಿಂದ ಸಬ್ಸಿಡಿ ಬರತಕ್ಕ ಬಗ್ಗೆ ಸರ್ಕಾರ ವಿಚಾರ ಮಾಡಿದೆ, ಮಾಡಿಲ್ಲ ಎಂದು ಅಲ್ಲ. ಅವರ ಪೂರ್ಣ ಪ್ರಯೋಜನ ಪಡೆದುಕೊಳ್ಳಬೇಕು ಎಂದು ಸರ್ಕಾರ ಈಗಾಗಲೇ ವಿಚಾರ ಮಾಡಿದೆ. ಅದನ್ನು ಒಂದು ವರ್ಷದಿಂದ ಯೋಚನೆ ಮಾಡುತ್ತಿದೆ. ಬಾವಿ ಹೇಗೆ ತೆಗೆಯಬೇಕು ಇದೆಲ್ಲಾ ಯೋಚನೆ ಮಾಡಬೇಕಾಗುತ್ತದೆ. ಮಾನ್ಯ ದೇವೇಗೌಡರಿಗೆ ಗೊತ್ತಿದೆ, ಹಿಂದೆ ಕಮ್ಯುನಿಟಿ ವೆಲ್ಲನ್ನು ತೆಗೆದಾಗ ಒಬ್ಬನೇ ಅದನ್ನು ಬಳಸಿಕೊಂಡದ್ದು ಕೂಡ ಉಂಟು. ಅದು ಆಗದೇ ಇರತಕ್ಕ ರೀತಿಯಲ್ಲಿ ಕಾಂಟೂರ್ ಯಾವು ಯಾವುದೊ ಜಿಯಾಲಜಿಕಲ್ ಸರ್ವೆ ಈಗಾಗಲೇ ಆಗಿದೆ, ಬಾವಿ ತೆಗೆಯುವುದಕ್ಕೆ ಸಾಧ್ಯ, ಓಪನ್ ವೆಲ್ಸ್ ತೆಗೆಯುವುದಕ್ಕೆ ಸಾಧ್ಯ, ಎಷ್ಟು ಪ್ರದೇಶ ನೀರಾವರಿಗೆ ಬರುತ್ತದೆ ಎನ್ನತಕ್ಕ ಅಂಕಿಅಂಶಗಳನ್ನು ಸರ್ಕಾರ ಸಂಗ್ರಹಣೆಮಾಡಿದೆ, ಕೇವಲ ಒಂದೆರಡು ತಿಂಗಳಲ್ಲಿ ಆ ಕಾರ್ಯ ಪ್ರಾರಂಭವಾಗುತ್ತದೆ.

ಕೇಂದ್ರ ಸರ್ಕಾರ ಕೊಡತಕ್ಕ ನೆರವನ್ನು ನಾವು ಉಪಯೋಗ ಮಾಡಿಕೊಳ್ಳಬೇಕು ಎಂದು ಇದ್ದೇವೆ. ಮಾನ್ಯ ಸದಸ್ಯರಿಗೆ ಗೊತ್ತಿದೆ. 1972 ರಲ್ಲಿ ನ್ಯಾಷನಲ್ ಹೈವೇ, ರೂರಲ್ ವಾಟರ್ ಸಪ್ಲೈ ಸ್ಕೀಮಿಗೆ ಕೇಂದ್ರದ ನೆರವನ್ನು ಉಪಯೋಗ ಮಾಡಿಕೊಳ್ಳದೇ ಇದ್ದುದರಿಂದ ತೊಂದರೆಗೆ ಈಡಾಗಿದ್ದೇವೆ. ಆದುದರಿಂದ ಈಗ ಕೇಂದ್ರ ಸರ್ಕಾರ ಕೊಡತಕ್ಕ ನೆರವನ್ನು ಪೂರ್ಣವಾಗಿ ಉಪಯೋಗ ಮಾಡಿಕೊಳ್ಳುವುದಕ್ಕೆ ಎಲ್ಲಾ ರೀತಿಯ ಕಾರ್ಯಕ್ರಮ ಸರ್ಕಾರ ತೆಗೆದುಕೊಳ್ಳತಕ್ಕಂಥಾಗಿದೆ.

*****

## ಕೃಷಿ ವಿಕ್ರಮ: ಒಂದು ಸುದೀರ್ಘ ಚರ್ಚೆ

15 ಮೇ 1979

**ಶ್ರೀ ಕೆ.ಹೆಚ್. ರಂಗನಾಥ್** (ಕೃಷಿ ಹಾಗೂ ಸಂಸದೀಯ ವ್ಯವಹಾರಗಳ ಸಚಿವರು):- ಸನ್ಮಾನ್ಯ ಅಧ್ಯಕ್ಷರೇ, ನಿನ್ನೆ ಮತ್ತು ಶುಕ್ರವಾರದಿಂದ ಈ ಸದನದ ಮಾನ್ಯ ಸದಸ್ಯರುಗಳು ಅದರಲ್ಲಿಯೂ ಕೂಡ ವ್ಯವಸಾಯದಲ್ಲಿ ಆಸಕ್ತಿಯುಳ್ಳ ಸದಸ್ಯರು ಹಲವಾರು ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. ನಮ್ಮ ಟಿ.ಆರ್. ಶಾಮಣ್ಣನವರು ಇಲ್ಲಿ ಇಲ್ಲ; ಅವರು, ಈ ಬೇಡಿಕೆಯ ಬಗ್ಗೆ ಕಟ್‌ಮೋಷನ್‌ಗಳನ್ನು ಕಳುಹಿಸಿ ತಮ್ಮ ಮೂಲಕ ಕೆಲವು ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. ಬಹಳ ಮಟ್ಟಿಗೆ ವಿರೋಧಿ ಸದಸ್ಯರು ಈ ವಿಚಾರಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡು ಪ್ರಸ್ತಾಪ ಮಾಡಿದ್ದಾರೆಂದು ಹೇಳಿದರೆ ತಪ್ಪಾಗಲಾರದೆಂದು ನಾನಾದರೂ ಭಾವಿಸುತ್ತೇನೆ.

ಇವತ್ತು ಭಾಷಣವನ್ನು ಪ್ರಾರಂಭಮಾಡಿದಂತಹ ಮಾನ್ಯ ವೈ. ರಾಮಕೃಷ್ಣ ಅವರು ಕೆಲವಾರು ಮಾತುಗಳನ್ನು ಆಡಿದ್ದಾರೆ. ವ್ಯವಸಾಯದ ಕ್ರಮದಲ್ಲಿ ಸರ್ಕಾರ ವಿಮುಖವಾಗಿದೆ, ಈ ಕೃಷಿ ಇಲಾಖೆಯಲ್ಲಿ ಜಡತ್ವ ಇದೆ, ಈ ಇಲಾಖೆ ಹೊಣೆಗಾರಿಕೆಯಿಂದ ಕೆಲಸ ಮಾಡುತ್ತಿಲ್ಲ, ಈ ಇಲಾಖೆಯಲ್ಲಿ ಉತ್ಸಾಹ ಇಲ್ಲ ಹಾಗೆ ಅಂತ ಹೇಳುತ್ತಾ, ಮತ್ತೆ ಉತ್ಪಾದನೆ ಕಡಿಮೆಯಾಗಿದೆ ಎಂದು ಹೇಳುವ ಮಟ್ಟಿಗೂ ಕೂಡ ಅವರು ಹೋದರು. ವ್ಯವಸಾಯದಲ್ಲಿ ಉತ್ಪಾದನೆಯ ಮಟ್ಟ ಯಾವ ದಾರಿಯಲ್ಲಿದೆಯೆಂಬುದು ಮಾನ್ಯ ಸದಸ್ಯರಿಗೆ ಒದಗಿಸಿರತಕ್ಕ ಒಂದು ಸಣ್ಣ ವರದಿ ಏನಿದೆ ಅದನ್ನು ನೋಡಿದರೆ ಗೊತ್ತಾಗುತ್ತದೆ. ನಾನು ವರದಿಯಲ್ಲಿರತಕ್ಕ ಅಂಕಿ ಅಂಶಗಳನ್ನು ಹೇಳುತ್ತಾ, ಈ ಸದನದ ಸಮಯವನ್ನು ಹೆಚ್ಚು ತೆಗೆದುಕೊಳ್ಳುವುದಕ್ಕೆ ಇಷ್ಟಪಡುವುದಿಲ್ಲ.

1956-57ರಿಂದ 1978-1979ರ ವರೆಗಿನ ಅಂಕಿಅಂಶಗಳನ್ನು ತಾವು ನೋಡುವುದಾದರೆ ನಾವು ಪ್ರಗತಿಯ ಹಾದಿಯಲ್ಲಿದ್ದೇವೆಂಬುದನ್ನು ಈ ಅಂಕಿ ಅಂಶಗಳು ತೋರಿಸಿಕೊಡುತ್ತಿವೆ. ಆದ್ದರಿಂದ ಜಡತ್ವದ ಪ್ರಶ್ನೆಯಾಗಲೀ ಹೊಣೆಗಾರಿಕೆಯಿಲ್ಲದೇ ಇರತಕ್ಕ ಪ್ರಶ್ನೆಯಾಗಲೀ, ಇಲಾಖೆ ಅಧಿಕಾರಿಗಳಲ್ಲಿ ಉತ್ಸಾಹ ಇಲ್ಲದೇ ಇರತಕ್ಕ ಪ್ರಶ್ನೆಯಾಗಲೀ ಉದ್ಭವಿಸುವುದಿಲ್ಲ. ಆದ್ದರಿಂದ ಈ ವಿಚಾರದಲ್ಲಿ ಸಕಾರಣ ಇಲ್ಲ ಎನ್ನುವ ಮಾತನ್ನು ನಾನಾದರೂ ಕೂಡ ಹೇಳುವುದಕ್ಕೆ ಇಷ್ಟಪಡುತ್ತೇನೆ. ನಮ್ಮಲ್ಲಿ ಎಕರೆವಾರು ಇಳುವರಿ ಕೂಡ ಉತ್ಪಾದನೆ ಜಾಸ್ತಿಯಾಗಿದೆ. ಉತ್ಪಾದನೆ ಜಾಸ್ತಿಯಾಗುವಾಗ, ಬೇರೆ ಹೆಚ್ಚು ಪ್ರದೇಶವನ್ನು ನಾವು ಉಪಯೋಗಮಾಡಿಕೊಂಡು ಉತ್ಪಾದನೆ ಜಾಸ್ತಿ ಮಾಡಿದ್ದೇವೆಂದು ನಾನು ಹೇಳುವುದಕ್ಕೆ ತಯಾರಿಲ್ಲ. ಹೆಚ್ಚು ಪ್ರದೇಶ ಬಂದಿದೆ. ಆದರೂ ಕೂಡ, ಎಕರೆವಾರು ಇಳುವರಿ ಉತ್ಪಾದನೆ ಏನಿದೆ ಅದು ಹೆಚ್ಚಾಗಿದೆ. ನಾವು ಒದಗಿಸಿರತಕ್ಕ ಅಂಕಿ ಅಂಶಗಳನ್ನು ತಾವು ಸೂಕ್ಷ್ಮವಾಗಿ ಪರಿಶೀಲನೆ ಮಾಡುವುದಾದರೆ ತಮಗೆ ತಿಳಿಯುತ್ತದೆ. 1956-57ರಲ್ಲಿ 41

ಕೆ.ಜಿ. ಇದ್ದುದು, 1978-79ರ ಹೊತ್ತಿಗೆ 1,666 ಕೆ.ಜಿ.ಗೆ ಏರಿದೆ. ಅದರಲ್ಲೂ ಕೂಡ ಭತ್ತ ಅಥವಾ ಅಕ್ಕಿ 1190 ಕೆ.ಜಿ.ಯಿಂದ 2009 ಕೆ.ಜಿ.ಗೆ ಹೋಗಿದೆ. ರಾಷ್ಟ್ರದಲ್ಲಿ ತಮಿಳುನಾಡಿನಲ್ಲಿ ಜಾಸ್ತಿ ಇತ್ತು ಎನ್ನುವ ವಾದ ಇತ್ತು.

ಇವತ್ತು ಕರ್ನಾಟಕದಲ್ಲಿ ವಿಕ್ರಮ ಸಾಧಿಸಿದ್ದೇವೆ. ಇದು ಮೆಚ್ಚತಕ್ಕ ವಿಚಾರ ಎಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಈ ಕೆಲಸ ಮಾಡುವಾಗ ರೈತರು ಇದಕ್ಕೆ ಸಹಕಾರ ಮಾಡಿದ್ದಾರೆ, ಇಲಾಖೆಯ ಅಧಿಕಾರಿಗಳು ಸಹಾಯ ಮಾಡಿದ್ದಾರೆ, ಸರ್ಕಾರ ಕೂಡ ರೈತರ ಬೇಡಿಕೆಗಳ ಬಗ್ಗೆ, ಅವರ ತೊಂದರೆಯ ಬಗ್ಗೆ, ಗೊಬ್ಬರದ ಬಗ್ಗೆ, ಸಾಲದ ಬಗ್ಗೆ ಅನುಕೂಲ ಒದಗಿಸಿದೆಯೆಂದು ಹೇಳುವುದಕ್ಕೆ ಇಚ್ಛಿಪಡುತ್ತೇನೆ. ಮತ್ತೆ ವಿಶ್ವವಿದ್ಯಾನಿಲಯದವರು ಕೂಡ ಒಳ್ಳೆಯ ಇಳುವರಿ ಬರತಕ್ಕ ತಳಿಗಳನ್ನು ಕಂಡುಹಿಡಿದು, ಅದರ ಬಗ್ಗೆ ಹೆಚ್ಚಿನ ಪ್ರಸಾರ ಮಾಡಿದ್ದಾರೆಂದು ಹೇಳಿದರೆ ತಪ್ಪಾಗಲಾರದು. ಈ ದೃಷ್ಟಿಯಿಂದ ನೋಡುವಾಗ ಹೆಚ್ಚು ಇಳುವರಿ ಆಗಿರುವುದರಿಂದ, ಮಾತನಾಡಿದಂಥ ಎಲ್ಲಾ ಸದಸ್ಯರು ಇವತ್ತು ಆಹಾರದ ಬೆಲೆಗಳು ನಾವು ಏನು ಖರ್ಚುಮಾಡುತ್ತೇವೆ ಆ ಖರ್ಚಿಗೆ ಅನುಕೂಲವಾಗಿಲ್ಲವೆನ್ನುವುದನ್ನು ಹೇಳಿದ್ದಾರೆ. ಗಂಗಾಧರನ್‌ರವರು ಮಾನ್ಯ ಮುಖ್ಯಮಂತ್ರಿಗಳು ಕೇಂದ್ರದ ಸಭೆಯಲ್ಲಿ ಮಾಡಿದ ಭಾಷಣದ ಉಲ್ಲೇಖವನ್ನು ಮಾಡಿದ್ದಾರೆ. ಅಂದರೆ, ಈ ಕಡೆಯವರಾಗಿರಲಿ, ಆ ಕಡೆಯವರಾಗಿರಲಿ ರೈತನಿಗೆ ಒಳ್ಳೆಯ ಬೆಲೆಯನ್ನು ಕೊಡಿಸಬೇಕೆನ್ನುವುದರಲ್ಲಿ ಭಿನ್ನಾಭಿಪ್ರಾಯವಿಲ್ಲ ಎನ್ನುವುದನ್ನು ಸ್ಪಷ್ಟಪಡಿಸುತ್ತೇನೆ. ವಿರೋಧಪಕ್ಷದವರ ಅಭಿಪ್ರಾಯ ಅಷ್ಟೇಅಲ್ಲ, ಆಡಳಿತಪಕ್ಷದವರ ಅಭಿಪ್ರಾಯ ಕೂಡ ಒಂದೇ ಆಗಿದೆ. ಆಹಾರಧಾನ್ಯಗಳನ್ನು ಹೆಚ್ಚು ಬೆಳೆಯಬೇಕು. ಇದರಿಂದ ರಾಜ್ಯದ ಆರ್ಥಿಕ ಪರಿಸ್ಥಿತಿ ಉತ್ತಮವಾಗಬೇಕು ಎನ್ನುವ ವಿಚಾರದಲ್ಲಿ ಕೂಡ ಬಿನ್ನಾಭಿಪ್ರಾಯವಿಲ್ಲವೆಂದು ನಾನಾದರೂ ಭಾವಿಸುತ್ತೇನೆ. ಆದರೆ ಕೆಲವಾರು ವಿಚಾರಗಳಲ್ಲಿ ಇನ್ನು ಇಲಾಖೆ ಹೆಚ್ಚು ಕೆಲಸ ಮಾಡಬೇಕು ಎಂದು ಏನು ಸಲಹೆಗಳನ್ನು ಕೊಟ್ಟಿದ್ದಾರೆ, ಅವುಗಳನ್ನು ನಾನು ಸ್ವಾಗತ ಮಾಡುತ್ತೇನೆ.

ಇವತ್ತು ತಮಿಳುನಾಡಿನಲ್ಲಿ ಒಂದು ಹೆಕ್ಟೇರಿಗೆ 2898 ಕೆ.ಜಿ. ಉತ್ಪಾದನೆ ಮಾಡಿದರೆ, ಕರ್ನಾಟಕದಲ್ಲಿ 3141 ಕೆ.ಜಿ. ಇಳುವರಿ ಬರತಕ್ಕ ಭತ್ತವನ್ನು ಸಾಧನೆ ಮಾಡಿದ್ದೇವೆ. ಇದು ದೊಡ್ಡ ಸಾಧನೆ. ಮತ್ತೆ ಇವತ್ತು ನೀರಾವರಿ ಅನುಕೂಲ 1972-73ರಲ್ಲಿ 13 ಪರ್ಸೆಂಟ್ ಇದ್ದುದು 20 ಪರ್ಸೆಂಟ್ ಆಗಿದೆ. ಇದಕ್ಕೆ ಸಂಬಂಧಪಟ್ಟಂತ ಸಮಸ್ಯೆಗಳು ಕೂಡ ದೊಡ್ಡದಾಗುತ್ತವೆಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು.

ಭೂಸಾರ ರಕ್ಷಣೆ ಸಂಬಂಧದಲ್ಲಿ ಮಾತನಾಡುತ್ತಾ, ಭೂಮಿ ಚೌಳಾಗತಕ್ಕ ವಿಚಾರವನ್ನು ಪ್ರಸ್ತಾಪ ಮಾಡಿದ್ದಾರೆ. ನೀರಾವರಿ ಪ್ರದೇಶಗಳಲ್ಲಿ ಅದರಲ್ಲಿಯೂ ಕೂಡ ಕಪ್ಪು ಭೂಮಿ ಇರತಕ್ಕ ಪ್ರದೇಶಗಳಲ್ಲಿ ನೀರಿನ ಅನುಕೂಲಗಳನ್ನು ಮಾಡಿದ್ದೇವೆ. ಆದರೂ ಸುಮಾರು 256 ಲಕ್ಷ ಎಕರೆ ಚೌಳು ಪ್ರದೇಶ ಬರುವುದನ್ನು ಇಲ್ಲಿ ಕಾಣುತ್ತೇವೆ. ಇದು ಒಂದು ದೊಡ್ಡ

ಬೃಹತ್ ಪ್ರಮಾಣದಲ್ಲಿರತಕ್ಕ ಸಮಸ್ಯೆ. ಇದನ್ನು ಪರಿಹಾರ ಮಾಡಬೇಕು. ಇಲಾಖೆಯವರ ತಜ್ಞರ ಅಭಿಪ್ರಾಯದ ಪ್ರಕಾರ 1 ಎಕರೆಗೆ 2 ಸಾವಿರ ರೂಪಾಯಿ ಖರ್ಚು ಮಾಡಬೇಕಾಗುತ್ತದೆಂದು ಹೇಳುತ್ತಾರೆ. ನಮ್ಮ ಇಲಾಖೆಯವರ ಒಂದು ಸಣ್ಣ ಅಂದಾಜು ಪ್ರಕಾರ 20 ಸಾವಿರ ಎಕರೆ ಚೌಳು ಆಗಿರತಕ್ಕ ಭೂಮಿಯನ್ನು ಸರಿ ಮಾಡಲಿಕ್ಕೆ 13 ಕೋಟಿ ರೂಪಾಯಿ ಬೇಕಾಗುತ್ತದೆಂದು ಒಂದು ರಿಪೋರ್ಟ್ ಮಾಡಿ ಕಾರ್ಯಕ್ರಮ ಹಾಕಿಕೊಂಡಿದ್ದಾರೆ. 600 ಹೆಕ್ಟೇರ್ ವ್ಯವಸ್ಥೆ ಮಾಡುವುದಕ್ಕೆ 28 ಲಕ್ಷ ರೂಪಾಯಿ ಹಣ ಇಟ್ಟಿರುವುದನ್ನು ನೋಡುತ್ತೇವೆ. ಈಗ ನೀರಾವರಿ ವ್ಯವಸ್ಥೆ ಮಾಡಿದಾಕ್ಷಣ ಆಯಿತು ಎಂದಲ್ಲ. ಅದಕ್ಕೆ ಸಂಬಂಧಪಟ್ಟಂತೆ ಬೇಕಾದಷ್ಟು ಇದೆ.

ಮಾನ್ಯ ಸದಸ್ಯರು ಗೊಬ್ಬರದ ಬೆಲೆ ಬಗ್ಗೆ ಮಾತನಾಡಿದರು. ಅದರ ಬೆಲೆ ಜಾಸ್ತಿಯಾಗಿದೆ ಎಂದು ಅಂಕಿ ಅಂಶದ ಪ್ರಕಾರ ನೋಡಬಹುದು. ಮಾನ್ಯ ಸದಸ್ಯರಾದ ರಾಮಕೃಷ್ಣ ಅವರು ಸಣ್ಣ ಹಿಡುವಳಿದಾರರ ಬಗ್ಗೆ, ಬಂಜರು ಭೂಮಿಗಳ ಬಗ್ಗೆ ಪ್ರಸ್ತಾಪ ಮಾಡಿದರು. ಕೆಲವು ದಿವಸಗಳ ಹಿಂದೆ ನಮ್ಮ ಬೆಂಗಳೂರಿನ ಡಿವಿಜನ್ ಆಫೀಸಿನ ಅಧಿಕಾರಿಗಳನ್ನು ಕರೆದು ಮೀಟಿಂಗ್ ನಡೆಸಿ ಸಮಸ್ಯೆಗಳನ್ನು ಪ್ರಸ್ತಾಪ ಮಾಡಿದೆವು. ಇವೊತ್ತು ವ್ಯವಸಾಯ ಭೂಮಿಯಲ್ಲಿ ಬಂದಿರತಕ್ಕದ್ದು ಬೆಂಗಳೂರು ಜಿಲ್ಲೆಯಲ್ಲಿ 44,185 ಹೆಕ್ಟೇರ್, ಕೋಲಾರ 49,613 ಹೆಕ್ಟೇರ್, ತುಮಕೂರು 1,14,982 ಹೆಕ್ಟೇರ್, ಚಿತ್ರದುರ್ಗ 1,72,424 ಹೆಕ್ಟೇರ್, ಶಿವಮೊಗ್ಗ 12,100 ಹೆಕ್ಟೇರ್. ನಾನ್ ಅವೇಲಬಲ್ ಫಾರ್ ಕಲ್ಟಿವೇಷನ್ ಫಾರೆಸ್ಟ್ ಹೀಗೆ ಎಲ್ಲಾ ಬಿಟ್ಟು ಫಾಲೋ ಲ್ಯಾಂಡ್ ಮಾತ್ರ ಪ್ರಸ್ತಾಪ ಮಾಡುತ್ತಿದ್ದೇವೆ. ಮಾನ್ಯ ಸದಸ್ಯರಾದ ರಾಮಕೃಷ್ಣ ಅವರು, ಚೌಡಯ್ಯ ಅವರು, ಬಸಪ್ಪನವರು ಪ್ರಸ್ತಾಪ ಮಾಡಿ ಬಂಜರು ಭೂಮಿಯ ಬಗ್ಗೆ ಸಂಶೋಧನೆ ನಡೆಸಬೇಕು ಎಂದು ಹೇಳಿದರು. ಈಗ ನೂರಕ್ಕೆ ಇಪ್ಪತ್ತರಷ್ಟು ನೀರಾವರಿ ಮಾಡಿದ್ದೇವೆ. ಹೆಚ್ಚು ಹೆಚ್ಚು ಶ್ರಮಪಟ್ಟರೆ ಶೇಕಡ 40ರಷ್ಟು ಹೋದರೆ ಹೆಚ್ಚಾಗಬಹುದು. ಇದರ ಬಗ್ಗೆ ನನ್ನ ಹತ್ತಿರ ಅಂಕಿ ಅಂಶ ಇದೆ. ನಾನು ಹೆಚ್ಚು ಸಮಯ ತೆಗೆದುಕೊಂಡು ಪ್ರಸ್ತಾಪ ಮಾಡಲಿಕ್ಕೆ ಹೋಗುವುದಿಲ್ಲ. ಇಂತಹ ಪರಿಸ್ಥಿತಿ ಇರುವಾಗ 50ಕ್ಕೂ ಹೆಚ್ಚು ಭಾಗ ಭೂಮಿಯನ್ನು ಒಣ ವ್ಯವಸಾಯಕ್ಕೆ ಬಳಸಬೇಕಾಗುತ್ತದೆ. ಇದಕ್ಕೆ ಬಳಸುವಾಗ ಅದರ ಬಗ್ಗೆಯೂ ಕೂಡ ಗಮನಹರಿಸಬೇಕಾಗುತ್ತದೆ. ಅಲ್ಲಿಯೂ ಕೂಡ ಗೊಬ್ಬರದ ಬಳಕೆ ಹೆಚ್ಚು ಮಾಡಬೇಕಾಗುತ್ತದೆ. ಡ್ರೈ ಫಾರ್ಮಿಂಗ್ ಕಡೆ ಸರ್ಕಾರ ಗಮನ ಹರಿಸಿದೆ ಎಂದು ಪ್ರಸ್ತಾಪ ಮಾಡಿದೆ.

ಇನ್ನು ಎಣ್ಣೆ ಕಾಳುಗಳ ಬಗ್ಗೆ ಹೆಚ್ಚು ಪ್ರಗತಿಯನ್ನು ಸಾಧಿಸಿಲ್ಲ, ಸಾಧಿಸಬೇಕಾಗಿದೆ. ದ್ವಿದಳ ಧಾನ್ಯಗಳ ಬಗ್ಗೆ ಪ್ರಗತಿ ಸಾಧಿಸಬೇಕಾಗಿದೆ. ಇದು ಸದನದ ಒಟ್ಟು ಅಭಿಪ್ರಾಯವಾಗಿದೆ. ಆ ದಿಸೆಯಲ್ಲೂ ಕೂಡ ಅಂಕಿ ಅಂಶಗಳನ್ನು ಕೊಡುವುದಾದರೆ ಸರ್ಕಾರ ಪ್ರಯತ್ನಪಟ್ಟಿದೆ. ಇವೊತ್ತು ಪಲ್ಸ್ ಬಗ್ಗೆ ಕಾರ್ಯಕ್ರಮ ಹಾಕಿಕೊಂಡು 1977-78,

1978-79ರಲ್ಲಿ ಹೆಚ್ಚು ಕೆಲಸವನ್ನು ಮಾಡಿರತಕ್ಕದ್ದನ್ನು ನಾವು ಅಂಕಿ ಅಂಶಗಳ ಪ್ರಕಾರ ಕಾಣಬಹುದು.

ಶ್ರೀ ಎಂ.ಸಿ. ಬಸಪ್ಪ:- ಆಯಿಲ್ ಸೀಡ್ಸ್‌ನಲ್ಲಿ ಆಗಿಲ್ಲ.

ಶ್ರೀ ಕೆ.ಎಚ್. ರಂಗನಾಥ್:- ಶೇಂಗಾದಲ್ಲಿ ಆಗಿದೆ. ಆಯಿಲ್ ಸೀಡ್ಸ್ ಬಗ್ಗೆ 1977ರಲ್ಲಿ ಸ್ಪೆಷಲ್ ಎಫರ್ಟ್ ತೆಗೆದುಕೊಂಡು 1977-78ರಲ್ಲಿ 14.16 ಲಕ್ಷ ಹೆಕ್ಟೇರ್ ಭೂಮಿಯಲ್ಲಿ 8.20 ಲಕ್ಷ ಟನ್ ಎಣ್ಣೆಕಾಳು ಬೆಳೆದದ್ದನ್ನು ನೋಡಿದ್ದೇವೆ. 1978ರಲ್ಲಿ ಸಮ್ಮರ್ ಐಎಫ್ಐ ಒಂದು ಲಕ್ಷ 50 ಸಾವಿರ ಹೆಕ್ಟೇರ್‌ನಲ್ಲಿ ಶೇಂಗಾ ಬೆಳೆ ಇರತಕ್ಕದ್ದನ್ನು ಕಾಣುತ್ತೇವೆ. 1978-79ರಲ್ಲಿ 15.94 ಲಕ್ಷ ಹೆಕ್ಟೇರಿನಲ್ಲಿ 10.20 ಲಕ್ಷ ಟನ್ ಶೇಂಗಾ ಬೆಳೆ ಆಗಿರುವುದನ್ನು ನಾವು ಕಾಣಬಹುದು. 1978ರ ಬೇಸಿಗೆಯಲ್ಲಿ ಒಂದು ಲಕ್ಷ 92 ಸಾವಿರ ಹೆಕ್ಟೇರ್‌ನಲ್ಲಿ ಶೇಂಗಾ ಬೆಳೆ ಇರತಕ್ಕದ್ದನ್ನು ಕಾಣುತ್ತಿದ್ದೇವೆ. ಅದು ಮುಂದಿನ ವರ್ಷದ ಅಂಕಿ ಅಂಶಗಳಲ್ಲಿ ಬರುತ್ತದೆ. ಖಾರೀಫ್, ರಾಬಿ ಭಾಗದಲ್ಲಿ ಬರುತ್ತದೆ. ಅದು ಬರುವ ಜೂನ್, ಜುಲೈನಲ್ಲಿ ಬೆಳೆ ಬರುವುದರಿಂದ ಅದು ಅಂಕಿ ಅಂಶದಲ್ಲಿ ಇಲ್ಲ. ನನ್ನಲ್ಲಿ ಇರತಕ್ಕ ಅಂಕಿ ಅಂಶಗಳನ್ನು ಹೇಳುವುದಾದರೆ ಈ ಅಭಿವೃದ್ಧಿಯನ್ನು ನಾವು ನೋಡಲಿಕ್ಕೆ ಸಾಧ್ಯವಿದೆ.

ಮಾನ್ಯ ಸದಸ್ಯರು ಏನು ಪ್ರಸ್ತಾಪ ಮಾಡಿದರು ಅದರ ಬಗ್ಗೆ ಸರ್ಕಾರ ಈಗಾಗಲೇ ಗಮನಹರಿಸಿದೆ. 1978ರಿಂದ ನಾವು ಪ್ರಯತ್ನ ಪಟ್ಟಿದ್ದೇವೆ. ಈ ಪ್ರಯತ್ನವನ್ನು ಒಣಬಂಜರು ಭೂಮಿಯಲ್ಲೂ ಮಾಡಬೇಕಾಗಿದೆ. ಈಗ ಕೋಲಾರ ಜಿಲ್ಲೆಯಲ್ಲಿ ಮುಳುಬಾಗಿಲು, ಚಿಂತಾಮಣಿ ಮುಂತಾದ ಭಾಗಗಳಲ್ಲಿ ಶೇಂಗಾ ಬೆಳೆಯನ್ನು ಬೆಳೆದಿದ್ದಾರೆ ತುಮಕೂರು ಜಿಲ್ಲೆಯಲ್ಲಿ ಮಧುಗಿರಿ, ಪಾವಗಡ ಮುಂತಾದ ಭಾಗಗಳಲ್ಲಿ ಬೆಳೆದಿದ್ದಾರೆ. ನನ್ನ ಸ್ಥಳದಲ್ಲಿ ಬೆಳೆಯುತ್ತಿದ್ದಾರೆ. ಮೈಸೂರು ಜಿಲ್ಲೆಯಲ್ಲಿ ಬೆಳೆಯುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಸಾವಿರ ಹೆಕ್ಟೇರ್ ಭೂಮಿಯಲ್ಲಿ ಶೇಂಗಾ ಬೆಳೆ ಬೆಳೆಯತಕ್ಕದ್ದನ್ನು ನೋಡಿದ್ದೇನೆ. 10 ಸಾವಿರ ಹೆಕ್ಟೇರ್‌ನಲ್ಲಿ ದ್ವಿದಳ ಧಾನ್ಯಗಳನ್ನು ಬೆಳೆಯತಕ್ಕದ್ದನ್ನು ಮಾಡುತ್ತಿದ್ದಾರೆ. ಈ ವಿಚಾರ ಅಲ್ಲಿ ಇದೆ. ಸಮಸ್ಯೆ ಎನ್ನುವುದನ್ನು ನಾವು ಗಹನವಾಗಿ ವಿಚಾರ ಮಾಡುವಾಗ ಸಮಸ್ಯೆ ಅನ್ನುವುದಕ್ಕೆ ಹೆಚ್ಚು ಬೆಳೆ, ಬೆಳೆಯುವುದಕ್ಕೆ ಸ್ವಲ್ಪ ಅನುಕೂಲ ಇರತಕ್ಕ ರೈತರು ಶ್ರಮಪಟ್ಟಿದ್ದಾರೆ. ತಮ್ಮಲ್ಲಿರತಕ್ಕ ಹಣವನ್ನು ಸಾಲಸೋಲ ಮಾಡಿ ಇದಕ್ಕೆ ಹಾಕತಕ್ಕದ್ದಕ್ಕೆ ಪ್ರಯತ್ನ ಪಡುತ್ತಿದ್ದಾರೆ. ಆದರೆ ಬಹಳ ಕೆಳಮಟ್ಟದಲ್ಲಿರತಕ್ಕ ರೈತರು ಬಹಳ ದೊಡ್ಡ ಸಂಖ್ಯೆಯಲ್ಲಿ ಇದ್ದಾರೆ. ಮಾರ್ಜಿನಲ್ ಫಾರ್ಮರ್ಸ್ ಬೆಂಗಳೂರು ಡಿವಿಜನ್‌ನಲ್ಲಿ ತೆಗೆದುಕೊಳ್ಳುವುದಾದರೆ, ಬೆಂಗಳೂರು ಜಿಲ್ಲೆಯಲ್ಲಿ 1976-77ನೇ ಇಸವಿ ಅಂಕಿ ಅಂಶ ನೋಡಿದರೆ 1,22,429 ಹಿಡುವಳಿದಾರರು ಒಂದು ಹೆಕ್ಟೇರ್ ಒಳಗಡೆ ಇರತಕ್ಕವರು ಇದ್ದಾರೆ. ಅವರು ಹೊಂದಿರತಕ್ಕ ಭೂಮಿ 64,256 ಹೆಕ್ಟೇರ್, ಒಂದರಿಂದ ಎರಡು ಹೆಕ್ಟೇರ್ ಇರತಕ್ಕವರು, ಎರಡರಿಂದ ನಾಲ್ಕು ಹೆಕ್ಟೇರ್ ಇರತಕ್ಕವರು, ನಾಲ್ಕರಿಂದ ಹತ್ತು

ಹೆಕ್ಟೇರ್ ಇರತಕ್ಕವರು, ಅರವತ್ತರಿಂದ ಮೇಲ್ಪಟ್ಟಿರತಕ್ಕವರ ಸಂಖ್ಯೆ ಹೇಳುವುದಾದರೆ ಬೆಂಗಳೂರಿನಲ್ಲಿ 3,096 ಕುಟುಂಬಗಳ ಹಿಡುವಳಿದಾರರು ಇದ್ದಾರೆ. ಅವರ ಸ್ವಾಧೀನದಲ್ಲಿರತಕ್ಕಂತಹ ಭೂಮಿ 47,560 ಹೆಕ್ಟೇರ್, ಬಹುಮಟ್ಟಿಗೆ ನಾಲ್ಕು ಹೆಕ್ಟೇರಿನಿಂದ ಹತ್ತು ಹೆಕ್ಟೇರ್ ಇರತಕ್ಕವರು ಹೆಚ್ಚು ಆಹಾರ ಧಾನ್ಯ ಬೆಳೆಯತಕ್ಕದ್ದರಲ್ಲಿ ಹೆಚ್ಚು ಕೆಲಸ ಮಾಡಿದ್ದಾರೆಂದು ಸಾಧಾರಣವಾಗಿ ತೆಗೆದುಕೊಳ್ಳಬಹುದು. ಅಂಕಿ ಅಂಶಗಳ ಆಧಾರದ ಮೇಲೆ ಹೇಳುತ್ತಿದ್ದೇನೆಂದು ಈ ಸಭೆ ಭಾವಿಸಬಾರದು. ಇವರಿಗೆ ಸಾಲ ಒದಗಿಸುವಲ್ಲಿ ವಿಫಲರಾಗಿದ್ದೇವೆ.

ಮಾನ್ಯ ಸದಸ್ಯರಾದ ರಾಮಕೃಷ್ಣ, ಬಸಪ್ಪ, ಚೌಡಯ್ಯ ಅವರು ಸಾಲ ಕೊಡುವುದರಲ್ಲಿ ಬಹಳ ಕಡಿಮೆಯಾಗಿದೆ, ಮುಂದುವರೆಯುತ್ತಿಲ್ಲ ಎಂದು ಹೇಳುತ್ತಿದ್ದಾರೆ. ನಾವು ಅದಕ್ಕೆ ಕಾರ್ಯಕ್ರಮ ಹಾಕಿಕೊಂಡಿದ್ದೇವೆ. 1976-77ನೇ ಇಸವಿಯಲ್ಲಿ 126 ಕೋಟಿ ರೂಪಾಯಿನ ಸಹಾಯ ಮಾಡಬೇಕೆಂದು ಹಾಕಿಕೊಂಡಿದ್ದೆವು. ಆದರೆ ಆ ಗುರಿ ಮುಟ್ಟಲಿಕ್ಕೆ ಸಾಧ್ಯವಾಗಿಲ್ಲ. ಆದರೆ ಸ್ಥಳೀಯ ಮಟ್ಟದಲ್ಲಿರತಕ್ಕ ಸಂಸ್ಥೆಗಳು ಏನಿವೆ. ಕೋಆಪರೇಟೀವ್ ಸೊಸೈಟಿ, ಜಿಲ್ಲಾ ಕೇಂದ್ರ ಬ್ಯಾಂಕುಗಳು, ರಾಷ್ಟ್ರೀಕರಣ ಬ್ಯಾಂಕುಗಳು ಇವು ನಾವು ನಿರೀಕ್ಷಿಸಿದ ಮಟ್ಟಿಗೆ ಇವರಿಗೆ ಸಹಾಯ ಮಾಡಿಲ್ಲ.

ನಿರೀಕ್ಷಿಸಿದ ಮಟ್ಟಕ್ಕೆ ಸಹಾಯ ಮಾಡುವುದಕ್ಕೆ ಆಗಲಿಲ್ಲ. ಇವತ್ತು ಒಂದು ಹೆಕ್ಟೇರ್ ಭೂಮಿಯನ್ನು ಇಟ್ಟುಕೊಂಡಿರುವವರಿಗೆ ನಾವು ಸಹಾಯ ಮಾಡುವುದಾದರೆ ಎಸ್.ಎಫ್.ಡಿ.ಎ. ಯೋಜನೆ ಪ್ರಕಾರ ಇವರು ಎತ್ತು ಗಾಡಿ ಇವುಗಳನ್ನು ಕೊಂಡುಕೊಳ್ಳುವುದಕ್ಕೆ ಸಹಾಯ ಮಾಡಬೇಕೆಂದು ಮಾಡಿದ್ದೇವೆ. ಇವು ಜೀವಂತ ಸಂಸ್ಥೆಗಳು ಆಗಿಲ್ಲದಿರುವುದರಿಂದ ಇವರು ರೈತರಿಗೆ ಕೊಡುತ್ತಿದ್ದ 25-30 ಪರ್ಸೆಂಟ್ ಸಬ್ಸಿಡಿಯನ್ನು ಕೊಡುವುದಕ್ಕೆ ಸಾಧ್ಯವಾಗದಿರುವುದರಿಂದ ಉತ್ಪಾದನೆ ಆಗಬೇಕಾದುದರಲ್ಲಿ ಬಹಳಷ್ಟು ಕಡಿಮೆ ಆಗಿದೆ. ಈ ರೈತರ ಸಮಸ್ಯೆಗಳನ್ನು ಪರಿಹಾರ ಮಾಡಲು ನಾವು ಸೂಕ್ತ ಯೋಜನೆಗಳನ್ನು ಹಾಕಿಕೊಂಡು ಸಹಾಯ ಮಾಡದೇಹೋದರೆ ಇನ್ನು ಮುಂದೆ ನಮ್ಮ ರಾಜ್ಯದಲ್ಲಿ ಆಹಾರ ಸಮಸ್ಯೆ ಇನ್ನೂ ದೊಡ್ಡ ಪ್ರಮಾಣದಲ್ಲಿ ಬೆಳೆಯುತ್ತದೆಂದು ಈಗಲೇ ತಮಗೆ ಹೇಳಬಯಸುತ್ತೇನೆ.

ಇವತ್ತು ನಾವು ಹೆಚ್ಚು ಬೆಳೆಯನ್ನು ಬೆಳೆಯಲೇಬೇಕಾಗಿದೆ. ಹೆಚ್ಚು ಬೆಳೆಯಬೇಕಾದರೆ ಮಾನ್ಯ ಸದಸ್ಯರಾದ ಶ್ರೀ ರಾಮಕೃಷ್ಣ ಹಾಗೂ ಇನ್ನೂ ಅನೇಕ ಮಾನ್ಯ ಮಿತ್ರರುಗಳು ಹೇಳಿದ ಪ್ರಕಾರ ಬೆಳೆಯನ್ನು ಬೆಳೆಯುವ ನೀತಿಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕು. ಮಾನ್ಯ ಸದಸ್ಯರಾದ ಶ್ರೀಮಾನ್ ಗಂಗಾಧರನ್‌ರವರು ಮಾತನಾಡುತ್ತಾ 1978-79ರಲ್ಲಿ 75.68 ಲಕ್ಷ ಟನ್ ಆಹಾರವನ್ನು ಬೆಳೆದಿದ್ದೀರಿ ಇದು ಯಾವ ಮೂಲೆಗೂ ಸಾಕಾಗುವುದಿಲ್ಲ ಎನ್ನುವ ಮಾತನ್ನು ಹೇಳಿದ್ದಾರೆ. ಇದಕ್ಕೆ ನಾನಾದರೂ ಹೇಳುವುದಿಷ್ಟೆ, ನಾವು ಇಷ್ಟು ಆಹಾರ

ಧಾನ್ಯಗಳನ್ನು ಬೆಳೆದೂ ಅದು ಸಾಕಾಗುತ್ತಿಲ್ಲ. ಇದರ ಜೊತೆಗೆ ಇನ್ನು 1-2 ಹೆಕ್ಟೇರುಗಳನ್ನು ಹೊಂದಿರುವವರ ಸಮಸ್ಯೆಗಳೂ ಬಂದರೆ ಆಗ ನಾವು ಏನು ಮಾಡಬೇಕೆಂಬುದನ್ನು ಯೋಚನೆ ಮಾಡಬೇಕು.

ಇವತ್ತು ಏನಾಗಿದೆ ಎಂದರೆ ಶಾಸನ ಸಭೆಗಳಲ್ಲಿ ಸೊಳ್ಳೆ ವಿಚಾರ, ರಿಕ್ಷಾದವರು ಅಪಘಾತ ಮಾಡಿದ್ದು. ಸ್ಟ್ರೈಕ್ ಮಾಡಿದ್ದು, ಯಾರೋ ಹೆಂಗಸು ತಪ್ಪಿಸಿಕೊಂಡು ಹೋಗಿದ್ದಾಳೆ.... ಇಂಥ ಅನವಶ್ಯಕವಾದ ಸಣ್ಣಪುಟ್ಟ ವಿಷಯಗಳನ್ನೇ ಪ್ರಸ್ತಾಪಕ್ಕೆ ತೆಗೆದುಕೊಳ್ಳುತ್ತಿರುವುದರಿಂದ ಆಹಾರ ಸಮಸ್ಯೆ ಮುಂತಾದ ದೊಡ್ಡ ದೊಡ್ಡ ವಿಷಯಗಳ ಕಡೆಗೆ ಗಮನಹರಿಸಲು ಸಾಧ್ಯವಾಗುತ್ತಿಲ್ಲ. ಇವತ್ತು ಬೆಂಗಳೂರು ನಗರದಲ್ಲಿ ಅಲ್ಪಾವಧಿ ಸಾಲವನ್ನು ಸುಮಾರು 107 ಕೋಟಿ ರೂಪಾಯಿಗಳಷ್ಟು ಕೊಟ್ಟಿದ್ದೇವೆ. ಈ ಸಮಸ್ಯೆ ಎಂಥಾದ್ದು ಎಂದರೆ ಸಾಲ ತೆಗೆದುಕೊಂಡಿರುವವರು ಆ ಕಡೆ ಭೂ ಮಾಲೀಕರೂ ಅಲ್ಲ, ಈ ಕಡೆ ಕೂಲಿಯವರೂ ಅಲ್ಲ; ಈ ರೀತಿ ಇದೆ. ಇವರಿಗೂ ಒಂದು ಗುಂಟೆ ಜಮೀನು ಇದೆ, ಒಂದು ಪಟ್ಟೆ ಇದೆ. ಯಾರಾದರೂ ಕೋರ್ಟಿಗೆ ಹೋದರೆ ಜಾಮೀನು ಕೊಟ್ಟು ಬಿಡಿಸಿಕೊಂಡು ಬರಲು ನನಗೂ ಅವಕಾಶ ಇದೆ ಎಂದು ಹೇಳುವ ಮಟ್ಟದಲ್ಲಿದ್ದಾರೆ. ಆದರೆ ಇವರ ಪರಿಸ್ಥಿತಿ ಕೂಲಿಯವರಿಗಿಂತಲೂ ಕಡಿಮೆಯಾಗಿದೆ, ಮಾನ್ಯ ಸದಸ್ಯರಾದ ಶ್ರೀಮಾನ್ ಬಸಪ್ಪನವರೂ ಹಾಗೂ ಮತ್ತಿತರರೂ ಮಾತನಾಡುತ್ತಾ ಪ್ಲಾಂಟ್ ಪ್ರೊಟೆಕ್ಷನ್ ಮಾಡಬೇಕೆಂದು ಹೇಳಿದರು. ವ್ಯವಸಾಯ ವಿಷಯದಲ್ಲಿ ನಮಗಿಂತಲೂ ಹೆಚ್ಚಿನ ಪರಿಶ್ರಮ ಇರತಕ್ಕ ಮಾನ್ಯ ಮುಖ್ಯಮಂತ್ರಿಯವರು ಆಗಾಗ್ಗೆ ಈ ವಿಚಾರವನ್ನು ಮಾತನಾಡುತ್ತಾ ಇರುತ್ತಾರೆ. ಇವತ್ತು ನಾವು ಇನ್‌ಫ್ರಾಸ್ಟ್ರಕ್ಚರನ್ನು ಜಾಸ್ತಿ ಮಾಡಬೇಕೆಂದು ಹೋದರೆ ಹಲವಾರು ಸಮಸ್ಯೆಗಳು ಅಡ್ಡಬರುತ್ತವೆ.

ಕೆಲವು ಸದಸ್ಯರು ಮಾತನಾಡುವಾಗ ರೈತನಿಗೆ ಅವಶ್ಯಕವಾಗಿ ಬೇಕಾದಂಥ ಔಷಧಿ, ರಾಸಾಯನಿಕ ಗೊಬ್ಬರ, ವ್ಯವಸಾಯೋಪಕರಣಗಳನ್ನು ಸಬ್ಸಿಡಿ ರೂಪದಲ್ಲಿ ಒದಗಿಸಬೇಕೆಂದು ತಿಳಿಸಿದರು. ನಾವು ಈಗಾಗಲೇ ಸಣ್ಣಪುಟ್ಟ ರೈತರುಗಳಿಗೆ ಇವುಗಳನ್ನು ಒದಗಿಸುತ್ತಿದ್ದೇವೆ. ಈ ಸಾರಿ ಸುಮಾರು 32 ಲಕ್ಷ ಹೆಕ್ಟೇರ್‌ಗಳಲ್ಲಿ ಪ್ಲಾಂಟ್ ಪ್ರೊಟೆಕ್ಷನ್ ಪ್ರೋಗ್ರಾಂನ್ನು ಹಾಕಿಕೊಂಡಿದ್ದೇವೆ. ಇದೇ ಅಲ್ಲದೆ ರೈತರಿಗೆ ಇನ್ನೂ ಅನೇಕ ರೀತಿಯ ಸೌಕರ್ಯಗಳನ್ನು ಒದಗಿಸುವ ವಿಚಾರದಲ್ಲಿ ನಾವು ಯೋಚನೆ ಮಾಡುತ್ತಿದ್ದೇವೆ. ಇವತ್ತು ರೈತ ಬೆಳೆದಂಥ ಆಹಾರ ಧಾನ್ಯಗಳಿಗೆ ಬೆಲೆ ಕುಸಿದು ಬೀಳುತ್ತಿದೆ. ಮಾನ್ಯ ರಾಜಶೇಖರ್ ಮಾತನಾಡುತ್ತಾ ಅಮೇರಿಕಾ, ರಷ್ಯಾಗಳಲ್ಲಿ ಪ್ರೈಸ್ ಸ್ಟೆಬಿಲೈಸ್ ಮಾಡಿದ್ದಾರೆಂದು ಹೇಳಿದರು. ಅದೇ ರೀತಿ ನಮ್ಮಲ್ಲೂ ಕೂಡ ಪ್ರೈಸಸ್ ಸ್ಟೆಬಿಲೈಸ್ ಮಾಡಬೇಕೆಂದು ಪ್ರಯತ್ನ ಮಾಡುತ್ತಿದ್ದೇನೆ. ಆದರೆ ಇದರಲ್ಲಿ ನಮಗೆ ಸರಿಯಾದ ದಾರಿ ಯಾವುದೂ ಕಾಣುತ್ತಿಲ್ಲ. ನಾವು ತಿಳಿದುಕೊಂಡಿರುವಷ್ಟು ಮಟ್ಟಿಗೆ ವ್ಯವಸಾಯ ಕ್ಷೇತ್ರ ಸುಲಭವಾಗಿಲ್ಲ. ಕೆಲವರಿಗೆ ಅಂದರೆ ಹಣ ಸಂಪಾದನೆ

ಮಾಡುವವರಿಗೆ ವ್ಯಾಪಾರ ಮಾಡುವವರಿಗೆ ಅವರ ದೃಷ್ಟಿಯಲ್ಲಿ ಈ ವ್ಯವಸಾಯ ಕ್ಷೇತ್ರ ಸುಲಭವಾಗಿರಬಹುದು. ನೋಬಲ್ ಪ್ರೈಸ್ ಪಡೆದಿರುವಂಥ ಪಾಲ್ ಸ್ಯಾಮಿನ್ ಎಂಬುವರು ವ್ಯವಸಾಯೋತ್ಪನ್ನದ ಬಗ್ಗೆ ಬರೆದಿರುವುದನ್ನು ಇಲ್ಲಿ ಹೇಳಬಯಸುತ್ತೇನೆ.

ಶ್ರೀ ಎಂ.ವಿ. ರಾಜಶೇಖರನ್:- ಯಾರೋ ಒಬ್ಬ......

**Sri K.H. Ranganath:** I was about to quote ಎಂದು ಅವರು ಹೇಳಿದ್ದಾರೆ. ಅಂದರೆ ನಿಮಗೆ ಅನುಕೂಲವಾಗಿರುವಂತೆಯೇ ಬರೆದಿದ್ದಾರೆ. ಆದರೂ ಕೂಡ ಅವರು ಸಲಹೆ ಮಾಡಿರುವಂತೆ ಏರಿಯಾ ರಿಸ್ಟ್ರಿಕ್ಟ್ ಮಾಡಿ ಬೆಲೆಯನ್ನು ಹಿಡಿತದಲ್ಲಿ ಇಟ್ಟುಕೊಂಡು ಮಾಡಬೇಕಾಗಿದೆ ಎಂದು ಬರೆದಿದ್ದಾರೆ. ಅದರಂತೆ ನಮ್ಮ ದೇಶದಲ್ಲಿ ಇಂತಿಷ್ಟು ಎಕರೆ ಇರುವವರು ಇಂಥಾದ್ದನ್ನೇ ಬೆಳೆಯಿರಿ ಎಂದು ಹೇಳುವುದಕ್ಕೆ ಹೋದರೆ ಆ ರೈತರು ಇಲ್ಲಿಗೆ ಜಾತಾ ಬಂದರೂ ಬರಬಹುದು. ತಾವು ಹೇಳಿದಂತೆಯೇ ಇದು ಅಷ್ಟು ಉಪಯುಕ್ತವಾದುದಲ್ಲವೆನ್ನುವ ಮಾತನ್ನು ಅವರೂ ಕೂಡ ಹೇಳಿದ್ದಾರೆ.

ಅಮೇರಿಕಾ ರಾಷ್ಟ್ರದವರು ಇಂದು ರಾಷ್ಟ್ರದ ಡಿಫೆನ್ಸ್ ಸಾಮಗ್ರಿಗಳನ್ನು ತಯಾರು ಮಾಡತಕ್ಕಂಥ ರಾಷ್ಟ್ರವಾಗಿರುತ್ತದೆ. ಇದನ್ನು ಅವರು ಸುಲಭ ರೀತಿಯಲ್ಲಿ ಬೇರೆಬೇರೆ ರಾಜ್ಯಗಳಿಗೆ ಸಹಾಯ ಮಾಡತಕ್ಕಂಥ ಪರಿಸ್ಥಿತಿಯಲ್ಲಿರುತ್ತದೆ. ಆದರೆ ನಮ್ಮ ರಾಷ್ಟ್ರ ಆರ್ಥಿಕ ಪರಿಸ್ಥಿತಿಯ ವ್ಯವಸ್ಥೆಯನ್ನು ಮೂಲವಾಗಿಟ್ಟುಕೊಂಡು ಸಹಾಯ ಮಾಡಲಿಕ್ಕೆ ಸಾಧ್ಯವೆ. ಎರಡು ರೂಪಾಯಿ ನೇರವಾಗಿ ಟ್ಯಾಕ್ಸನ್ನು ಹಾಕಬಹುದು. ಈವತ್ತು ನಾನು ಹೇಳುತ್ತೇನೆ. ಶ್ರೀ ಬಸಪ್ಪನವರು ನೇರವಾಗಿ ಹೇಳಿದರು ಏನು ಒಂದು 10 ರೂಪಾಯಿಗಳು ಕಡಿಮೆಯಾಗಿರಬಹುದು. ಆದರೆ ಕಬ್ಬಿಣದ ಬೆಲೆ ಜಾಸ್ತಿಯಾಯಿತು. ಗಾಡಿ ಚಕ್ರಗಳನ್ನು ಮಾಡಿಸಬೇಕೆಂದರೆ ತೇಗದ ಮರಕ್ಕೆ, ಕಂಬಕ್ಕೆ ಎರಡು ಪಟ್ಟು ಮೂರು ಪಟ್ಟು ಬೆಲೆ ಜಾಸ್ತಿಯಾಗಿರುತ್ತದೆ. 5-10 ರೂಪಾಯಿಗಳು ಗೊಬ್ಬರದಲ್ಲಿ ಕಡಿಮೆ ಮಾಡಿದರೆ ಹೆಚ್ಚಿನದೇನು ಆಗಲಿಲ್ಲ. ಒಂದಕ್ಕೊಂದು ಸಂಬಂಧ ಇರತಕ್ಕಂಥ ಪ್ರಶ್ನೆಯಾಗಿದೆ. ಅದರಿಂದ ಬೇರೆ ರಂಗದಲ್ಲಿಯೂ ಕೂಡ ಅಭಿವೃದ್ಧಿ ಜಾಸ್ತಿಯಾದರೆ ಮಾತ್ರ ಇಲ್ಲಿ ಬರತಕ್ಕಂಥ ಉತ್ಪನ್ನವನ್ನು ಉಳಿಸಲಿಕ್ಕೆ ಸಾಧ್ಯವಾಗುತ್ತದೆ. ಉದಾಹರಣೆಗೆ ಹೈಬ್ರಿಡ್ ಜವಾರ್‌ನ್ನು ತೆಗೆದುಕೊಳ್ಳುತ್ತಾರೆಂದು ಹೇಳುತ್ತೀರಿ. ಕೇಂದ್ರ ಸರ್ಕಾರದವರು ಕಡ್ಡಾಯವಾಗಿ ಕೊಳ್ಳಲೇಬೇಕಾಗುತ್ತದೆ. ಇದರಿಂದ ಒಂದು ಪ್ರಶ್ನೆ ಉದ್ಭವವಾಗುತ್ತದೆ. ಅದನ್ನು ಬೆಳೆಸತಕ್ಕಂಥ ರೈತರು ಯಾರು, ಶ್ರೀ ವೈ. ರಾಮಕೃಷ್ಣರವರು ಒಂದು ಮಾತನ್ನು ಹೇಳಿದರು, ನೀವು ಕೂಡ ಹೇಳಿದಿರಿ; ಅನಿಮಲ್ ಹಸ್‌ಬೆಂಡ್ರಿ ಅಭಿವೃದ್ಧಿಯಾಗಬೇಕೆಂದು. ಪಶುಸಂಗೋಪನೆಯ ಕಾರ್ಯವನ್ನು ನಾವು ಮಾಡದೆ ಹೋದರೆ ಹೈಬ್ರಿಡ್ ಜವಾರ್‌ನ್ನು ಬಳಸತಕ್ಕಂಥವರು ಯಾರು? ಇಂಥ ಸಂದರ್ಭದಲ್ಲಿ ಒಂದು ಅಭಿವೃದ್ಧಿ ಕಾರ್ಯಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಈಗ ತಮಗೆ ಏನು ಆಗಿದೆ ಎಂದರೆ ಹೈಬ್ರಿಡ್ ಜೋಳ ಬೆಳೆದುದನ್ನು ಗೋಡಾನ್‌ನಲ್ಲಿ

ಹಾಕಿಕೊಂಡಿದ್ದೇವೆ. ಅದನ್ನು ಬಳಸಲಿಕ್ಕೆ ಮಾರ್ಗ ಇಲ್ಲದಂತಾಗಿರುತ್ತದೆ. ಅದನ್ನು ಯಾರು ತಿನ್ನುವುದಿಲ್ಲ. ಎರಡು ಲಕ್ಷ ಟನ್ ರಾಗಿ ಜಾಸ್ತಿ ಇದೆ. ಎರಡು ಲಕ್ಷ ಟನ್ ಭತ್ತ ಜಾಸ್ತಿ ಇದೆ. ಮಾರ್ಜಿನಲ್ ಡಿಫಿಷಿಯನ್ಸಿಯಲ್ಲಿ ಜೋಳ ಇರುತ್ತದೆ. ಇಂಥ ಪರಿಸ್ಥಿತಿ ಇರುವಾಗ ಹೈಬ್ರಿಡ್ ಮೈಜನ್ನು ಯಾರು ಬಳಸುತ್ತಾರೆ. ಆದ್ದರಿಂದ ಪಶುಸಂಗೋಪನೆಯಂಥ ಕಾರ್ಯಗಳನ್ನು ಕೈಗೊಂಡು ಅದನ್ನು ಬಳಸಲಿಕ್ಕೆ ಯಾವುದಾದರೊಂದು ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ. ಇದನ್ನು ಯಾವುದರ ಬೇಸಿಸ್ ಮೇಲೆ ಮಾಡಬೇಕು. ಕೇಂದ್ರ ಸರ್ಕಾರಕ್ಕೆ ಬರುತ್ತಾ ಇರತಕ್ಕಂಥ ಟ್ಯಾಕ್ಸ್ ನಾವು ಕೊಡುತ್ತಾ ಇರತಕ್ಕಂಥ ಟ್ಯಾಕ್ಸ್ ಈ ರೀತಿ ಅವರಿಗೆ ಸಹಾಯ ಮಾಡದೇ ಹೋದರೆ ಅವರು ತಾನೇ ಏನು ಮಾಡುವುದಕ್ಕೆ ಸಾಧ್ಯವಾಗುತ್ತದೆ.

ಇನ್ನು ಒಂದು ವಿಚಾರ. ನಮ್ಮಲ್ಲಿ ಸ್ವಲ್ಪ ಸಂಭಾವಿತ ಜನರು ಇರುತ್ತಾರೆ. ಎಪ್ಪತ್ತೈದು ಪೈಸೆಯನ್ನು ಕೊಟ್ಟರೂ ಕೆಲಸಕ್ಕೆ ಬರುವಂಥ ಜನರು ಇರುತ್ತಾರೆ. ಶ್ರೀ ವೈ. ರಾಮಕೃಷ್ಣರು ಮಾತನಾಡುತ್ತಾ ವೇಜಸ್ ಕಡಿಮೆ ಇದೆ ಜಾಸ್ತಿ ಕೊಡಬೇಕೆಂದು ಹೇಳಿದರು. ಅದು ಕಷ್ಟವಾದ ಮಾತಾಗಿರುತ್ತದೆಂದು ಹೇಳುತ್ತೇನೆ. ಏತಕ್ಕೆಂದರೆ ಕಾಸ್ಟ್ ಆಫ್ ಪ್ರೊಡಕ್ಷನ್ ಲೆಕ್ಕ ಹಾಕಿದರೆ ಇದರಲ್ಲಿ ವೇಜಸ್ ಇನ್‌ಕ್ಲೂಡಿಂಗ್ ಅಗ್ರಿಕಲ್ಚರ್ ಲೇಬರ್ಸ್‌ಗೂ ಕೂಲಿ ಜಾಸ್ತಿ ಕೊಡಬೇಕಾಗುತ್ತದೆ. ಆದರೆ ಕೊಳ್ಳುವ ಬೆಲೆ ಕಡಿಮೆಯಾಗುತ್ತದೆ. ಇಂಥ ಒಂದು ದ್ವಂದ್ವ ಪರಿಸ್ಥಿತಿಯಲ್ಲಿ ಸಿಕ್ಕಿಹಾಕಿಕೊಂಡಿರುವಾಗ ಇದಕ್ಕೆ ಒಂದು ಪರಿಹಾರವನ್ನು ಒದಗಿಸಲೇಬೇಕಾಗುತ್ತದೆ. ಈ ಸಮಸ್ಯೆಗೆ ನಾವು ಸರಿಯಾದಂಥ ವೇಜಸ್ ಮಾಡತಕ್ಕಂಥದ್ದು ಯೋಗ್ಯವಾಗಿರುತ್ತದೆ. ಮತ್ತೆ ನಾವು ಸೋಶಿಯಾಲಿಸ್ಟಿಕ್ ಕಂಟ್ರೀಸ್ ಎಂದು ಏನು ಕರೆಯುತ್ತೇವೆ, ಅವರು ಇಂಟರ್‌ನಲ್ ಮಾರ್ಕೆಟಿಂಗ್ ಸ್ಟೆಬಿಲೈಸ್ಡ್ ಮಾಡಿಕೊಳ್ಳುತ್ತಾರೆ.

ನಾವು ಬೆಳೆಸತಕ್ಕಂಥ ಬೆಳೆಗಳಿಗೆ ಮಾರ್ಕೆಟಿಂಗ್ ವ್ಯವಸ್ಥೆಯನ್ನು ಮಾಡಿಕೊಳ್ಳದೇ ಹೋದರೆ ನಾವು ಎಷ್ಟು ಬೆಳೆದರೂ ಏನು ಪ್ರಯೋಜನವಾಗುವುದಿಲ್ಲವೆಂದು ಹೇಳುತ್ತೇನೆ. ಎಂಟು ಲಕ್ಷ ಟನ್ ಕಡಲೆಕಾಯಿ ಬೆಳೆಯನ್ನು ಬೆಳೆಯುತ್ತೇವೆ. ಅದರಲ್ಲಿ ಎಣ್ಣೆ ಮಾಡತಕ್ಕಂಥ ಅಂಕಿ ಅಂಶ ನೋಡಿದರೆ ಕೃಷಿಗಾಗಿ ಇಷ್ಟೊಂದು ಹಣವನ್ನು ಹಾಕಲಿಕ್ಕೆ ಸಾಧ್ಯವೇ ಎನ್ನುವುದನ್ನು ಕೂಡ ನೋಡಬೇಕಾಗುತ್ತದೆ. ಹತ್ತಿ ಬೆಳೆಯಲ್ಲಿಯೂ ಕೂಡ ಹೇಳುವುದಾದರೆ ಹತ್ತಿ ಬೆಳೆಯನ್ನು ಜಾಸ್ತಿ ಮಾಡಿದ್ದೇವೆ. ನಾವು ಬಳಸುವುದಕ್ಕಿಂತ ಹೆಚ್ಚು ಖರೀದಿ ಮಾಡುತ್ತಿದ್ದೇವೆ. ಗುಜರಾತ್, ಬಾಂಬೆ ಈ ಸ್ಟೇಟ್‌ಗಳಿಗೆ ಕೊಡುತ್ತಿದ್ದೇವೆ. ಇನ್ನು ದ್ವಿದಳ ಧಾನ್ಯಗಳ ಬಗ್ಗೆ ಹೇಳುವುದಾದರೆ ತೊಗರಿ ಬೇಳೆ ನಮಗೆ ಬೇಕಾದಷ್ಟು ಬೆಳೆಸಲಿಕ್ಕೆ ಸಾಧ್ಯವಾಗುತ್ತಿಲ್ಲ. ಈವೊತ್ತು ಗುಲ್ಬರ್ಗಾದಲ್ಲಿ ಈ ಬೆಳೆಯನ್ನು ಬೆಳೆಯುತ್ತಿದ್ದೇವೆ. ಎಂಟು ಲಕ್ಷ ಟನ್ ಮಾತ್ರ ಬೆಳೆಯುತ್ತೇವೆ. ಅಲ್ಲದೆ ಮಧ್ಯ ಪ್ರವೇಶದಿಂದಲೂ ತರಿಸಿಕೊಳ್ಳುತ್ತಿದ್ದೇವೆ.

ಶ್ರೀ ಟಿ.ಆರ್. ಶಾಮಣ್ಣ:- ಇಷ್ಟಾದರೂ ಕೂಡ ಕೆ.ಜಿ.ಗೆ ಐದು ರೂಪಾಯಿಗಳಿಗಿಂತ ಕಡಿಮೆಯಾಗಲಿಲ್ಲ.

ಶ್ರೀ ಕೆ.ಎಚ್. ರಂಗನಾಥ್:- ತಾವು ಹೇಳುತ್ತೀರಿ ಬೆಲೆ ಜಾಸ್ತಿಯೆಂದರೆ ಬೆಲೆಯನ್ನು ಹೇಗೆ ಕಡಿಮೆ ಮಾಡುವುದು ತಾವೇ ತಿಳಿದುಕೊಳ್ಳಬೇಕು.

ಶ್ರೀ ಟಿ.ಆರ್. ಶಾಮಣ್ಣ:- ಕಡಿಮೆ ಹೇಗೆ ಮಾಡುವುದೆಂದರೆ ಜವಾಬ್ದಾರಿಯನ್ನು ಹೊತ್ತುಕೊಂಡು ಮಾಡಬೇಕೆಂದು ಹೇಳುತ್ತೇನೆ.

ಶ್ರೀ ಕೆ.ಎಚ್. ರಂಗನಾಥ್:- ಈವತ್ತು ಒಂದು ಪರಿಸ್ಥಿತಿ ಇರುತ್ತದೆ. ವ್ಯವಸಾಯದ ತಂತ್ರವನ್ನೇ ಬದಲಾವಣೆ ಮಾಡಬೇಕಾಗಿದೆ ಎನ್ನುವುದನ್ನು ಪ್ರಸ್ತಾಪ ಮಾಡಿದ್ದೇವೆ. ಇನ್ನು ಕಬ್ಬಿನ ಬೆಲೆ ಕಡಿಮೆ ಎಂದು ಹೇಳಿದ್ದೀರಿ. ಅದಕ್ಕೆ ನಾನು ಹೇಳುವುದು ವ್ಯವಸಾಯ ತಂತ್ರವೇ ಬದಲಾಗಬೇಕೆಂದು ಕೆಲವು ಸೂತ್ರಗಳನ್ನು ಹಿಡಿತದಲ್ಲಿಟ್ಟುಕೊಂಡು ಮಾನಾಪಲಿ ಮಾಡಲಿಕ್ಕೆ ಸಾಧ್ಯವಾಗುವುದಿಲ್ಲ.

ಹತ್ತಿಯನ್ನು ಖರೀದಿ ಮಾಡತಕ್ಕಂಥ ಕೆಲವು ಜನರು ಇದ್ದಾರೆ. ಎಣ್ಣೆಯನ್ನು ಮಾರಾಟ ಮಾಡತಕ್ಕಂಥ ಕೆಲವು ಜನರು ಇದ್ದಾರೆ. ಉತ್ತರ ಪ್ರದೇಶ, ಬಿಹಾರ್‌ಗಳಲ್ಲಿ ಶುಗರ್‌ನ್ನು ಉತ್ಪಾದನೆ ಮಾಡತಕ್ಕಂಥ ದೊಡ್ಡ ದೊಡ್ಡ ಕಾರ್ಖಾನೆಗಳಿವೆ. ಈ ಪ್ರದೇಶಗಳು ಕಬ್ಬಿನ ಬೆಳೆಗೆ ಉತ್ತಮವಾದ ಪ್ರದೇಶವಾದರೂ ಮಹಾರಾಷ್ಟ್ರ, ಆಂಧ್ರಪ್ರದೇಶ, ಕರ್ನಾಟಕದಲ್ಲಿ ಬೆಳೆಯುವಷ್ಟು ಕಬ್ಬನ್ನು ಇಲ್ಲಿ ಬೆಳೆಯುವುದಕ್ಕೆ ಪ್ರಯತ್ನ ಪಡುತ್ತಿಲ್ಲ. ಹೀಗಿದ್ದರೂ ಅವರಿಗೂ ಕೂಡ ಲೆವಿ ಪ್ರೈಸ್ ದೊರೆಯುತ್ತಿದೆ. ಹೀಗಾಗಿ ನಮ್ಮ ರೈತರು ಬಹಳ ತೊಂದರೆಗೆ ಒಳಗಾಗಿದ್ದಾರೆ. ನಮ್ಮ ಪಾರ್ಲಿಮೆಂಟ್ ಸದಸ್ಯರು ಕೇಂದ್ರ ಸರ್ಕಾರಕ್ಕೆ ಒತ್ತಾಯ ಹಾಕಬೇಕು. ಸ್ವಲ್ಪ ಇದರ ಬಗ್ಗೆ ಪ್ರಸ್ತಾಪ ಮಾಡಬೇಕೆಂದು ಹೇಳುತ್ತೇನೆ. ಈ ಸದನದ ಮೂಲಕ ಅವರನ್ನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ನಾವು ಕೂಡ ಇದರ ಬಗ್ಗೆ ಪ್ರಸ್ತಾಪ ಮಾಡೋಣವೆಂದು ಹೇಳುತ್ತೇನೆ. ಸಣ್ಣ ಸಣ್ಣ ವಿಷಯಗಳ ಬಗ್ಗೆ ಕಡಿಮೆ ಕಾಲವನ್ನು ಬಳಸಿಕೊಂಡು ಇಂಥ ವಿಷಯಗಳ ಕಡೆಗೆ ಹೆಚ್ಚಿನ ಗಮನವನ್ನು ನಾವು ಕೊಟ್ಟು ಹೆಚ್ಚು ಕೆಲಸವನ್ನು ಮಾಡಲಿಕ್ಕೆ ಪ್ರಯತ್ನಪಟ್ಟರೆ ಇದರಿಂದ ಹೆಚ್ಚಿನ ಲಾಭವಾಗುತ್ತದೆಂದು ಹೇಳುತ್ತೇನೆ. ನಮ್ಮ ಉದ್ದೇಶವೇನಿದೆ ಎಂದರೆ ಬೆಳೆ ಕಡಿಮೆಯಾಗದಂತೆಯೂ, ಬೆಳಯತಕ್ಕಂಥ ಪದಾರ್ಥಗಳಿಗೆ ಹೆಚ್ಚಿನ ಲಾಭದಾಯಕವಾಗಿಯೂ ಇರಬೇಕೆನ್ನುವುದೇ ಆಗಿರುತ್ತದೆ. ಹಾಗೆಯೇ ಕೊಂಡುಕೊಳ್ಳುವವರಿಗೆ ಅವರ ದುಡಿಮೆಗೆ ಅನುಗುಣವಾಗಿ ನಿಲ್ಲತಕ್ಕಂಥ ರೀತಿಯಲ್ಲಿ ದೊರೆಯಬೇಕು ಎನ್ನುವುದು ನಮ್ಮ ಉದ್ದೇಶವಾಗಿರುತ್ತದೆ.

100-150 ರೂಪಾಯಿಗಳ ಸಂಬಳವನ್ನು ತೆಗೆದುಕೊಳ್ಳತಕ್ಕಂಥವನು 5 ರೂಪಾಯಿ ಕೊಟ್ಟು ಒಂದು ಕೆಜಿ ಬೇಳೆಯನ್ನು ಕೊಂಡು ತಿನ್ನಬೇಕೆಂದರೆ ವರ್ಷಕ್ಕೆ ಒಂದು ಸಾರಿಯೂ ಊಟಮಾಡಲಿಕ್ಕೆ ಸಾಧ್ಯವಾಗುತ್ತಿಲ್ಲ. ನಾವು ಬೆಳೆಯನ್ನು 8 ಲಕ್ಷ ಟನ್ ಬೆಳೆದರೂ ಕೂಡ ಎಣ್ಣೆ ಕಾಳನ್ನು ಬೆಳೆದರೂ ಅದು ವ್ಯಾಪಾರ ಮಾಡತಕ್ಕಂಥ ಯಾರದೋ ಕೈಯಲ್ಲಿ

ಕೊಟ್ಟಿರುತ್ತೇವೆ. ಹತ್ತಿ ಯಾರದೋ ಕೈಯಲ್ಲಿ ಕೊಟ್ಟಿರುತ್ತೇವೆ. ಕಬ್ಬಿನ ಬೆಳೆಯನ್ನು ಯಾರದೋ ಕೈಯಲ್ಲಿ ಕೊಟ್ಟಿರುತ್ತೇವೆ. ಹೀಗೆ ಎಲ್ಲವನ್ನೂ ಬೇರೆಯವರ ಕೈಯಲ್ಲಿ ಕೊಟ್ಟರೆ ಇಲ್ಲಿರತಕ್ಕಂಥ ರೈತರ ಮಕ್ಕಳಿಗೆ ಉದ್ಯೋಗ ದೊರಕಿಸುವುದು ಹೇಗೆ ಎಂದು ಕೇಳುತ್ತೇನೆ. ಕೊಳ್ಳತಕ್ಕ ಶಕ್ತಿಯನ್ನು ಬೆಳೆಸುವುದು ಹೇಗೆ ಎಂಬ ಬಗ್ಗೆ ಯೋಚನೆ ಮಾಡಬೇಕಾಗುತ್ತದೆ. ಈ ದೃಷ್ಟಿಯಿಂದ ನಾವು ಬಹಳ ಕೆಲಸವನ್ನು ಮಾಡಬೇಕಾಗುತ್ತದೆ ಎಂಬ ಮಾತನ್ನು ಹೇಳುತ್ತಾ ಮಾನ್ಯ ಸದಸ್ಯರಾದ ವೈ. ರಾಮಕೃಷ್ಣ ಅವರು ಕೆಲವು ವಿಷಯಗಳನ್ನು ಪ್ರಸ್ತಾಪ ಮಾಡಿದ್ದಾರೆ. ಅವರು ಎಲ್ಲವನ್ನೂ ಮಫತ್ತಾಗಿ ಕೊಡಬೇಕೆಂದು ಹೇಳಿದರು.

ಶ್ರೀ ಭೀಮಣ್ಣ ಖಂಡ್ರೆ:- ಮಾನ್ಯ ಮಂತ್ರಿಗಳು ಕಬ್ಬಿನ ವಿಚಾರದಲ್ಲಿ ಹೇಳುತ್ತಾ ಕೇಂದ್ರ ಸರ್ಕಾರದವರಿಗೆ ಒತ್ತಾಯ ಮಾಡಬೇಕು ಎಂದು ಹೇಳಿದರು. ಆದರೆ ವಾಸ್ತವಿಕವಾಗಿ ಏನು ಅನ್ಯಾಯವಾಗುತ್ತಿದೆ. ಇದರ ಬಗ್ಗೆ ರಾಜ್ಯ ಸರ್ಕಾರದವರೂ ಗಮನ ಹರಿಸಬೇಕು ವಿಚಾರ ಮಾಡಬೇಕು. ಈಗ ನೀವು ಇಲ್ಲಿ 17.60 ಪರ್ಸೆಂಟ್ ಟ್ಯಾಕ್ಸ್ ತೆಗೆದುಕೊಳ್ಳುತ್ತಿದ್ದೀರಿ. ಈಗ ಇನ್ನು 2 ಪರ್ಸೆಂಟ್ ಹೆಚ್ಚು ಮಾಡಿದರೆ 19.60 ಪರ್ಸೆಂಟ್ ಆಗುತ್ತದೆ. ಆದರೆ ಆಂಧ್ರದಲ್ಲಿ 10 ಪರ್ಸೆಂಟ್ ಇದೆ, ಮಹಾರಾಷ್ಟ್ರದಲ್ಲಿ ಇನ್ನೂ ಕಡಿಮೆ ಇದೆ. ಆದರೆ ನಮ್ಮಲ್ಲಿ ಮಾತ್ರ ಹೆಚ್ಚಾಗಿದೆ. ಭಾರತ ಸರ್ಕಾರದವರು ಕೇಳಿಕೊಳ್ಳುವುದಿಲ್ಲ. ಆದರೆ ಇಲ್ಲೆ ರಾಜ್ಯ ಸರ್ಕಾರದವರು ಎಷ್ಟರಮಟ್ಟಿಗೆ ಕಬ್ಬು ಬೆಳೆಗಾರರಿಗೆ ಸಹಾಯ ಮಾಡುತ್ತೀರಿ ಎಂಬುದನ್ನು ಹೇಳಬೇಕು.

ಶ್ರೀ ಕೆ.ಹೆಚ್. ರಂಗನಾಥ್:- ನಮ್ಮ ರಾಜ್ಯದ ಮಟ್ಟಿಗೆ ಹೇಳುವುದಾದರೆ ಸಹಕಾರಿ ಕ್ಷೇತ್ರದಲ್ಲಿ ಬಹಳ ಸಕ್ಕರೆ ಕಾರ್ಖಾನೆಗಳಿವೆ. ಸಂಕೇಶ್ವರ ಮತ್ತು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ಬಿಟ್ಟರೆ ಬಾಕಿ ಎಲ್ಲಾ ಕಾರ್ಖಾನೆಗಳೂ ಕೂಡ ನಷ್ಟದಲ್ಲೇ ಕೆಲಸ ಮಾಡುತ್ತಿವೆ. ಏತಕ್ಕೆ ಈ ರೀತಿ ನಷ್ಟವಾಗುತ್ತಿದೆ? ಸಿಕ್ಕಾಪಟ್ಟೆ ವೆಚ್ಚವನ್ನು ಏತಕ್ಕೆ ಮಾಡಬೇಕು? ಇವತ್ತು ಬೀದರ್‌ನಲ್ಲಿರತಕ್ಕ ಸಕ್ಕರೆ ಕಾರ್ಖಾನೆ ಕೂಡ ನಷ್ಟದಲ್ಲಿದೆ. ಅವರಿಗೆ ಸಂಬಳ ಕೊಡುವುದಕ್ಕೆ ಹಣ ಇಲ್ಲ. ಸರ್ಕಾರದವರು 23 ಲಕ್ಷ ರೂಪಾಯಿ ಕೊಟ್ಟಿದ್ದೇವೆ. ಹೀಗೆ ಎರಡು ಕಾರ್ಖಾನೆ ಬಿಟ್ಟರೆ ಎಲ್ಲವೂ ನಷ್ಟದಲ್ಲಿವೆ? ಒಂದು ಸರಿಯಾದ ಶಿಸ್ತಿನಿಂದ ಕೆಲಸವನ್ನು ಏತಕ್ಕೆ ಮಾಡಬಾರದು?

ಶ್ರೀ ಭೀಮಣ್ಣ ಖಂಡ್ರೆ:- ನೀವು ಅದರ ಬಗ್ಗೆ ಏನು ಕ್ರಮ ತೆಗೆದುಕೊಂಡಿದ್ದೀರಿ? ಇದನ್ನು ಸುಧಾರಿಸುವುದಕ್ಕೆ ಏನಾದರೂ ಕ್ರಮ ತೆಗೆದುಕೊಳ್ಳುತ್ತೀರಾ?

ಶ್ರೀ ಕೆ.ಎಚ್. ರಂಗನಾಥ್:- ನಾವು ತೆಗೆದುಕೊಳ್ಳಬೇಕಾದ ಕ್ರಮ ಒಂದೇ ಒಂದು. ಇದರಲ್ಲಿ ಒಂದು ನಯಾಪೈಸೆಯಷ್ಟು ಲೋಪವಾದರೂ ಕೂಡ ತಪ್ಪಿತಸ್ಥರನ್ನು ಜೈಲಿಗೆ ಕಳಿಸುವಂತೆ ಸೆಕ್ಷನ್ ತಿದ್ದುಪಡಿ ಮಾಡಬೇಕಷ್ಟೆ. ಅದು ಬಿಟ್ಟರೆ ಇನ್ನೇನೂ ಮಾಡುವುದಕ್ಕಾಗುವುದಿಲ್ಲ.

ಶ್ರೀ ವೈ. ರಾಮಕೃಷ್ಣ:- ಯಾವಾಗ ಮಾಡುತ್ತೀರಿ ತಿದ್ದುಪಡಿಯನ್ನು?

ಶ್ರೀ ಕೆ.ಎಚ್. ರಂಗನಾಥ್:- ಮಾಡೋಣ ನೀವೆಲ್ಲಾ ಒಪ್ಪುವುದಾದರೆ ಬೇಗನೇ ಮಾಡೋಣ. ಸಹಕಾರ ಮಂತ್ರಿಗಳೂ ಇಲ್ಲೇ ಇದ್ದಾರೆ. ಅವರಿಗೂ ಹೇಳುತ್ತೇನೆ. ಈ ಬಗ್ಗೆ ಕಾನೂನಿನಲ್ಲಿ ತಿದ್ದುಪಡಿ ಮಾಡಿ ಈ ರೀತಿ ಅವರಿಗೆ ಪ್ರಾಸಿಕ್ಯೂಷನ್ ಮಾಡುವುದಕ್ಕೂ ವ್ಯವಸ್ಥೆ ಮಾಡಬೇಕು. ಇಲ್ಲದೇ ಹೋದರೆ ಯಾವ ಸಹಕಾರಿ ಸಕ್ಕರೆ ಕಾರ್ಖಾನೆಗಳೂ ಉದ್ಧಾರವಾಗುವುದಿಲ್ಲ. ನಾನು ಕೇಳುತ್ತೇನೆ, ಪಾಂಡವಪುರ ಮತ್ತು ಸಂಕೇಶ್ವರ ಸಕ್ಕರೆ ಕಾರ್ಖಾನೆಗಳು ಲಾಭದಾಯಕವಾಗಿ ಕೆಲಸ ಮಾಡುತ್ತಿರುವಾಗ ಬೇರೆ ಸಕ್ಕರೆ ಕಾರ್ಖಾನೆಗಳು ಏತಕ್ಕೆ ನಷ್ಟದಲ್ಲಿ ಕೆಲಸ ಮಾಡುತ್ತಿವೆ? ಏನು ಕಾರಣ? ಅವರಿಗೆ ಬೇರೆ ಏನೂ ವಿಶೇಷ ಸೌಲಭ್ಯಗಳನ್ನೂ ಮಾಡಿಕೊಟ್ಟಿಲ್ಲ. ಬೇರೆಯವರ ಹಾಗೇ ಅಲ್ಲೂ ಕಬ್ಬು ಬೆಳೆದು ಲಾಭ ಮಾಡುತ್ತಿದ್ದಾರೆ. ಅಲ್ಲಿ ಉತ್ಪತ್ತಿ ಜಾಸ್ತಿಯಾಗಿದೆ. ವರ್ಷದಲ್ಲಿ 10 ತಿಂಗಳು ಕ್ರಷ್ ಮಾಡುತ್ತಾರೆ. ಅವರು ಕಡಿಮೆ ಸಿಬ್ಬಂದಿಯನ್ನು ಇಟ್ಟುಕೊಂಡಿದ್ದಾರೆ. ಆ ರೀತಿ ಬೇರೆಯವರೂ ಮಾಡಬೇಕು. ಇಲ್ಲಿ ನೀವು ನೆಂಟರಿಗೆ, ಭಾವ, ಮಗ, ಅಳಿಯ, ತಮ್ಮ, ಚಿಕ್ಕಪ್ಪನ ಮಗ, ಅಂತ ಎಲ್ಲರಿಗೂ ಕೆಲಸ ಕೊಟ್ಟುಕೊಂಡು ಸಿಬ್ಬಂದಿ ವೆಚ್ಚವನ್ನು ಜಾಸ್ತಿ ಮಾಡಿಕೊಂಡು ಹೋದರೆ ನಷ್ಟ ಆಗದೇ ಇನ್ನೇನಾಗುತ್ತೆ.

ಶ್ರೀ ವೈ. ರಾಮಕೃಷ್ಣ:- ಸಹಕಾರಿ ಖಾತೆಯನ್ನು ಇಟ್ಟುಕೊಂಡಿದ್ದಿರಲ್ಲ ಆಗ ಏನು ಮಾಡಿದ್ದೀರಿ ನೀವು. ಈಗ ನೀವು ಆ ಖಾತೆಯನ್ನು ಬಿಟ್ಟು ಬೇರೆ ಖಾತೆಯನ್ನು ವಹಿಸಿಕೊಂಡಮೇಲೆ ಈ ರೀತಿ ಉಪದೇಶ ಮಾಡುತ್ತಿದ್ದೀರಲ್ಲಾ ಏತಕ್ಕೆ.

ಶ್ರೀ ಕೆ.ಎಚ್. ರಂಗನಾಥ್:- ನಾನು ಹೇಳುತ್ತಿರುವುದೇನೆಂದರೆ ಲಾಭದಾಯಕವಾಗಿ ಕೆಲಸ ಮಾಡುವುದಕ್ಕೆ ಸಾಧ್ಯವಿದೆ ಎಂದು. ಅದಕ್ಕೆ ಎರಡು ಸಕ್ಕರೆ ಕಾರ್ಖಾನೆಗಳ ಉದಾಹರಣೆಯನ್ನು ಕೊಟ್ಟು ಹೇಳುತ್ತಿದ್ದೇನೆ. ಅವರು ಲಾಭವನ್ನು ಮಾಡುತ್ತಿರುವಾಗ ಬೇರೆಯವರಿಗೆ ಏತಕ್ಕೆ ಲಾಭ ಮಾಡುವುದಕ್ಕಾಗುವುದಿಲ್ಲ ಎಂದು ಕೇಳುತ್ತಿದ್ದೇನೆ. ಆಡಳಿತವನ್ನು ಸರಿಯಾಗಿ ನಡೆಸಿದರೆ ಎಲ್ಲಾ ಸರಿಯಾಗಿ ನಡೆಯುತ್ತದೆ. ಅವರ ಜವಾಬ್ದಾರಿಯ ಮೇಲೆ ಎಲ್ಲಾ ಸಂಸ್ಥೆಗಳೂ ನಡೆಯುತ್ತವೆ. ಮಾನ್ಯ ಸದಸ್ಯರಾದ ಬಸಪ್ಪನವರು ಮಾತನಾಡುತ್ತಾ ಕೊಳ್ಳೇಗಾಲದ ಕಾರ್ಖಾನೆ ಹುಟ್ಟುತ್ತಲೇ ಬಾಲಗ್ರಹ ಹೊಡೆಯತಕ್ಕ ಪರಿಸ್ಥಿತಿಯಲ್ಲಿದೆ ಎಂದರು.

ಶ್ರೀ ಭೀಮಣ್ಣ ಖಂಡ್ರೆ:- ನಮ್ಮ ಸಕ್ಕರೆ ಕಾರ್ಖಾನೆಯಲ್ಲಿ 60 ಲಕ್ಷ ರೂಪಾಯಿಯವರೆಗೂ ಸಾಲ ಇದೆ. ಬೇರೆಯವರು 10 ತಿಂಗಳು ನಡೆಸಿದರೆ ನಾವು 4 ತಿಂಗಳೂ ಕೂಡ ನಡೆಸುವುದಕ್ಕೆ ಕಷ್ಟವಾಗುತ್ತಿದೆ.

ಶ್ರೀ ಕೆ.ಎಚ್. ರಂಗನಾಥ್:- ಈಗ ನಾನು ಪ್ರಾಸಂಗಿಕವಾಗಿ ಆ ಮಾತು ಬಂದಿದ್ದರಿಂದ ಈ ವಿಷಯ ಹೇಳಿದೆ. ಇದು ನನ್ನ ಖಾತೆಗೆ ಸಂಬಂಧಪಟ್ಟಿದ್ದಲ್ಲ. ಸಹಕಾರ ಖಾತೆಗೆ

ಸಂಬಂಧಿಸಿದ್ದು. ಈಗ ತಾವೂ (ಭೀಮಣ್ಣ ಖಂಡ್ರೆಯವರು) ಸಹಕಾರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರಾಗಿದ್ದೀರಿ. ನೀವು ಸಿಬ್ಬಂದಿ ವೆಚ್ಚ ಮತ್ತಿತರ ವೆಚ್ಚಗಳನ್ನು ಕಡಿಮೆ ಮಾಡುತ್ತಾ ಬನ್ನಿ. ಈಗ ಇನ್ನೊಂದೇನಾಗಿದೆ ಎಂದರೆ ರೈತ ಕಬ್ಬನ್ನು ಕಡಿದು 15 ದಿವಸವಾದರೂ ಫ್ಯಾಕ್ಟರಿಗೂ ತೆಗೆದುಕೊಂಡು ಹೋಗುವುದಕ್ಕಾಗುವುದಿಲ್ಲ. ಅವನು ಕಾಯುತ್ತಾ ಕುಳಿತಿರುತ್ತಾನೆ. ಆದರೆ ಪಾಂಡವಪುರ ಮುಂತಾದ ಕಡೆಗಳಲ್ಲಿ ಕಬ್ಬು ಕಡಿದ ಎರಡು ಮೂರು ದಿವಸದಲ್ಲೇ ಫ್ಯಾಕ್ಟರಿಗೆ ಬಂದು ಬೀಳುತ್ತದೆ. ಆಗ ತಕ್ಷಣ ಕ್ರಷ್ ಮಾಡುವುದರಿಂದ ಒಣಗಿರುವುದಿಲ್ಲ. ಸಕ್ಕರೆ ಉತ್ಪಾದನೆ ಹೆಚ್ಚಾಗಿ ಆಗುತ್ತವೆ. ಆಗ ಲಾಭವೂ ಹೆಚ್ಚಾಗಿ ಬರುತ್ತದೆ. ನನ್ನ ಕ್ಷೇತ್ರದಲ್ಲೂ ಅಷ್ಟೆ ರೈತ ಕಬ್ಬು ಕಡಿದು 8-10 ದಿವಸವಾದರೂ ಅದು ಅಲ್ಲೇ ಬಿದ್ದಿರುತ್ತದೆ. ಅದನ್ನು ಅವನು ಫ್ಯಾಕ್ಟರಿಗೆ ತರುವುದಕ್ಕಾಗುವುದಿಲ್ಲ. ಇದರಲ್ಲಿ ಏನೇನೋ ಒಳ ವ್ಯವಹಾರಗಳು ನಡೆಯುತ್ತವೆ. ಇದರಲ್ಲಿ ನಡೆಯುವ ವ್ಯವಹಾರಗಳ ಬಗ್ಗೆ ಕೆದಕುತ್ತಾ ಹೋದರೆ ಬಹಳ ಕಷ್ಟವಾಗುತ್ತದೆ. ಬಹಳ ವಿಷಯಗಳು ಬೆಳಕಿಗೆ ಬರುತ್ತವೆ.

ಶ್ರೀ **ಹೆಚ್.ಡಿ. ಚೌಡಯ್ಯ**:- ಮಾನ್ಯ ಮಂತ್ರಿಗಳು ಮಾತನಾಡುತ್ತಾ ಹೇಳಿದಿರಿ ಸಹಕಾರಿ ಸಕ್ಕರೆ ಕಾರ್ಖಾನೆಯಲ್ಲಿ ಲೋಪವಾದರೆ ಅವರನ್ನು ಕಂಪನಿ ಆಕ್ಟ್ ಅಮೆಂಡ್ ಮಾಡಿ ಜೈಲಿಗೆ ಕಳಿಸಬೇಕಾಗುತ್ತದೆ ಎಂದು. ಮೈಸೂರು ಸಹಕಾರಿ ಸಕ್ಕರೆ ಕಾರ್ಖಾನೆ ಸರ್ಕಾರಿ ಕಾರ್ಖಾನೆ, ಸರ್ಕಾರದ ಷೇರ್ 55 ಪರ್ಸೆಂಟ್ ಇದೆ. ಮ್ಯಾನೇಜಿಂಗ್ ಡೈರೆಕ್ಟರ್ ಮತ್ತು ಅಧ್ಯಕ್ಷರನ್ನು ನೇಮಕ ಮಾಡತಕ್ಕವರು ನೀವು. ಡೈರೆಕ್ಟರ್‌ಗಳನ್ನು ನಾಮಿನೇಟ್ ಮಾಡುವುದು ನೀವು. ಪೂರ್ಣವಾಗಿ ಅದು ಸರ್ಕಾರದ ಹಿಡಿತದಲ್ಲೇ ಇದೆ. ಅಲ್ಲಿ ಕೋಟ್ಯಾಂತರ ರೂಪಾಯಿ ನಷ್ಟವಾಗಿದೆ. ಈಗ ಇದರಲ್ಲಿ ಯಾರನ್ನು ಜೈಲಿಗೆ ಕಳಿಸಬೇಕು ಸ್ವಾಮಿ?

ಶ್ರೀ **ಕೆ.ಎಚ್. ರಂಗನಾಥ್**:- ಅದು ನನಗೆ ಸಂಬಂಧಪಟ್ಟ ವಿಷಯವಲ್ಲ. ನಾನು ವ್ಯವಸಾಯ ಇಲಾಖೆಯ ಮಂತ್ರಿ. ನಾನು ಯಾವುದೋ ವಿಷಯವನ್ನು ಸುಮ್ಮನೆ ಪ್ರಾಸಂಗಿಕವಾಗಿ ಹೇಳಿದರೆ ಈಗ ವಿಷಯ ಎಲ್ಲೆಲ್ಲೋ ಹೋಗುತ್ತಿದೆ. ಸರಿಯಾಗಿ ಕೆಲಸ ಮಾಡಿದರೆ ರೈತನಿಗೆ ಅನುಕೂಲವಾಗುವಂತೆ ಮಾಡಬಹುದು; ಸಕ್ಕರೆ ಕಾರ್ಖಾನೆಗಳು ಸರಿಯಾಗಿ ಶಿಸ್ತಿನಿಂದ ಕೆಲಸ ಮಾಡಿ, ಲಾಭ ಮಾಡಿದರೆ ರೈತನಿಗೆ, ಸರಿಯಾದ ಬೆಲೆಯನ್ನು ಕೊಡುವುದಕ್ಕೆ ಸಾಧ್ಯ ಎಂಬ ವಿಚಾರವನ್ನು ಹೇಳುವುದಕ್ಕೆ ಪ್ರಯತ್ನಪಡುತ್ತಿದ್ದೇನೆ.

**ಛೇರ್ಮನ್**:- ಮಂಡ್ಯ ಸಕ್ಕರೆ ಕಾರ್ಖಾನೆ ವಿಚಾರವನ್ನು ಈಗ ಏತಕ್ಕೆ ಎತ್ತುತ್ತಿದ್ದೀರಿ. ಮಂಡ್ಯ ಸಕ್ಕರೆ ಕಾರ್ಖಾನೆ ವಿಚಾರವಾಗಿ ಚೆನ್ನಾಗಿ ಚೌಡಯ್ಯನವರು ತಿಳಿದುಕೊಂಡಿದ್ದೀರಿ. ಈ ವಿಚಾರವನ್ನು ಬೇಕಾದರೆ ಬೇರೆ ಸಮಯದಲ್ಲಿ ಎರಡು ಮೂರು ಗಂಟೆ ಬೇಕಾದರೂ ಚರ್ಚೆ ಮಾಡಬಹುದು. ಈ ಸಮಯದಲ್ಲಿ ಎತ್ತತಕ್ಕ ಪ್ರಶ್ನೆ ಅದಲ್ಲ.

**ಶ್ರೀ ಕೆ.ಎಚ್. ರಂಗನಾಥ್:-** ಮಾನ್ಯ ಸದಸ್ಯರಾದ ರಾಮಕೃಷ್ಣ ಅವರು ಕೆಲವು ವಿಚಾರಗಳನ್ನು ಹೇಳುತ್ತಾ ಸಣ್ಣ ಹಿಡುವಳಿದಾರರ ಬಗ್ಗೆ ಹೇಳಿದ್ದಾರೆ. ಬಾವಿ ತೆಗೆದಾಗ ನೀರು ಬರದೇಹೋದರೆ ಅಂಥ ಸಾಲವನ್ನು ವಜಾ ಮಾಡಿ ಎಂದು ಹೇಳಿದ್ದಾರೆ. ಈಗ ನಾವು 50 ಪರ್ಸೆಂಟ್ ಸಬ್ಸಿಡಿ ಕೊಡುತ್ತಿದ್ದೇವೆ. ನೀರು ಬಾವಿಯಲ್ಲಿ ಬೀಳದೆಹೋದರೆ ಸಾಲವನ್ನು ಮಾಫಿ ಮಾಡಬೇಕು ಎಂದು ಸರ್ಕಾರ ಅಭಿಪ್ರಾಯಪಟ್ಟಿದೆ. ಆಮೇಲೆ ಬೀಜ ಹುಟ್ಟದೇಹೋದರೆ ಅಂತ ಸಾಲವನ್ನೂ ವಜಾ ಮಾಡಿ ಎಂದು ಹೇಳಿದ್ದಾರೆ. ಸಾಲಗಳನ್ನು ಸಹಕಾರ ಸಂಘಗಳಿಂದ ಕೊಡುತ್ತಾರೆ. ಸಹಕಾರಿ ಸಂಘಗಳು ಸರಿಯಾದಷ್ಟು ಲಾಭ ಸಂಪಾದನೆ ಮಾಡಿಕೊಂಡು ಈ ರೀತಿ ವಜಾ ಮಾಡುವ ವಿಷಯದಲ್ಲಿ ಸರ್ವಸದಸ್ಯರ ಸಭೆಯಲ್ಲಿ ತೀರ್ಮಾನ ತೆಗೆದುಕೊಂಡರೆ ನಮ್ಮ ಅಭ್ಯಂತರವೇನೂ ಇಲ್ಲ. ಆದರೆ ಸರ್ಕಾರವೇ ಇದರ ಬಗ್ಗೆ ಕೈ ಹಾಕುವುದು ಕಷ್ಟವಾಗುತ್ತದೆ. ತಕ್ಷಣ ನಾವು ಏನೂ ಮಾಡುವುದಕ್ಕಾಗುವುದಿಲ್ಲ.

**ಶ್ರೀ ಎಂ.ವಿ. ರಾಜಶೇಖರನ್:-** ಸಾಲವನ್ನು ಮನ್ನಾ ಮಾಡುವುದು ಮುಖ್ಯವಲ್ಲ. ಆ ರೀತಿ ಸರಿಯಾದ ಬೀಜವನ್ನು ಕೊಡದೇಹೋದರೆ ಅವರಿಗೆ ಶಿಕ್ಷೆ ಕೊಡಬೇಕು. ಯಾರು ಆ ರೀತಿಯ ಬೀಜಗಳನ್ನು ರೈತರಿಗೆ ಕೊಟ್ಟಿರುತ್ತಾರೋ ಅವರ ಮೇಲೆ ಕ್ರಮ ತೆಗೆದುಕೊಂಡು ಶಿಕ್ಷೆ ನೀಡಬೇಕು. ಏಕೆಂದರೆ ರೈತ ಒಂದು ವರ್ಷವೆಲ್ಲಾ ಅದಕ್ಕಾಗಿ ನಷ್ಟ ಮಾಡಿಕೊಳ್ಳಬೇಕಾಗುತ್ತದೆ. ಆದ್ದರಿಂದ ತಪ್ಪಿತಸ್ಥರಿಗೆ ಶಿಕ್ಷೆ ನೀಡುವಂತೆ ವ್ಯವಸ್ಥೆ ಮಾಡಬೇಕು.

**ಶ್ರೀ ಕೆ.ಎಚ್. ರಂಗನಾಥ್:-** ಕರ್ನಾಟಕ ರಾಜ್ಯದಲ್ಲಿ ಬೀಜಗಳನ್ನು ಸರ್ಟಿಫೈ ಮಾಡತಕ್ಕಂತಹ ಸಂಸ್ಥೆ ಏನಿದೆ, ಅದು ರಾಷ್ಟ್ರಮಟ್ಟದಲ್ಲಿ ಬಹಳ ಮೆಚ್ಚುಗೆಯನ್ನು ಪಡೆದಿರತಕ್ಕಂತಹ ಸಂಸ್ಥೆಯಾಗಿದೆ. ಬೀಜಗಳನ್ನು ಉತ್ಪಾದನೆ ಮಾಡತಕ್ಕಂತಹದ್ದರಲ್ಲಿ ಕೆಲವು ಜನ ಲೋಪವನ್ನು ಮಾಡುತ್ತಿದ್ದಾರೆಂಬುದು ನನಗೂ ಗೊತ್ತಿದೆ. ನನ್ನ ಜಿಲ್ಲೆಯಲ್ಲೇ ಈರೀತಿ ಯಾರ್‍ಯಾರು ಮಾಡುತ್ತಿದ್ದಾರೆಂಬುದು ನನಗೆ ಗೊತ್ತಿದೆ. ಅವರಿಗೆ ತೀವ್ರವಾದ ಶಿಕ್ಷೆಯನ್ನು ಕೊಡಬೇಕಾಗುತ್ತದೆ. ಏಕೆಂದರೆ ರೈತನು ಇವರು ಕೊಡತಕ್ಕಂತಹ ಬೀಜವನ್ನು ನಂಬಿಕೊಂಡಿರುತ್ತಾನೆ. ಉದಾಹರಣೆಗೆ ಹೇಳುವುದಾದರೆ, ವರಲಕ್ಷ್ಮಿ ಬೀಜ ಎಂಬುದಾಗಿ ಕೊಟ್ಟಿದ್ದಾರೆ. ಅದು ಲಕ್ಷ್ಮಿಯೂ ಆಗಿಲ್ಲ. ಹತ್ತಿಯೂ ಆಗಿಲ್ಲ. ಸುಮ್ಮನೆ ಉದ್ದಕ್ಕೆ ಬೆಳೆದು ನಿಂತಿದೆ. ಆ ಬೀಜವನ್ನೂ ಕೂಡ ಸೊಸೈಟಿಯ ಮುಖಾಂತರ ಕೊಟ್ಟಿದ್ದಾಗಿದೆ. ನಮ್ಮ ರಾಮೇಗೌಡರು ವ್ಯವಸಾಯ ಮಂತ್ರಿಗಳಾಗಿದ್ದಾಗ ನಾನೇ ಅವರನ್ನು ಇದರ ಬಗ್ಗೆ ಏನಾದರೂ ಸಹಾಯ ಮಾಡಿ ಎಂಬುದಾಗಿ ಹೇಳುತ್ತಿದ್ದೆ. ಈಗ ಎಲ್ಲರೂ ಬಂದು ನನ್ನನ್ನೇ ಮುತ್ತಿಕೊಂಡು ಏನಾದರೂ ಸಹಾಯ ಮಾಡಿ ಎಂಬುದಾಗಿ ಕೇಳುತ್ತಿದ್ದಾರೆ. ಇದಕ್ಕೆ ತೀವ್ರವಾದ ಶಿಕ್ಷೆಯನ್ನೇ ಕೊಡಬೇಕಾಗುತ್ತದೆ. ಅವರ ಮೇಲೆ ಕ್ರಮವನ್ನೂ ಕೂಡ ತೆಗೆದುಕೊಳ್ಳಬೇಕಾಗುತ್ತದೆ. ಏಕೆಂದರೆ ನಾವು ಇವತ್ತು ಇದನ್ನು ಹೆಚ್ಚು ವಿಚಕ್ಷಣೆಯಿಂದ ಸಪ್ಲೈ ಮಾಡುತ್ತಿದ್ದೇವೆ. ಇದರಲ್ಲಿ ಅಲ್ಲಿ ಇಲ್ಲಿ ಸ್ವಲ್ಪ ಲೋಪದೋಷ ಆಗಿರಬಹುದು. ಮನುಷ್ಯ ಕೆಲಸ ಮಾಡುತ್ತಿರತಕ್ಕಂತಹ

ಸಂದರ್ಭದಲ್ಲಿ ತಪ್ಪಾಗುತ್ತದೆ. ಆ ತಪ್ಪಿಗೆ ಅನುಗುಣವಾಗಿ ಶಿಕ್ಷೆಯನ್ನು ಕೊಡಬೇಕಾದುದು ಸರ್ಕಾರದ ಕರ್ತವ್ಯ ಇದೆ. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಮತ್ತೆ ತಾವು ಬೀಜ ಉತ್ಪಾದನೆಯ ಬಗ್ಗೆ ಮಾತನಾಡಿದ್ದೀರಿ. ನಮಗೆ ಹೈ ಈಲ್ಡಿಂಗ್ ವೆರೈಟಿಯ ರಾಗಿ, ಭತ್ತದ ಹಾಗೂ ವರಲಕ್ಷ್ಮಿ ಹತ್ತಿಯ ಬೀಜದ ಕೊರತೆ ಇದೆ. ಮತ್ತೆ ಸಿ.ಎಚ್.ಎಸ್. 5ರಲ್ಲಿ ನಮಗೆ ಕೊರತೆಯಾಗಿದೆ. ಈ ರೀತಿಯ ತೊಂದರೆಯಾಗಿರುವುದರಿಂದ ನಾವು ಬೇರೆ ರಾಜ್ಯಗಳಿಂದ ತಂದು ಇಲ್ಲಿ ಅದನ್ನು ಮಾರಾಟ ಮಾಡತಕ್ಕಂತಹ ಪರಿಸ್ಥಿತಿ ಕೂಡ ಇವತ್ತು ನಮಗೆ ಒದಗಿಬಂದಿದೆ.

ಮತ್ತೆ ಮಾನ್ಯ ಬಸಪ್ಪನವರು ನಿನ್ನೆ ವರಲಕ್ಷ್ಮಿ ಬೀಜದ ಬಗ್ಗೆ ಮಾತನಾಡುತ್ತಾ ನಮಗೆ ಎಷ್ಟು ಬೇಕೋ ಅಷ್ಟನ್ನು ಬೆಳೆಯದೆ ಹೆಚ್ಚಿಗೆ ಬೆಳೆದಿದ್ದುದರಿಂದ ಅದನ್ನು ಹೆಚ್ಚಿಗೆ ಬೆಲೆಗೆ ಕೊಂಡು ಕೊಂಡು, ಅದನ್ನು ಈಗ ಅದೇ ಬೆಲೆಗೆ ಮಾರುವುದಕ್ಕೆ ಸಾಧ್ಯವಾಗದಿದ್ದುದರಿಂದ ನಷ್ಟವಾಗತಕ್ಕಂತಹ ಪರಿಸ್ಥಿತಿ ಬಂತು ಎಂಬ ಮಾತನ್ನು ಹೇಳಿದ್ದಾರೆ. ಅದು ನಿಜ, ಅದು ಈ ಸಭೆಗೂ ಗೊತ್ತಿದೆ. ಸುಮಾರು 3 ಕೋಟಿ ರೂಪಾಯಿಗಳಷ್ಟು ನಷ್ಟವನ್ನು ನಾವು ಕಾಣುತ್ತಿದ್ದೇವೆ. ಇನ್ನು ಮುಂದೆ ಈ ರೀತಿ ನಷ್ಟವಾಗದೇ ಇರುವುದಕ್ಕೆ ಪ್ರಯತ್ನ ಪಡುತ್ತೇನೆ. ಈ ಸಾರಿಯೂ ವರಲಕ್ಷ್ಮಿಯನ್ನು ಬೆಳೆದಿದ್ದೇವೆ. ನಾವು ಬೆಳೆದಂತಹ ಬೀಜಗಳನ್ನು ನಮ್ಮ ಪಕ್ಕದ ರಾಜ್ಯಗಳಾದ ತಮಿಳುನಾಡು ಹಾಗೂ ಆಂಧ್ರಕ್ಕೆ ಕೊಟ್ಟಿದ್ದೇವೆ. ಮತ್ತೆ ಅವರಿಂದ ನಾವು ಬೀಜಗಳನ್ನು ಕೊಂಡುಕೊಂಡಿದ್ದೇವೆ. ಬೇರೆ ಪ್ರೈವೇಟ್ ಏಜೆನ್ಸಿಯವರಿಂದ ಕೊಂಡುಕೊಂಡಿಲ್ಲ.

ಶ್ರೀ ಎಂ.ಸಿ. ಬಸಪ್ಪ:-- ತಮಿಳುನಾಡಿನಿಂದ ಈ ಬೀಜವನ್ನು ಬೆಳೆದಿರುವ ರೈತರಿಂದ ಅವರು ಕೊಂಡುಕೊಂಡು ಅದನ್ನು ನಿಮಗೆ ಮಾರಿದ್ದಾರೆಂಬ ಸುದ್ದಿ ಇದೆ.

**Sri K.H. Ranganath:** There is no compromise in that, I am the last person to compromise in such things. ಅದನ್ನು ನಾಮ ನಮ್ಮ ಅಧಿಕಾರಿಗಳ ಮುಖಾಂತರ ಪರೀಕ್ಷೆ ಮಾಡಿಸಿದ್ದೇನೆ. ಈ ರೀತಿ ನಾವು ಕೊಂಡುಕೊಂಡಿಲ್ಲ. ಸರ್ಕಾರದ ಏಜೆನ್ಸಿ ಮುಖಾಂತರವೇ ನಾವು ಕೊಂಡುಕೊಂಡಿದ್ದೇವೆ. ಸುಮಾರು 135 ರೂಪಾಯಿಗಳನ್ನು ಒಂದು ಕೇಜಿಗೆ ಕೊಟ್ಟು ತೆಗೆದುಕೊಂಡಿದ್ದೇವೆ. ಏಕೆಂದರೆ ನಾವು ಹಿಂದೆ ಅವರಿಗೆ ಕೊಟ್ಟಿದ್ದೆವು. ಆದ್ದರಿಂದ ಒಂದು ವೇಳೆ ಅಂತಹದ್ದು ಏನಾದರೂ ಇದ್ದರೆ ನನಗೆ ತಿಳಿಸಿ, ಮುಂದೆ ನಾನು ಅದರ ಬಗ್ಗೆ ಕ್ರಮ ತೆಗೆದುಕೊಳ್ಳುವ ಬಗ್ಗೆ ಆಲೋಚನೆ ಮಾಡುತ್ತೇನೆ.

ಶ್ರೀಮಾನ್ ರಾಮಕೃಷ್ಣರವರು ವ್ಯವಸಾಯಗಾರರಿಗೆಲ್ಲಾ ಬಸ್ ಫ್ರೀ ಪಾಸ್‌ನ್ನು ಕೊಟ್ಟುಬಿಡಿ ಎಂಬುದಾಗಿ ಹೇಳಿದರು.

ಶ್ರೀ ವೈ. ರಾಮಕೃಷ್ಣ:- ಮಲೆನಾಡಿನಲ್ಲಿರತಕ್ಕಂತಹ ಕಾಫಿ ಪ್ಲಾಂಟ್‌ನಲ್ಲಿ ಕೆಲಸ ಮಾಡತಕ್ಕಂತಹ ಕೆಲಸಗಾರರು ಏನಿದ್ದಾರೆ, ಅವರು ಕಂಟ್ರಾಕ್ಟ್‌ದಾರರ ಕೈಕೆಳಗೆ ಸಿಕ್ಕಿಹಾಕಿಕೊಂಡು

ಬಿಟ್ಟಿದ್ದಾರೆ. ಅವರಿಗೆ ಫ್ರೀ ಬಸ್‌ಪಾಸ್ ಕೊಟ್ಟುಬಿಟ್ಟರೆ ಅವರು ಎಲ್ಲಿ ಜಾಸ್ತಿ ಕೂಲಿ ಸಿಗುತ್ತದೋ ಅಲ್ಲಿ ಕೆಲಸ ಮಾಡುವುದಕ್ಕೆ ಅನುಕೂಲವಾಗುತ್ತದೆ. ನಾನು ಎಲ್ಲ ವ್ಯವಸಾಯಗಾರರಿಗೂ ಫ್ರೀ ಬಸ್‌ಪಾಸ್ ಕೊಡಬೇಕೆಂದು ಹೇಳಲಿಲ್ಲ.

**ಶ್ರೀ ಕೆ.ಎಚ್. ರಂಗನಾಥ್:-** ಕಾಫಿ ಪ್ಲಾಂಟರ್ಸ್ ಬಗ್ಗೆ ಮಾನ್ಯ ರಾಮಕೃಷ್ಣ ರವರಿಗಿಂತ ನನಗೆ ಚೆನ್ನಾಗಿ ಗೊತ್ತಿದೆ.

**Sri Y. Ramakrishna:** This is the only method by which we can give them relief.

**ಶ್ರೀ ಕೆ.ಎಚ್. ರಂಗನಾಥ್:-** ಹಾಗಲ್ಲ, ಅವರು ಬೇರೆಬೇರೆ ತೊಂದರೆಗೆ ಒಳಗಾಗಿರುತ್ತಾರೆ. ಪ್ಲಾಂಟೇಷನ್ ಲೇಬರರ್ಸ್‌ನ್ನು ಕೆಲವು ಕಾಂಟ್ರಾಕ್ಟ್‌ದಾರರು ಇಟ್ಟುಕೊಂಡು ಇಷ್ಟು ಜನರನ್ನು ನಿಮ್ಮಲ್ಲಿಗೆ ಕಳುಹಿಸಿಕೊಡುತ್ತೇನೆಂದು, ಕೆಲವು ಜನರನ್ನು ಕಾಯಂ ಆಗಿ ಕೆಲವರನ್ನು ಟೆಂಪರರಿಯಾಗಿ ಕಳುಹಿಸತಕ್ಕಂಥಾದ್ದು ಕೂಡ ಬೇರೆ ಇದೆ. ರಾಜ್ಯದಲ್ಲಿರುವ ಒಟ್ಟು ಎಲ್ಲಾ ವ್ಯವಸಾಯಗಾರರಿಗೂ ಫ್ರೀ ಬಸ್‌ಪಾಸ್ ಕೊಡಬೇಕೆಂಬ ಹೊಸ ಬೇಡಿಕೆಯನ್ನು ನಮ್ಮ ಮುಂದಿಟ್ಟರಲ್ಲ, ಹೇಗೆ ಮಾಡುವುದು ಎಂಬ ಭಯ ನನಗೆ ಬಂದಿತ್ತು.

**ಶ್ರೀ ಎ. ಮುಸಿಯಪ್ಪ:-** ಕರ್ನಾಟಕದಲ್ಲಿ ಯಾವ ರೀತಿ ಸೀಡ್ಸ್ ಫಾರಂಗಳು ಇವೆಯೋ ಅದೇ ರೀತಿಯಲ್ಲಿ ಆಂಧ್ರ ಮತ್ತು ತಮಿಳುನಾಡಿನಲ್ಲೂ ಬೀಜವನ್ನು ಬೆಳೆಯುತ್ತಿಲ್ಲ ಎಂಬುದು ನನ್ನ ಇನ್‌ಫರ್ಮೇಷನ್. ಆದರೆ ಅವರು ನಮಗೇನು ಬೀಜವನ್ನು ಕೊಟ್ಟಿದ್ದಾರೋ ಅದನ್ನು ಖಾಸಗಿಯವರಿಂದ ಅವರು ತೆಗೆದುಕೊಂಡು ನಮಗೆ ಕೊಟ್ಟಿರಬಹುದು. ಅದರ ಬಗ್ಗೆ ತಾವು ವಿಮರ್ಶೆ ಮಾಡಬೇಕು.

**ಶ್ರೀ ಕೆ.ಎಚ್. ರಂಗನಾಥ್:-** ನಮ್ಮಲ್ಲಿ ಯಾವ ರೀತಿಯ ಸರ್ಟಿಫೈಡ್ ಏಜೆನ್ಸಿ ಇದೆಯೋ ಅದೇ ರೀತಿ ಅಲ್ಲೂ ಕೂಡ ಇದೆ. ಅವರಿಂದ ನಾವು ತೆಗೆದುಕೊಂಡಿರುವುದು ಖಾಸಗಿಯವರಿಂದ ತೆಗೆದುಕೊಂಡಿಲ್ಲ. ಒಂದು ವೇಳೆ ಹಾಗೇನಾದರೂ ಇದ್ದರೆ ಅದನ್ನು ವಿಚಾರ ಮಾಡುತ್ತೇನೆ. ಖಾಸಗಿಯವರು ಮಾರಾಟ ಮಾಡಿರುವುದನ್ನು ನಾವು ತೆಗೆದುಕೊಂಡಿಲ್ಲ. ಮತ್ತೆ ನಾವು ತೆಗೆದುಕೊಂಡಿರುವುದೂ ಬಹಳ ಕಡಿಮೆ ಏಕೆಂದರೆ ಈ ಸಾರಿ ಮೇ ತಿಂಗಳ 2, 3ನೇ ವಾರಗಳಲ್ಲಿ ಎಲ್ಲರಿಗೂ ಬೀಜವನ್ನು ಕೊಟ್ಟುಬಿಡಬೇಕೆಂದು ವಿಚಾರ ಮಾಡಿದ್ದೇವೆ. ಆ ರೀತಿ ಕೊಟ್ಟಂತಹ ಬೀಜವನ್ನು ಜೂನ್ ಮೊದಲನೇ ವಾರ ಅಥವಾ ಎರಡನೇ ವಾರದಲ್ಲಿ ಬಿತ್ತನೆ ಮಾಡಿದರೆ ಮಾತ್ರ ನಮಗೆ ಒಳ್ಳೆಯ ಬೆಳೆ ಬರುತ್ತದೆ ಎಂಬ ಭಾವನೆ ನಮಗೆ ಬಂದಿದೆ. ಮತ್ತೆ ನಾವು ಕೇವಲ 280 ಕ್ವಿಂಟಾಲ್ ಮಾತ್ರ ತೆಗೆದುಕೊಂಡಿದ್ದೇವೆ.

ಶ್ರೀ ಎಂ.ಸಿ. ಬಸಪ್ಪ:- ನಮ್ಮಲ್ಲಿ ಸರ್ಕಾರಿ ಫಾರಂ 175 ಎಕರೆಯಲ್ಲಿ ಮಾತ್ರ ಇದೆ. ಇದರಿಂದ ನಮಗೆ ಬೇಕಾಗುವಷ್ಟು ಬೀಜವನ್ನು ಉತ್ಪತ್ತಿ ಮಾಡುವುದಕ್ಕೆ ಸಾಧ್ಯವಾಗುತ್ತಿಲ್ಲ.

ಶ್ರೀ ಕೆ.ಎಚ್. ರಂಗನಾಥ್:- ಅದು ನಿಜ ಇರಬಹುದು. ಆ ಬಗ್ಗೆ ನಾವೂ ಇನ್ನೂ ಯಾವುದೇ ಅಂತಿಮ ತೀರ್ಮಾನ ತೆಗೆದುಕೊಂಡಿಲ್ಲ. ಹಿಂದೆ ಖಾಸಗಿಯವರಿಗೆ ಕೊಟ್ಟು ರೈತರಿಗೆ ಯಾವ ರೀತಿ ಅನ್ಯಾಯವಾಯಿತು ಎಂಬುದು ನಮಗೆಲ್ಲಾ ಗೊತ್ತಿದೆ. ಹಾಗೇನಾದರೂ ಹೆಚ್ಚಿಗೆ ಮಾಡಬೇಕೆಂಬುದರ ಬಗ್ಗೆಯೂ ಯೋಚನೆ ಮಾಡತಕ್ಕಂತಹದ್ದು ಇದೆ. ನೋಡುತ್ತೇನೆ. ಇನ್ನು ಈಗಾಗಲೇ ಎತ್ತು ಗಾಡಿ ಇತರೇ ಸಲಕರಣೆಗಳನ್ನು ಕೊಡತಕ್ಕಂತಹದ್ದರಲ್ಲಿ ಸಬ್‌ಸಿಡಿಯನ್ನು ಕೊಡಬೇಕೆಂದು ಮಾನ್ಯ ಸದಸ್ಯರು ಹೇಳಿದ್ದಾರೆ. ಅದರಂತೆ ಎಸ್.ಎಫ್.ಡಿ.ಎ. ಕಾರ್ಯಕ್ರಮದಲ್ಲಿ ರಾಜ್ಯದಲ್ಲಿರುವ 20 ಜಿಲ್ಲೆಗಳಿಗೂ ಇದನ್ನು ಅನ್ವಯ ಮಾಡಲಾಗಿದೆ. ಅದು ಸರಿಯಾದ ಕಾರ್ಯ ಮಾಡುತ್ತಿದೆ. ಇದರಿಂದ ಸುಮಾರು 20-30 ಸಾವಿರ ಸಣ್ಣ ಹಿಡುವಳಿದಾರರಿಗೆ ಸಬ್‌ಸಿಡಿ ರೂಪದಲ್ಲಿ ಬರುತ್ತಿದೆ.

ಶ್ರೀ ವೈ. ರಾಮಕೃಷ್ಣ:- ನಾನು ಹೇಳಿದ್ದು ಆ ಸಬ್‌ಸಿಡಿಯಲ್ಲ. ರೈತರಿಗೆ ಬೇಕಾದ ಎತ್ತುಗಾಡಿಗಳನ್ನು ಸರ್ಕಾರದವರೇ ಮಾಡಿ ಅದನ್ನು 50 ಪರ್ಸೆಂಟ್‌ಗೆ ಅವರಿಗೆ ಏತಕ್ಕೆ ಒದಗಿಸಿಕೊಡಬಾರದು. ಗ್ರಾಂಟ್‌ನಲ್ಲಿ ಸಬ್‌ಸಿಡಿ ಕೊಡುತ್ತೀರಿ ಅದು ಎಲ್ಲರಿಗೂ ಗೊತ್ತಿದೆ. ಮರ ನಿಮ್ಮಲ್ಲಿದೆ, ಕೆಲಸಗಾರರು ನಿಮ್ಮಲ್ಲಿದ್ದಾರೆ, ವರ್ಕ್‌ಷಾಪ್ ನಿಮ್ಮಲ್ಲಿದೆ.

ಶ್ರೀ ಕೆ.ಎಚ್. ರಂಗನಾಥ್:- ಪ್ರತಿಯೊಬ್ಬರಿಗೂ ಗಾಡಿ ಎತ್ತುಗಳನ್ನು ಕೊಡುತ್ತೇವೆಂದು ಅದರ ಬಗ್ಗೆ ಅಂಕಿ ಅಂಶಗಳನ್ನು ತೆಗೆದುಕೊಳ್ಳುತ್ತಾ ಹೋದರೆ ಎಷ್ಟು ಜನರಿಗೆ ಎತ್ತುಗಳು ಇವೆಯೊ, ಇಲ್ಲವೊ? ಗಾಡಿ ಇದೆಯೊ, ಇಲ್ಲವೊ? ಅದು ದೊಡ್ಡ ಪ್ರಮಾಣದಲ್ಲಿ ಬರಬಹುದು. ಸಲಹೆ ಒಳ್ಳೆಯದಿದ್ದರೂ, ಅದರ ಬಗ್ಗೆ ಯೋಚನೆ ಮಾಡತಕ್ಕಂತಹದ್ದು ಇದೆ. 50 ಭಾಗವನ್ನು ಸಬ್‌ಸಿಡಿ ಮಾಡಿದರೆ ನಮಗೆ ಬರತಕ್ಕಂತಹ ಹಣ ಕೇವಲ ಕಡಿಮೆ ಹಣದಲ್ಲಿ ಲೆಕ್ಕ ಹಾಕುವುದಾದರೆ ಬಹಳ ಕಷ್ಟವಾಗುತ್ತದೆ. ನಿನ್ನೆ ಮಾನ್ಯ ಗಂಗಾಧರನ್ ಅವರು ಲೆಕ್ಕ ಹಾಕಿ 100ಕ್ಕೆ 8 ಪರ್ಸೆಂಟ್ ಖರ್ಚು ಮಾಡುತ್ತಿದ್ದೀರಿ ಎಂಬುದಾಗಿ ಹೇಳಿದ್ದಾರೆ. ತಲೆಯ ಮೇಲೆ 8 ರೂಪಾಯಿ ಮತ್ತೆ ವ್ಯವಸಾಯದ ಮೇಲೆ 8 ಪರ್ಸೆಂಟ್ ಖರ್ಚು ಮಾಡುತ್ತಿದ್ದಾರೆ. ಇದರಲ್ಲಿ ಹೆಚ್ಚಿನ ಭಾಗವನ್ನು ಸಿಬ್ಬಂದಿಗಾಗಿ ಖರ್ಚು ಮಾಡುತ್ತಿದ್ದೀರಿ ಎಂಬುದಾಗಿ ಹೇಳಿದರು. ನಮ್ಮ ಇಲಾಖೆಯವರು ಹೆಚ್ಚಿಗೆ ಸೂಪರ್‌ವಿಷನ್ ಮಾಡತಕ್ಕಂತಹ ಕೆಲಸವೇ ಜಾಸ್ತಿ ಹೊಸದಾಗಿ ಬೆನಾರಸ್ ಸಿಸ್ಟಂನ್ನು ಇಂಟರ್‌ಡ್ಯೂಸ್ ಮಾಡಿದ ಮೇಲೆ ಅದನ್ನೂ ನಾವು ಕಳೆದ ಅಕ್ಟೋಬರ್ ತಿಂಗಳಿಂದ ಪ್ರಾರಂಭ ಮಾಡಿದ್ದೇವೆ. ಇದರಿಂದ 400 ರೈತರಿಗೆ ಒಬ್ಬ ವ್ಯವಸಾಯ ಸಹಾಯಕ ಅಧಿಕಾರಿ ಇರುತ್ತಾನೆ, ನಂತರ ಸಬ್ಜೆಕ್ಟ್ ಸ್ಪೆಷಲಿಸ್ಟ್ ಇರುತ್ತಾರೆ. ಇದರಿಂದ ಅಸಿಸ್ಟೆಂಟ್ ಡೈರೆಕ್ಟರ್ಸ್‌ನ ಸಂಖ್ಯೆ ಜಾಸ್ತಿಯಾಗುತ್ತದೆ. ಡೆಪ್ಯುಟಿ ಡೈರೆಕ್ಟರ್ಸ್‌ನ ಸಂಖ್ಯೆ ಜಾಸ್ತಿಯಾಗುತ್ತದೆ.

ಈ ಒಂದು ಕೆಲಸವನ್ನು ಮಾಡಬೇಕಾದರೆ ವಿಶ್ವವಿದ್ಯಾನಿಲಯದಲ್ಲಿರತಕ್ಕಂಥಾ ಸಂಶೋಧಕರೊಂದಿಗೆ ಮತ್ತು ಡಿಪಾರ್ಟ್‌ಮೆಂಟ್‌ನೊಂದಿಗೆ ಒಂದು ಲಿಂಕ್ ಇರಬೇಕು. ಹಾಗಾದರೇನೇ ಇದರಲ್ಲಿ ಒಂದು ಪ್ರತಿಫಲ ಬರತಕ್ಕದ್ದು. ಇದರಲ್ಲಿ ಏನು ಮಾಡಬೇಕು ಎಂದು ಅವರು ಹೇಳಿದ್ದಾರೆ. ಈ ದೃಷ್ಟಿಯಿಂದ ನಾವು ವರ್ಲ್ಡ್ ಬ್ಯಾಂಕ್‌ನಿಂದ ಸಹಾಯ ಪಡೆದು ಬಾನಾರ್ ಸಿಸ್ಟಂ ಅನ್ನು ಪ್ರಯೋಗ ಮಾಡಿದ್ದೇವೆ. ಮೊನ್ನೇ ತಾನೇ ಬಾನಾರ್ ಅವರು ಬಂದು ನೋಡಿಕೊಂಡು ಹೋದರು. Whether they have been enthusiastic enough, whether they have been attracted by this programme ಇದರ ಬಗ್ಗೆ ನೋಡಬೇಕು ಅಂತ ಅವರು ಇಲ್ಲಿಗೆ ಬಂದು ಕೆಲವು ಪ್ರದೇಶಗಳಿಗೆ ಹೋಗಿ ಟೂರ್ ಮಾಡಿಕೊಂಡು ಬಂದರು. ತಮಗೆ ಹೇಳಬೇಕಾದರೆ ನಮ್ಮ ಇಲಾಖೆಯಲ್ಲಿ ಹೆಚ್ಚಾಗಿ ಕೆಲಸ ಮಾಡುವುದು ಬರೇ ಸೂಪರ್‌ವಿಷನ್ ಕೆಲಸ. ಆದುದರಿಂದ ಈ ಇಲಾಖೆಯಲ್ಲಿ ಸೂಪರ್‌ವಿಷನ್ ಸ್ಟಾಫ್ ಜಾಸ್ತಿಯಾಗಿದೆ. ಬೇರೆ ಬೇರೆ ಅಭಿವೃದ್ಧಿ ಕಾರ್ಯಗಳಿಗಾಗಿ ಎಷ್ಟು ಖರ್ಚಾಗುತ್ತದೆ ಮತ್ತು ಈ ಸ್ಟಾಫ್‌ಗಾಗಿ ಎಷ್ಟು ಖರ್ಚಾಗುತ್ತದೆ ಎನ್ನುವುದನ್ನು ನೋಡಿದರೆ ಹೆಚ್ಚಾಗಿ ಈ ಸೂಪರ್‌ವಿಷನ್ ಸ್ಟಾಫ್‌ಗೆ ಖರ್ಚಾಗುತ್ತದೆ. ಆದರೆ ನಾನು ಇದರ ಬಗ್ಗೆ ಸರಿಯಾದ ಅಂಕಿಅಂಶಗಳನ್ನು ತಯಾರು ಮಾಡಿಕೊಳ್ಳಲಿಕ್ಕೆ ಸಾಧ್ಯವಾಗಲಿಲ್ಲ. ಈಗ ತಾವು ಹೇಳುವುದನ್ನು ಮನಸ್ಸಿನಲ್ಲಿಟ್ಟುಕೊಂಡು ಮುಂದಿನ ಸಾರಿ ಇದರ ಬಗ್ಗೆ ಅಂಕಿ ಅಂಶಗಳನ್ನು ಒದಗಿಸುತ್ತೇನೆ.

ಇನ್ನು ಕೆಲವು ಸದಸ್ಯರು ಡೆಮಾನ್‌ಸ್ಟ್ರೇಷನ್ ಬಗ್ಗೆ ಹೇಳಿದರು. ನಾವು ಈ ಡೆಮಾನ್‌ಸ್ಟ್ರೇಷನ್ ಅನ್ನು ಹೆಚ್ಚಾಗಿ ಬಡವರು ಇರತಕ್ಕಂಥಾ ಕಡೆಗಳಲ್ಲೇ ತೆಗೆದುಕೊಳ್ಳಬೇಕು ಎಂದು ಹೇಳಿದ್ದೇವೆ.

ಶ್ರೀ ವೈ. ರಾಮಕೃಷ್ಣ:- ಹೋಬಳಿಗೆ ಒಂದಾದರೂ ಮಾಡಿ.

ಶ್ರೀ ಕೆ.ಎಚ್. ರಂಗನಾಥ್:- ನಮ್ಮ ರಾಜ್ಯದಲ್ಲಿ ಈ ಡೆಮಾನ್‌ಸ್ಟ್ರೇಷನ್ ಎರಡು ವಿಧವಾಗಿ ಇದೆ. ಒಂದು ಬ್ಲಾಕ್ ಡೆಮಾನ್‌ಸ್ಟ್ರೇಷನ್ ಇನ್ನೊಂದು ಕಾಂಪ್ಯಾಕ್ಟ್ ಡೆಮಾನ್‌ಸ್ಟ್ರೇಷನ್ ಕೆಲವರು ಬ್ಲಾಕ್ ಡೆಮಾನ್‌ಸ್ಟ್ರೇಷನ್ ಬಗ್ಗೆ ಮಾತನಾಡಿದ್ದಾರೆ. ಅದರ ಬಗ್ಗೆ ಹೇಳಬೇಕಾದರೆ ಈಗ ನಾವು 650 ಬ್ಲಾಕ್ ಡೆಮಾನ್‌ಸ್ಟ್ರೇಷನ್ ನಡೆಸಿದ್ದೇವೆ. ಸಣ್ಣ ಹಿಡುವಳಿದಾರರು ಇರುವ ಕಡೆಗಳಲ್ಲಿ ಸುಮಾರು 350 ಬ್ಲಾಕ್‌ಗಳಲ್ಲಿ ಎಲ್ಲಿ ಜನಸಂಖ್ಯೆ ಹೆಚ್ಚು ಇದ್ದಾರೋ ಅಂಥಾ ಕಡೆಗಳಲ್ಲಿ ನಡೆಸಿದ್ದೇವೆ. ಅವರು ಇದರ ಪ್ರಯೋಜನವನ್ನು ಪಡೆದುಕೊಂಡಿದ್ದಾರೆ. ಇನ್ನು ಇದಲ್ಲದೆ ಇನ್ನು 1800 ಬ್ಲಾಕ್ ಡೆಮಾನ್‌ಸ್ಟ್ರೇಷನ್ ನಡೆಸಿದ್ದೇವೆ. ಮತ್ತು ಬಡವರು ಇದ್ದಂಥಾ ಕಡೆಗಳಲ್ಲಿ ಕಾಂಫ್ಯಾಕ್ಟ್ ಡೆಮಾನ್‌ಸ್ಟ್ರೇಷನ್ 3500 ನಡೆಸಿದ್ದೇವೆ. ಈ 1800 ಬ್ಲಾಕ್ ಡೆಮಾನ್‌ಸ್ಟ್ರೇಷನ್‌ನಿಂದ ಸಣ್ಣ ಸಣ್ಣ ಹಿಡುವಳಿದಾರರು ಎಲ್ಲಿರುತ್ತಾರೋ ಅಂಥಾ ಪ್ರದೇಶಗಳಲ್ಲಿ ಇದನ್ನು ಮಾಡಿರುವುದರಿಂದ ಅವರಿಗೆಲ್ಲಾ ಇದರಿಂದ

ಅನುಕೂಲವಾಗಿದೆ. ಈ ದಿಶೆಯಲ್ಲಿ ಪ್ರಯತ್ನ ನಡೆದಿದೆ ಎಂದು ಹೇಳುತ್ತೇನೆ. ಮತ್ತು ಈ ದಿಶೆಯಲ್ಲೇ ಇದನ್ನು ಇನ್ನೂ ಹೆಚ್ಚಾಗಿ ಮಾಡಬೇಕೆನ್ನುವ ಪ್ರಯತ್ನವೂ ಕೂಡ ಇದೆ ಎಂದು ಹೇಳುತ್ತೇನೆ.

ಶ್ರೀ ವೈ. ರಾಮಕೃಷ್ಣ:- ಇದನ್ನು 100 ಪರ್ಸೆಂಟ್‌ನವರೆಗೆ ಮಾಡಿ.

ಶ್ರೀ ಕೆ.ಎಚ್. ರಂಗನಾಥ್:- ಮಾಡೋಣ. ನಾನು ಈಗಾಗಲೇ ಹೇಳಿದ ಹಾಗೆ ಇದನ್ನು ಹೆಚ್ಚಿನ ಸಂಖ್ಯೆಯಲ್ಲಿ ಈ ಒಂದು ಯೋಜನೆಯನ್ನು ಹಾಕಿಕೊಂಡು ಮಾಡಿದರೆ ಆ ಪ್ರದೇಶಗಳವರಿಗೆಲ್ಲಾ ಬಹಳ ಅನುಕೂಲವಾಗುತ್ತದೆ. ತಮಗೆ ಇದರ ಬಗ್ಗೆ ಹೇಳಬೇಕಾದರೆ ಗುಡಿಬಂಡೆ ಮತ್ತು ಚಿಂತಾಮಣಿ ತಾಲ್ಲೂಕುಗಳಲ್ಲಿ 10 ಗುಂಟೆ, 15 ಗುಂಟೆ ಮತ್ತು 20 ಗುಂಟೆ ಇರತಕ್ಕಂಥಾ ಪ್ರದೇಶಗಳಲ್ಲಿ, ಸಣ್ಣ ಸಣ್ಣ ಹಿಡುವಳಿದಾರರು ಇರುವಂಥ ಪ್ರದೇಶಗಳಲ್ಲಿ ಡ್ರೈ ಫಾರ್ಮಿಂಗ್ ಡೆಮಾನ್‌ಸ್ಟ್ರೇಷನ್ ಮಾಡಬೇಕು ಅಂತ ತೆಗೆದುಕೊಂಡಿದ್ದೇವೆ. ಇದನ್ನು ಮಾಡಬೇಕಾದರೆ ವಿಶ್ವವಿದ್ಯಾಲಯ, ಗೊಬ್ಬರ ತಯಾರು ಮಾಡುವ ಕಂಪನಿಯವರು ಮತ್ತು ಕೃಷಿ ವಿಶ್ವವಿದ್ಯಾಲಯದವರು ಈ ಮೂರು ಜನರ ಸಹಾಯದಿಂದ ಈ ಕೆಲಸವನ್ನು ಮಾಡಿದರೆ ಇದನ್ನು ಇನ್ನೂ ಹೆಚ್ಚು ಹೆಚ್ಚಾಗಿ ಹಳ್ಳಿಗಳವರಿಗೆ ಅನುಕೂಲತೆ ಮಾಡುವುದಕ್ಕೆ ಸಾಧ್ಯ ಇದೆ ಎಂದು ಹೇಳುತ್ತೇನೆ. ತಮಗೆ ಹೇಳಬೇಕಾದರೆ ಚಿಂತಾಮಣಿ ಒಂದರಲ್ಲಿ ಸರಾಸರಿಯಾಗಿ 3 ಕ್ವಿಂಟಾಲ್ ರಾಗಿ ಬೆಳೆಯುತ್ತಿದ್ದವನು ಈವೊತ್ತು 8 ಕ್ವಿಂಟಾಲ್ ರಾಗಿಯನ್ನು ಬೆಳೆಯುತ್ತಾ ಇದ್ದಾನೆ. ಆದುದರಿಂದ ಈ ಇಲಾಖೆಯಲ್ಲಿ ಹೆಚ್ಚಾಗಿ ಸೂಪರ್‌ವಿಷನ್ ಸ್ಟಾಫ್‌ಗೆ ಖರ್ಚಾಗುತ್ತದೆ ವಿನಾ ಬೇರೆ ಯಾವುದಕ್ಕೂ ಖರ್ಚಾಗುತ್ತಾ ಇಲ್ಲಾ. ಒಟ್ಟಿನಲ್ಲಿ ಹೇಳಬೇಕಾದರೆ 6 ಪರ್ಸೆಂಟ್ ಅಷ್ಟು ಎಸ್ಟಾಬ್ಲಿಷ್‌ಮೆಂಟ್‌ಗೆ ಖರ್ಚಾಗುತ್ತದೆ ಎಂದು ಭಾವಿಸುತ್ತೇನೆ.

ಇನ್ನು ಎಸ್.ಎಫ್.ಡಿ.ಎ. ವಿಚಾರ ತೆಗೆದುಕೊಂಡರೆ ಇದರಲ್ಲಿ ಹೆಚ್ಚಾಗಿ ಉಪಯೋಗವಾಗುವುದು ಸ್ಮಾಲ್ ಫಾರ್ಮರ್ಸ್‌ಗೇನೇ ಹೆಚ್ಚು ಉಪಯೋಗವಾಗುತ್ತದೆ. ಸ್ಮಾಲ್ ಫಾರ್ಮರ್ಸ್ ಹೆಚ್ಚು ಜನರು ಇರುವ ಕಡೆಗೆ ಇದರ ಒಂದು ಅನುಕೂಲ ದೊರೆಯುತ್ತೆ.

ಇನ್ನು ನೀರಾವರಿ ಪಂಪುಸೆಟ್ಸ್ ಇದ್ದ ಕಡೆ ವಿದ್ಯುಚ್ಛಕ್ತಿ ಬೆಲೆ ಜಾಸ್ತಿಯಾಗಿದೆ. ಮತ್ತು ಇತರೇ ರಾಜ್ಯಗಳಿಗೆ ಇದನ್ನು ಹೋಲಿಸಿದರೆ ನಿಮ್ಮದೇ ಜಾಸ್ತಿಯಾಗಿದೆ ಎಂದು ಹೇಳಿದರು. ಆದರೆ ಒಂದು ಅಂಶವನ್ನು ತಾವೇ ತಿಳಿದುಕೊಳ್ಳಬೇಕಾಗಿದೆ. ಮಾನ್ಯ ವೈ. ರಾಮಕೃಷ್ಣ ಅವರಿಗೆ ಗೊತ್ತಿರಬಹುದು. ನಮ್ಮ ವಿದ್ಯುಚ್ಛಕ್ತಿ ಉತ್ಪಾದನೆಯಲ್ಲಿ ಸುಮಾರು ಅರ್ಧದಷ್ಟನ್ನು ಕೆಲವೇ ಉದ್ಯಮಿಗಳ ಬಳಕೆಗೆ ಉಪಯೋಗಿಸುವ ಪರಿಸ್ಥಿತಿ ಬಂದಿದೆ. ತಮಗೆ ಈವೊತ್ತು ಹೇಳಬೇಕಾದರೆ ಬೆಳಗಾಂ ಅಲ್ಯೂಮಿನಿಯಂ ಫ್ಯಾಕ್ಟರಿಗೆ ಬಹಳ ಕಡಿಮೆ ಬೆಲೆಯಲ್ಲಿ ಈ ವಿದ್ಯುಚ್ಛಕ್ತಿಯನ್ನು ಕೊಟ್ಟಿದ್ದೇವೆ. ಹಾಗೆಯೇ ಮೈಸೂರು ಐರನ್ ಅಂಡ್ ಸ್ಟೀಲ್ ಕಂಪನಿಗೂ ಕೊಟ್ಟಿದೆ. ಇದನ್ನು ಬದಲಾವಣೆ ಮಾಡುವುದಕ್ಕೆ ಸಾಧ್ಯವಿಲ್ಲ. ಏತಕ್ಕೆಂದರೆ ಅಂಥಾ

ಒಂದು ಪರಿಸ್ಥಿತಿಗೆ ಒಳಗಾಗಿರುವುದರಿಂದ ಅದನ್ನು ಬದಲಾಯಿಸುವುದಕ್ಕೆ ಸಾಧ್ಯವಿಲ್ಲ. ತಮಗೆ ಹೇಳಬೇಕಾದರೆ ಬೆಳಗಾಂ ಅಲ್ಯುಮಿನಿಯಂ ಫ್ಯಾಕ್ಟರಿಗೆ ಒಂದು ಯುನಿಟ್‌ಗೆ 2 ಪೈಸೆ ಅಂತ ಕೊಟ್ಟಿದ್ದೇವೆ. ಹಾಗೆಯೇ........

ಶ್ರೀ ವೈ. ರಾಮಕೃಷ್ಣ:- ಅದನ್ನು ಏತಕ್ಕೆ ಬದಲಾವಣೆ ಮಾಡುವುದಕ್ಕಾಗುವುದಿಲ್ಲ ಎಂದು ನಾನು ಕೇಳುತ್ತಿದ್ದೇನೆ. ತಾವು ರೈತ ಉಪಯೋಗಿಸಕ್ಕಂಥಾ ಈ ನೀರಾವರಿ ಮೇಲೆ ಜಾಸ್ತಿ ಮಾಡುವುದಕ್ಕೆ ಸ್ವತಂತ್ರರಾಗಿರುವಾಗ ಅವರ ಮೇಲೆ ಜಾಸ್ತಿ ಮಾಡುವುದಕ್ಕೆ ನಿಮಗೆ ಸ್ವತಂತ್ರವಿಲ್ಲವೇ ಎಂದು ಕೇಳುತ್ತೇನೆ. ಏತಕ್ಕೆ ಅದನ್ನು ಬದಲಾವಣೆ ಮಾಡುವುದಕ್ಕಾಗುವುದಿಲ್ಲಾ?

ಶ್ರೀ ಎ. ಲಕ್ಷ್ಮೀಸಾಗರ್:- ಹಾಗಾದರೆ ಇದನ್ನು ಅನುಷ್ಠಾನಕ್ಕೆ ತರುವರ್‍ಯಾರು?

ಶ್ರೀ ಕೆ.ಎಚ್. ರಂಗನಾಥ್:- ತಾವು ಈ ಮೊದಲು ಹೇಳಿದಾಗ ಸಭೆಯಲ್ಲಿರಲಿಲ್ಲಾ. ಈ ಬಗ್ಗೆ ಒಂದು ಸಾರಿ ಅಗ್ರಿಮೆಂಟ್ ಆದಮೇಲೆ ಅದನ್ನು ಬದಲಾಯಿಸುವುದಕ್ಕೆ ಆಗುತ್ತದೆಯೇ ಇಲ್ಲವೇ ಎನ್ನುವುದನ್ನು ತಾವು ಲಾಯರ್, ಶ್ರೀ ವೈ. ರಾಮಕೃಷ್ಣ ಅವರೂ ಕೂಡ ಲಾಯರ್ ಆಗಿದ್ದಾರೆ. ಆದುದರಿಂದ ಅದನ್ನು ತಾವೇ ತಿಳಿದುಕೊಳ್ಳಬೇಕು. ಇದು ತೀರ್ಮಾನವಾಗುವ ಕಾಲದಲ್ಲಿ ಶ್ರೀ ವೈ. ರಾಮಕೃಷ್ಣ ಅವರೂ ಇದ್ದರು.

**Sri Y. Ramakrishna:** Provided other things being equal.

**Sri A. Lakshmisagar:** It can be examined.

**Sri K.H. Ranganath:** There I agree. Suppose it canot be revised? ಮೇಲಾಗಿ ಅದು ನನ್ನ ವ್ಯಾಪ್ತಿಗೆ ಒಳಪಟ್ಟದ್ದಲ್ಲಾ.

**Sri A. Lakshmisagar:** When Constitution is changed and when fundmental rights are changed, why not this agreement be changed!

**Sri K.H. Ranganath:** I can sympathise with the plight of the agriculturists.

**Sri M.C. Basappa:** The suggestion was that the Agricultural Ministry will have a Sub-Committee to deal with these subjects.

ಶ್ರೀ ಕೆ.ಎಚ್. ರಂಗನಾಥ್:- ತಾವು ಹೇಳಿದುದ್ದನ್ನು ನಾನು ಬರೆದುಕೊಂಡಿದ್ದೇನೆ. ಅದು ದೊಡ್ಡ ವಿಚಾರ. ಆದುದರಿಂದ ನಾನು ಅದಕ್ಕೆ ಉತ್ತರ ಹೇಳುವ ಪರಿಸ್ಥಿತಿ ಇಲ್ಲ. ಈವೊತ್ತಿನ ದಿವಸ ಕರ್ನಾಟಕದಲ್ಲಿ ಇದರ ರೇಟ್ ಹೇಗಿದೆ ಎಂದರೆ 13 ಯೂನಿಟ್ಸ್‌ಗೆ 20

ಪೈಸೆ ಇದೆ. ಅದಕ್ಕೆ ಫಿಕ್ಸೆಡ್ ಛಾರ್ಜ್ ನಿಲ್. ಅದೇ ಕೇರಳದಲ್ಲಿ ಒಂದು ಯೂನಿಟ್‌ಗೆ 14.4 ಪೈಸೆ ಇದೆ, ಅದೇ ಆಂಧ್ರಪ್ರದೇಶದಲ್ಲಿ ಒಂದು ಯೂನಿಟ್‌ಗೆ 23 ಪೈಸೆ ಇದೆ, ಅದೇ ತಮಿಳುನಾಡಿನಲ್ಲಿ ಒಂದು ಯೂನಿಟ್‌ಗೆ 16.4 ಪೈಸೆ ಇದೆ. ಇನ್ನು ಅದರ್ಸ್ ಅಂದರೆ ಬೇರೆ ಕಡೆಗಳಲ್ಲಿ ಒಂದು ಯೂನಿಟ್‌ಗೆ 18.4 ಪೈಸೆ ಇದೆ.

ಶ್ರೀ ವೈ. ರಾಮಕೃಷ್ಣ:- ಯು.ಪಿ. ಮಹಾರಾಷ್ಟ್ರ ಮತ್ತು ಹರಿಯಾಣ ಭಾಗದ್ದು ಹೇಳಿ ಸ್ವಾಮಿ.

ಶ್ರೀ ಎಂ.ವಿ. ರಾಜಶೇಖರನ್:- ಆ ವಿಚಾರ ನನ್ನ ಕೈಯಲ್ಲಿಲ್ಲ ಎಂದ ಮೇಲೆ ಮತ್ತೆ ಅದೇ ವಿಚಾರವನ್ನು ಕೇಳಿದರೆ ಏನು ಪ್ರಯೋಜನ?

ಶ್ರೀ ಕೆ.ಎಚ್. ರಂಗನಾಥ್:- ಇರುವ ವಿಚಾರವನ್ನು ನಾನು ಸಭೆಗೆ ಕೊಡುತ್ತಿದ್ದೇನೆ. ವಿದ್ಯುಚ್ಛಕ್ತಿ ದರವನ್ನು ರಿವೈಸ್ ಮಾಡತಕ್ಕದ್ದು ನನ್ನ ವ್ಯಾಪ್ತಿಗೆ ಬರುವುದಿಲ್ಲ. ಮಾನ್ಯ ಸದಸ್ಯರು ಯು.ಪಿ.ಯಲ್ಲಿ ಯಾವ ರೀತಿ ಈ ದರ ಇದೆಯೆಂದು ಕೇಳಿದರು. ಅದರ ಬಗ್ಗೆ ನನ್ನಲ್ಲಿ ಮಾಹಿತಿ ಇಲ್ಲ.

ಶ್ರೀ ವೈ. ರಾಮಕೃಷ್ಣ:- ಯಾವುದರ ಬಗ್ಗೆ ನಾವು ಇಲ್ಲಿ ಕೇಳುತ್ತೇವೆಯೋ ಆ ವಿಷಯ ತಮ್ಮಲ್ಲಿರುವುದಿಲ್ಲ, ಬಾಕಿ ಎಲ್ಲಾ ಇರುತ್ತದೆ. ಅಲ್ಲಿ ನಮ್ಮ ರಾಜ್ಯಕ್ಕಿಂತ ಬಹಳ ಕಡಿಮೆ ದರವನ್ನು ವಿದ್ಯುಚ್ಛಕ್ತಿಗೆ ವಿಧಿಸಿದ್ದಾರೆ.

ಶ್ರೀ ಕೆ.ಎಚ್. ರಂಗನಾಥ್:- ಮಾನ್ಯ ರಾಮಕೃಷ್ಣ ಅವರು ಅಗ್ರಿಮೆಂಟ್ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ಅದು ಅವರ ಕಾಲದಲ್ಲಿ ಆದದ್ದು. ಅದು ಇಲ್ಲದೇ ಹೋಗಿದ್ದರೆ ನಾವು ಇವೊತ್ತು ಅದನ್ನು ಬದಲಾವಣೆ ಮಾಡಬಹುದಿತ್ತು. ನಾನು ಅವರನ್ನು ದೂಷಣೆ ಮಾಡುತ್ತಿಲ್ಲ. ಸರ್ಕಾರ ಒಂದು ಕಂಟಿನ್ಯೂಯಸ್ ಪ್ರೊಸೆಸ್. ಇವರೂ ಅದಲ್ಲಿರುತ್ತಾರೆ. ನಾನು ಅವರ ಬಗ್ಗೆ ಯಾವ ಅಫೆನ್ಸೀವ್ ಸ್ಟೇಟ್‌ಮೆಂಟ್‌ನ್ನೂ ಮಾಡುತ್ತಿಲ್ಲ. ನನ್ನ ಉದ್ದೇಶವಾದರೂ ಇಷ್ಟೆ, ಸರ್ಕಾರ ಕಂಟಿನ್ಯೂಯಸ್ ಆಗಿರತಕ್ಕದ್ದು. ಪಕ್ಷಗಳ ಸರ್ಕಾರಗಳು ಬರಬಹುದು, ಹೋಗಬಹುದು ನೀತಿ ನಿಯಮಗಳನ್ನು ಬದಲಾವಣೆ ಮಾಡಬಹುದು ಆದರೆ ಕೆಲವೊಂದು ಅಗ್ರಿಮೆಂಟ್‌ಗಳು ಏನು ಆಗಿರುತ್ತವೆ, ಅವುಗಳನ್ನು ನಾವ್ಯಾರೂ ಬದಲಾವಣೆ ಮಾಡುವುದಕ್ಕೆ ಸಾಧ್ಯವಿಲ್ಲ.

ಶ್ರೀ ಎ. ಲಕ್ಷ್ಮೀಸಾಗರ್:- ಕಾಳಿ ನದಿ ಯೋಜನೆಯಿಂದ ವಿದ್ಯುಚ್ಛಕ್ತಿ ಉತ್ಪತ್ತಿಯಾಗುತ್ತದೆ. ಉತ್ಪತ್ತಿಯಾದ್ದರಲ್ಲಿ ಅರ್ಧ ಭಾಗ ಉದ್ದಿಮೆಗಳಿಗೆ ಹೋಗುತ್ತದೆ. ಇನ್ನರ್ಧ ಭಾಗದಲ್ಲಿ ಹಂಚಿಕೆ ಮಾಡಬೇಕಾಗುತ್ತದೆ ಎನ್ನುವ ಭರವಸೆಯನ್ನು ಮಾನ್ಯ ಮಂತ್ರಿಗಳು ಕೊಟ್ಟಿದ್ದರು. ಕಾಳಿ ನದಿಯಿಂದ ವಿದ್ಯುಚ್ಛಕ್ತಿ ಉತ್ಪಾದನೆಯಾದಾಗಲಾದರೂ ವಿದ್ಯುಚ್ಛಕ್ತಿ ದರಗಳನ್ನು ರಿವೈಸ್ ಮಾಡುವುದಕ್ಕೆ ಪ್ರಯತ್ನ ಮಾಡುತ್ತೀರಾ?

ಶ್ರೀ ಕೆ.ಎಚ್. ರಂಗನಾಥ್:- ಮಾನ್ಯ ಸದಸ್ಯರ ಅಭಿಪ್ರಾಯ ನನ್ನ ತಲೆಗೆ ಹೋಗಿದೆ. ಅದು ನನ್ನ ವ್ಯಾಪ್ತಿಗೆ ಬಾರದೆ ಇದ್ದುದರಿಂದ ಇದರ ಬಗ್ಗೆ ನಾನೂ ಏನನ್ನೂ ಹೇಳುವಂತಿಲ್ಲ. ಈ ಮನೆಯ ಸದಸ್ಯರ ಅಭಿಪ್ರಾಯವನ್ನು ನಾನು ಸಂಬಂಧಪಟ್ಟ ಸಚಿವರಿಗೆ ತಿಳಿಸಬಹುದು.

ಶ್ರೀ ವೈ. ರಾಮಕೃಷ್ಣ:- ಬೆಳಗಾಂ ಅಲ್ಯುಮಿನಿಯಂ ಫ್ಯಾಕ್ಟರಿಗಾಗಲೀ, ಅಥವಾ ಮತ್ತೆ ಯಾವ ಫ್ಯಾಕ್ಟರಿಗಾಗಲೀ, ಕಡಿಮೆ ದರದಲ್ಲಿ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡಿದ್ದಾರೆ. ಸಂಬಂಧಪಟ್ಟ ಅಗ್ರಿಮೆಂಟ್‌ನಲ್ಲಿ ಇಷ್ಟು ವರ್ಷ ಅದನ್ನು ಜಾರಿಯಲ್ಲಿಡಬೇಕು ಎನ್ನತಕ್ಕ ಒಂದು ಕ್ಲಾಸ್ ಸಹ ಇರುತ್ತದೆ. ಅದನ್ನು ರಿವೋಕ್ ಮಾಡುವುದಕ್ಕಾಗುವುದಿಲ್ಲ ಎನ್ನುವುದು ಮಾನ್ಯ ಮಂತ್ರಿಗಳ ಅಭಿಪ್ರಾಯ. ನಮ್ಮಲ್ಲಿ ಖನಿಜ ಸಂಪತ್ತು ಇದೆ, ಕೆಲಸ ಮಾಡತಕ್ಕ ಜನರೂ ಇದ್ದಾರೆ, ವ್ಯವಸಾಯದಲ್ಲಿ ಬೇರೆ ರಾಜ್ಯಗಳಿಗಿಂತ ಅಷ್ಟು ಉತ್ತಮ ಮಟ್ಟದಲ್ಲಿ ನಮ್ಮ ರಾಜ್ಯ ಇಲ್ಲ. ಆದ್ದುದರಿಂದ ಕೆಲವು ಸೌಲಭ್ಯಗಳನ್ನು ತಾವು ಕೊಡಬೇಕಾಗುತ್ತದೆ. ಅಗ್ರಿಮೆಂಟ್ ಪ್ರಕಾರವೇ ಕೆಲವು ವರ್ಷಗಳು ಮುಗಿದ ಮೇಲೆ ಎಲೆಕ್ಟ್ರಿಸಿಟಿ ಛಾರ್ಜಸ್‌ನ್ನು ಜಾಸ್ತಿ ಮಾಡುವುದಕ್ಕೆ ಬರುವುದಿಲ್ಲವೇ?

ಶ್ರೀ ಎಚ್.ಟಿ. ಕೃಷ್ಣಪ್ಪ (ವೈಸ್ ಛೇರ್ಮನ್):- ಮಾನ್ಯ ಮಂತ್ರಿಗಳು ನಾನು ಸಂಬಂಧಪಟ್ಟ ಮಂತ್ರಿಯಲ್ಲ ಎಂದು ಹೇಳುತ್ತಿದ್ದಾರೆ. Government has entered into certain contract with the industry. I am not blaming him; but the Government.

**Sri B.B. Sayanak:** First there was an agreement at the rate of only 2 paise.

**Sri K.H. Ranganath:** I was under the impression that the hon. Member does not know Kannada. But he now understands Kannada. On the plea that he doesn't know Kannada, he can't make a walk-out. ಆದ್ದರಿಂದ ಇನ್ನು ಮೇಲೆ ಅವರು ವಾಕೌಟ್ ಮಾಡುವುದಿಲ್ಲ.

**Sri B.B. Sayanak:** May I know how they are going to revise the agreement?

ಶ್ರೀ ಭೀಮಣ್ಣ ಖಂಡ್ರೆ:- ಮಾನ್ಯ ಸದಸ್ಯರಾದ ಆರ್ಮುಗಂ ಅವರಿಗೆ ಮೊದಲೇ ಕನ್ನಡ ಬರುವುದಿಲ್ಲ, ಅವರು ಹೇಗೆ ಮಾನ್ಯ ಸದಸ್ಯರಾದ ಸಯನಕ್ ಅವರಿಗೆ ಈ ವಿಷಯದಲ್ಲಿ ಹೇಳಿದರು?

ಶ್ರೀ ಕೆ.ಎಚ್. ರಂಗನಾಥ್:- ಈ ವಿಷಯದಲ್ಲಿ ಮಾನ್ಯ ಸದಸ್ಯರುಗಳು ಯಾವ ಒಂದು ಅಭಿಪ್ರಾಯವನ್ನು ಕೊಟ್ಟಿದ್ದಾರೋ ಅದನ್ನು ನಾನು ಗಮನದಲ್ಲಿಟ್ಟುಕೊಳ್ಳುತ್ತೇನೆ. ಇದರ ಬಗ್ಗೆ ವಿಚಾರ ಮಾಡಲಿಕ್ಕೆ ನಾವು ಹಿಂದು ಮುಂದು ನೋಡುವುದಿಲ್ಲ ಎನ್ನುವ ಮಾತನ್ನು ನಾನು ಹೇಳುವುದಕ್ಕೆ ಇಷ್ಟಪಡುತ್ತೇನೆ.

ಗೊಬ್ಬರದ ಬಳಕೆಯಲ್ಲಿ ಕೆಲವರು ಹೇಳಿದ್ದಾರೆ. ರಸಗೊಬ್ಬರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಕೆ ಮಾಡುವುದರಿಂದ ಭೂಮಿಯ ಪೌಷ್ಟಿಕಾಂಶ ಕಡಿಮೆಯಾಗಬಹುದು, ಇದರ ಕಡೆ ಗಮನ ಕೊಡಬೇಕು ಎಂದು ಸಲಹೆಯನ್ನು ಮಾನ್ಯ ಸದಸ್ಯರು ಕೊಟ್ಟಿದ್ದಾರೆ ನಮ್ಮ ರೈತರು ಇತ್ತೀಚಿನ ದಿವಸಗಳಲ್ಲಿ ಗ್ರೀನ್ ಮೆನ್ಯೂರ್ ಕೊಟ್ಟಿಗೆ ಗೊಬ್ಬರ, ಹಸಿರು ಗೊಬ್ಬರವನ್ನು ಯಾವ ರೀತಿಯಲ್ಲಿ ಉಪಯೋಗ ಮಾಡುತ್ತಿದ್ದಾರೆ ಎನ್ನುವುದನ್ನು ನೋಡಿದಾಗ, ಇದರಲ್ಲಿಯೂ ನಾವು ಪ್ರಗತಿಯನ್ನು ಕಾಣುತ್ತಿದ್ದೇವೆ. ಆದರೆ ನಾವು ಇದನ್ನು ಯಾವ ಪ್ರಮಾಣದಲ್ಲಿ ಉಪಯೋಗಿಸಬೇಕೋ ಆ ಪ್ರಮಾಣದಲ್ಲಿ ಉಪಯೋಗಿಸುವುದಕ್ಕೆ, ಪ್ರೆಸ್ಕೈಬ್ಡ್ ಡೋಸಸ್ ಎಂದು ಏನು ಹೇಳುತ್ತೇವೆಯೋ ಅದನ್ನು ಮುಟ್ಟುವುದಕ್ಕೆ ನಾವು ಇನ್ನೂ ಪ್ರಯತ್ನ ಪಡಬೇಕಾಗುತ್ತದೆ. ಈ ದಿಸೆಯಲ್ಲಿ ನಮ್ಮ ಸರ್ಕಾರ ಕೆಲಸ ಮಾಡುತ್ತಿದೆ ಎಂದು ನಾನು ಹೇಳುತ್ತೇನೆ.

ಮಾನ್ಯ ಎಂ.ಸಿ. ಬಸಪ್ಪನವರು ಮಾತನಾಡುತ್ತಾ, ಇಲಾಖೆಯವರು ಒದಗಿಸಿರಕತಕ್ಕ ಹಣದಲ್ಲಿ ಉಳಿತಾಯ ಮಾಡುವುದು ಒಳ್ಳೆಯದಲ್ಲ ಎನ್ನುವ ಮಾತನ್ನು ಹೇಳಿದರು. ಹಣವನ್ನು ಇಲಾಖೆಯವರು ಉಳಿಸಿದ್ದರಿಂದ ಇಲಾಖೆಯವರು ಹೆಚ್ಚು ಪ್ರಗತಿಯದಾಯಕವಾಗಿ ಕೆಲಸ ಮಾಡಿಲ್ಲ ಎನ್ನುವ ಅರ್ಥದಲ್ಲಿ ಅವರು ಮಾತನಾಡಿದರು. ನಮ್ಮ ವರದಿಯ 23 ಪುಟವನ್ನು ಅವರು ಓದಿ ಹೇಳಿದ್ದಾರೆ. ಸೆಂಟ್ರಲಿ ಸ್ಪಾನ್ಸರ್ಡ್ ಸ್ಕೀಂ ನಮಗೆ ಸ್ಯಾಂಕ್ಷನ್ ಆಗಿ ಬಂದಿರತಕ್ಕದ್ದು ತಡವಾಗಿ ಬಂದಿದೆ. ಇದರಲ್ಲಿ ವಿಚಾರ ಮಾಡಬೇಕಾದ್ದು ಕೂಡ ಇದೆ. ಈ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ನಮ್ಮ ಪ್ಲಾನ್ ಮತ್ತು ನಾನ್ ಪ್ಲಾನ್ ಸ್ಕೀಂನಲ್ಲಿ ಬಹುಪಾಲು ನೂರಕ್ಕೆ 85-90ರಷ್ಟು ಹಣವನ್ನು ನಾವು ಖರ್ಚು ಮಾಡಿದ್ದೇವೆ. ಇದರಲ್ಲಿ ಸ್ವಲ್ಪ ಹಣ ಉಳಿತಾಯವಾಗಿರುವುದು ಕೆಲವು ವೇಕೆನ್ಸಿಗಳು ತುಂಬದೆ ಇದ್ದುದರಿಂದ ಮೊನ್ನೆ ತಾನೇ ಕೆಲವು ಪ್ರಮೋಷನ್ಸ್‌ಗಳನ್ನು ಕೊಟ್ಟಿದ್ದೇವೆ. ಒಟ್ಟು ನೂರಕ್ಕೆ 85-90ರಷ್ಟು ಹಣವನ್ನು ನಾವು ಖರ್ಚು ಮಾಡಿರುವುದರಿಂದ ಇಲಾಖೆಯ ಹಾಗೂ ವ್ಯವಸಾಯದ ಪ್ರಗತಿಗೆ ಅಡ್ಡ ಬರತಕ್ಕ ರೀತಿಯಲ್ಲಿ ನಾವು ಕೆಲಸ ಮಾಡಿಲ್ಲ.

**Sri M.C. Basappa:** My observation was that in 1979, your allotment was Rs.21 crores. Till 29th Feb. you have spent only Rs.13 crores. So, within one month you are spending Rs. 8 crores. Isn't it?

ಶ್ರೀ ಎಸ್.ಆರ್. ಬೊಮ್ಮಾಯಿ:- ಇಲಾಖೆಗಳಿಗೆ ಬಡ್ಜೆಟ್ಟಿನಲ್ಲಿ ಹಣವನ್ನು ತೋರಿಸುವುದು ಹೆಚ್ಚು ಖರ್ಚು ಮಾಡುವುದು ಕಡಿಮೆ ಎನ್ನುವುದನ್ನು ನಾವು ನೋಡುತ್ತಿದ್ದೇವೆ. ಈ ವಿಷಯವನ್ನು ನಾವು ಪಬ್ಲಿಕ್ ಅಕೌಂಟ್ಸ್ ಕಮಿಟಿಯವರು ಪಾಯಿಂಟ್ ಔಟ್ ಮಾಡಿದ್ದಾರೆ. ಎ.ಜಿ. ಯವರೂ ಪಾಯಿಂಟ್‌ಔಟ್ ಮಾಡಿದ್ದಾರೆ. ಬಡ್ಜೆಟ್ ಸಿಸ್ಟಂನಲ್ಲಿಯೇ ಸ್ವಲ್ಪ ದೋಷ ಇದೆಯೆಂದು ನಾವು ಹೇಳಬೇಕಾಗುತ್ತದೆ. ಕೆಲವೊಂದು ಇಲಾಖೆಗಳಲ್ಲಿ ಸುಮಾರು

50-60 ಕೋಟಿ ರೂಪಾಯಿಗಳ ಪ್ರಾವಿಷನ್ ಮಾಡಿ ಒಂದು ಕೋಟಿ ರೂಪಾಯಿಗಳನ್ನು ಖರ್ಚು ಮಾಡದೇಹೋದರೆ ಅಂಥ ಪ್ರಾವಿಷನ್‌ನ್ನು ಏಕೆ ಮಾಡಬೇಕು?

ಶ್ರೀ ಕೆ.ಎಚ್. ರಂಗನಾಥ್:- 1978-79ರಲ್ಲಿ 21,21,14,000 ರೂ.ಗಳ ಪೈಕಿ ಖರ್ಚು ಆಗಿರುವುದು 16,91,40,000 ರೂ.ಗಳು. ಇದರಲ್ಲಿ ಡೆವಲಪ್‌ಮೆಂಟ್ ಬಾಬಿಗೆ 2 ಕೋಟಿ 23 ಲಕ್ಷದ 15 ಸಾವಿರ ರೂ.ಗಳು ಮತ್ತು ಎಸ್ಟಾಬ್ಲಿಷ್‌ಮೆಂಟಿಗಾಗಿ 1 ಕೋಟಿ 98 ಲಕ್ಷದ 66 ಸಾವಿರ ರೂ.ಗಳು ಖರ್ಚಾಗಿವೆ. ಎಸ್ಟಾಬ್ಲಿಷ್‌ಮೆಂಟ್ ಬಾಬಿನಲ್ಲಿ ಉಳಿತಾಯವಾದರೆ, ಅದರಿಂದ ನಮಗೆ ನಷ್ಟವೇನೂ ಆಗುವುದಿಲ್ಲ. ಇದು ಸ್ವಲ್ಪ ಉಳಿತಾಯದ ದೃಷ್ಟಿಯಿಂದ ಒಳ್ಳೆಯದೆಂದು ಹೇಳಬಹುದು. ಸಾಯಿಲ್ ಕನ್ಸ್‌ರ್‌ವೇಷನ್‌ಗೆ 87 ಲಕ್ಷದ 50 ಸಾವಿರ ರೂ.ಗಳು ಖರ್ಚಾಗಿದೆ. ಸಾಯಿಲ್ ಕನ್ಸ್‌ರ್‌ವೇಷನ್ ಬಾಬಿನಲ್ಲಿ ಈ ಸಲ ಹೊಸ ಕೆಲಸಗಳನ್ನು ಕಡಿಮೆ ತೆಗೆದುಕೊಂಡಿದ್ದಾರೆ. ಇದರಲ್ಲಿ ಸ್ಪಿಲ್ ಓವರ್ ಬಹಳ ಇದೆ ಎಂದು ಹೇಳಿದ್ದಾರೆ. 1967-68 ರಿಂದಲೂ ಈ ಕೆಲಸವನ್ನು ಮಾಡಿಕೊಂಡು ಬರಲಾಗಿದೆ. ಕೆಲಸ ಮಾಡುವುದು ಇನ್ನೂ ಇದೆ. ನಾನು ಹೋದ ಸಲ ಈ ಕೆಲಸ ಜಾಸ್ತಿ ಆಗಬೇಕೆಂದು ಹೇಳಿದ್ದೇನೆ. ಆದರಂತೆ ಹೆಚ್ಚು ಕೆಲಸ ಮಾಡಿದ್ದಾರೆ. ಕಳೆದ ಮೂರು ವರ್ಷಗಳಿಂದ ಈ ಕೆಲಸ ಜಾಸ್ತಿ ನಡೆಯುತ್ತಿದೆ. ಇಲ್ಲಿ ಹಳೆಯ ಕೆಲಸಕ್ಕಿಂತ ಹೊಸ ಕೆಲಸಗಳನ್ನು ಕಡಿಮೆ ತೆಗೆದುಕೊಂಡಿರುವುದಕ್ಕೆ ಕಾರಣವೇನೆಂದರೆ, ಕಳೆದ ಸಲ ಸೀಜನ್ ಸರಿ ಇತ್ತು; ಏನಿದ್ದರೂ ಬರಗಾಲ ಬಂದಾಗ ಮಾತ್ರ ಈ ಕೆಲಸವನ್ನು ಹೆಚ್ಚು ಪ್ರಮಾಣದಲ್ಲಿ ತೆಗೆದುಕೊಳ್ಳಲಾಗುತ್ತದೆ. ಆಗ ರೈತರೂ ಸಹ ಈ ಕೆಲಸ ಮಾಡಲು ಮುಂದೆ ಬರುತ್ತಾರೆ. ಮಳೆ ಸಕಾಲದಲ್ಲಿ ಬಂದಾಗ ಈ ಕೆಲಸವನ್ನು ಕೈಕೊಳ್ಳಲು ರೈತರು ಅಡ್ಡಿ ಬರುತ್ತಾರೆ. ಇದು ತಮಗೆಲ್ಲಾ ಗೊತ್ತಿದೆ. ಈ ಕಾರಣದಿಂದ ಹೊಸ ಕೆಲಸಗಳನ್ನು ನಾವು ಜಾಸ್ತಿ ತೆಗೆದುಕೊಳ್ಳಲಿಲ್ಲ.

ಇನ್ನು ವಿಶ್ವವಿದ್ಯಾನಿಲಯದ ಬಗ್ಗೆ ಕೆಲವು ವಿಚಾರಗಳನ್ನು ಮಾನ್ಯ ಚೌಡಯ್ಯನವರು ಹೇಳಿದರು. ಭತ್ತವನ್ನು ಪ್ರೊಸೆಸಿಂಗ್ ಮಾಡಲು ಈಗ ಮೈಸೂರಿಗೆ ಹೋಗಬೇಕಾಗಿದೆ. ಇದರಿಂದ ರೈತರಿಗೆ ಬಹಳ ಕಷ್ಟವಾಗಿದೆ ಎಂದು ಹೇಳಿದರು. ಈ ಕಷ್ಟವನ್ನು ತಪ್ಪಿಸಲು ಮಂಡ್ಯದ ವಿ.ಸಿ. ಫಾರಂನಲ್ಲಿಯೇ ಒಂದು ಪ್ರೊಸೆಸಿಂಗ್ ಯೂನಿಟನ್ನು ಸ್ಥಾಪಿಸಲು ಏರ್ಪಾಡು ಮಾಡುತ್ತೇವೆ. ಇದಕ್ಕೇನೂ ಹೆಚ್ಚು ಹಣ ಬೇಕಾಗಿಲ್ಲವೆಂದು ಅಧಿಕಾರಿಗಳು ಹೇಳಿದರು. ಕೆಲವು ಕಡೆಗಳಲ್ಲಿ ಇಂತಹ ಸಣ್ಣ ಪುಟ್ಟ ತೊಂದರೆಗಳಿದ್ದರೆ ಅವುಗಳನ್ನು ಅವಶ್ಯಕವಾಗಿ ನಿವಾರಣೆ ಮಾಡಬೇಕಾಗುತ್ತದೆ. ಇಂತಹ ತೊಂದರೆಯನ್ನು ನಾನು ಭದ್ರಾವತಿ ತಾಲ್ಲೂಕಿನಲ್ಲಿ ನೋಡಿದ್ದೇನೆ. ಅಲ್ಲಿ ಜೂನ್ ತಿಂಗಳಲ್ಲಿ ಗದ್ದೆ ಕೊಯಿಲಿಗೆ ಬರುತ್ತದೆ. ಆ ಸಮಯದಲ್ಲಿಯೇ ಮೃಗಶಿರಾ ಮಳೆ ಬರುವುದರಿಂದ ಭತ್ತವನ್ನು ಒಣಗಿಸಲು ರೈತರಿಗೆ ಡ್ರೈಯರ್ಸ್ ಇಲ್ಲದೆ ತೊಂದರೆಯಾಗಿದೆ. ಇಂತಹ ತೊಂದರೆಗಳನ್ನೆಲ್ಲಾ ನಿವಾರಣೆ ಮಾಡಬೇಕೆಂಬ ಬಗ್ಗೆ ನಾನು ಯೋಚನೆ ಮಾಡುತ್ತಿದ್ದೇನೆ.

ಇನ್ನು ಭತ್ತಕ್ಕೆ ಬರುವ ರೋಗದ ಬಗ್ಗೆ ಮಾನ್ಯ ರಾಮಕೃಷ್ಣ ಅವರು ಪ್ರಸ್ತಾಪ ಮಾಡಿದ್ದಾರೆ. ಈ ಬಗ್ಗೆ ಪೊನ್ನಂಪೇಟೆ ಮತ್ತು ಮಂಡ್ಯದಲ್ಲಿ ಸಂಶೋಧನೆ ನಡೆಯುತ್ತಿದೆ. ಇಂಟಾ ಎಂಬ ಜಾತಿಯ ಭತ್ತವನ್ನು ಮಲೆನಾಡು ಪ್ರದೇಶದಲ್ಲಿ ಈಗ ಬೆಳೆಯಲಾಗುತ್ತಿದೆ. It is a disease- resistant variety. ಈಗ ಮಂಗಳೂರಿನಲ್ಲಿ ಪ್ಯಾಡಿ ರೀಸರ್ಚ್ ಸ್ಟೇಷನ್ ಮಾಡುವುದಕ್ಕೆ ಕೃಷಿ ವಿಶ್ವವಿದ್ಯಾಲಯದವರು ಪ್ರಯತ್ನ ಪಟ್ಟಿದ್ದಾರೆ. ಇದು ಆಗುವುದು ಅವಶ್ಯಕವಿದೆ. ಮಾನ್ಯ ಚೌಡಯ್ಯನವರು ಕೃಷಿ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಕರಿಗೆ ಸಂಬಂಧಪಟ್ಟಂತೆ ಸ್ಟ್ರೈಕ್ ವಗೈರೆ ಆಯಿತು, ಇದು ವಿಶಾದದ ಸಂಗತಿ ಎಂದು ಹೇಳಿದರು. ಈ ಸಂಬಂಧದಲ್ಲಿ ಇದ್ದಂಥ ಅನೇಕ ಸಮಸ್ಯೆಗಳನ್ನು ನಿವಾರಣೆ ಮಾಡುವುದಕ್ಕೆ ನಾವು ಪ್ರಯತ್ನ ಮಾಡಿದ್ದೇವೆ. ಅದನ್ನೆಲ್ಲಾ ಈಗ ಹೇಳುವುದಕ್ಕೆ ನಾನು ಇಷ್ಟ ಪಡುವುದಿಲ್ಲ. ಅದು ನಡೆಯಬಾರದಿತ್ತು; ಮತ್ತು ಆ ರೀತಿ ಆಗದಂತೆ ನೋಡಿಕೊಳ್ಳುವುದು ನಮ್ಮ ಕರ್ತವ್ಯವಾಗಿತ್ತು. ಅವರು ಚಳುವಳಿ ಮಾಡದೆ ಸ್ವಲ್ಪ ನಿಧಾನ ಮಾಡಿ ಮಾತುಕತೆಗಳ ಮೂಲಕ ಅವರ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬಹುದಾಗಿತ್ತು. ಆ ರೀತಿ ಮಾಡದೆ ಅವರು ಸ್ಟ್ರೈಕ್ ಮಾಡಿದ್ದು ಸರಿಯಲ್ಲ. ಈ ಬಗ್ಗೆ ಯಾವ ಕ್ರಮ ಕೈಕೊಳ್ಳಬೇಕೆಂಬುದನ್ನು ಸರ್ಕಾರ ಯೋಚನೆ ಮಾಡುತ್ತದೆಂಬ ಮಾತನ್ನು ಈ ಸಂದರ್ಭದಲ್ಲಿ ಹೇಳುತ್ತೇನೆ.

ಇನ್ನು ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಬಗ್ಗೆ ಕೆಲವು ಟೀಕೆಗಳನ್ನು ಮಾಡಿದ್ದಾರೆ. ಇಲ್ಲಿ ನಾನು ಯಾವುದನ್ನು ಮುಚ್ಚಿಟ್ಟುಕೊಂಡಿಲ್ಲ. ಅಲ್ಲಿ ಕರಪ್ಷನ್ ಇದೆ ಎಂದು ತಾವೇ ಒಪ್ಪಿಕೊಂಡಿದ್ದೀರಿ ಎಂದು ಮಾನ್ಯ ಬಸಪ್ಪನವರು ಹೇಳಿದರು. ಅಲ್ಲಿ ಕರಪ್ಷನ್ ಇಲ್ಲವೆಂದು ನಾನು ಏನಾದರೂ ಹೇಳಿದರೆ, ಆ ಬಗ್ಗೆ ವಾದವಿವಾದಕ್ಕೆ ಅವಕಾಶ ಮಾಡಿಕೊಟ್ಟಂತೆ ಆಗುತ್ತದೆ. ಆದಕಾರಣ ನಾನು ಅಲ್ಲಿ ಕರಪ್ಷನ್ ಒಂದೇ ಅಲ್ಲ, ಇನ್ನೂ ಬೇರೆಬೇರೆ ವ್ಯವಹಾರಗಳು ಅಲ್ಲಿ ನಡೆದಿವೆ ಎಂಬ ಮಾತನ್ನು ಸಹ ಹೇಳಿದ್ದೇನೆ. ಈ ಬಗ್ಗೆ ಅಂಕಿ ಅಂಶಗಳನ್ನು ಸಹ ಕೊಟ್ಟಿದ್ದೇನೆ. ಮೊನ್ನೆ ಅಲ್ಲಿಯೂ ಸಹ ಒಂದು ಚಳುವಳಿ ನಡೆಯಿತು. ಅಲ್ಲಿ ಕಳೆದ ಕೆಲವು ದಿವಸಗಳಿಂದ ವ್ಯವಹಾರ ಸರಿಯಾಗಿ ನಡೆಯದಿರುವುದು ಕಂಡುಬರುತ್ತಿದೆ. ಅಲ್ಲಿ ನಾಲ್ಕು ಕೋಟಿ ರೂ.ಗಳಷ್ಟು ನಷ್ಟವಾಗಿರುವುದನ್ನು ನಾವು ನೋಡಬಹುದಾಗಿದೆ. ಇದರಲ್ಲಿ ಶ್ರೀ ಡಿ.ಎಚ್. ಜಯದೇವ ಎಂಬುವರು ಹೆಚ್ಚಿನ ಹಣ ನಷ್ಟವಾಗುವುದಕ್ಕೆ ಕಾರಣಕರ್ತರಾಗಿದ್ದರಿಂದ ಅವರನ್ನು ಕೆಲಸದಿಂದ ತೆಗೆದು ಹಾಕಲಾಗಿದೆ. ಸ್ಪೇರ್ ಪಾರ್ಟ್ಸ್ ವಗೈರೆಯನ್ನು ಯಾವ ಆರ್ಡರ್ಸ್ ಇಲ್ಲದೆ ಸುಮಾರು 6 ಲಕ್ಷದ 29 ಸಾವಿರದ 555 ರೂ.ಗಳನ್ನು ಕೊಂಡಿರುವುದು ಒಂದು ಪ್ರಕರಣ. Value of slow-moving article... 26,54,498 ರೂ.ಗಳು, ಇದರ ಪೈಕಿ 11 ಲಕ್ಷ ರೂ.ಗಳಷ್ಟು ಮಾಗಾಟ ಮಾಡಿದ್ದಾರೆ. ಇನ್ನೂ 15 ಲಕ್ಷ ರೂ. ಗಳಷ್ಟು ಮಾಲು ಇದೆ. Sale of fast moving articles sold to private dealers.... 3 ಲಕ್ಷದ 70 ಸಾವಿರದ 472 ರೂ.ಗಳು. ಟ್ರಾಕ್ಟರ್ ವಗೈರೆ ಮಾರಾಟ ಮಾಡಿದ ಮೇಲೆ ಅವು ಮತ್ತೆ ರಿಪೇರಿಗೆಂದು ಬಂದಾಗ ಅವುಗಳನ್ನು ರಿಪೇರಿ ಮಾಡಿಕೊಡಲು

1313 ರೂ.ಗಳನ್ನು ಖರ್ಚು ಮಾಡಲಾಗಿದೆ. shortage etc, 25 ಸಾವಿರ ರೂ.ಗಳು spares returned to customers 1,25,000 ರೂ.ಗಳು. ಇದು ಕಳೆದ 2-3 ವರ್ಷಗಳಲ್ಲಿ ನಡೆದಿದೆ. ಇಂತಹ ಕೆಲವು ಅನಾಹುತಗಳು ಅಲ್ಲಿ ನಡೆದಿದ್ದರಿಂದ ನಾನು ಶ್ವೇತ ಪತ್ರದಲ್ಲಿ ಅಲ್ಲಿ ಇಂತಹ ಮಿಸ್-ಮೇನೇಜ್‌ಮೆಂಟ್ ಆಗಿದೆ ಎಂದು ಬರೆದಿದ್ದೇನೆ.

ಶ್ರೀ ವೈ. ರಾಮಕೃಷ್ಣ:- ಆತನಿಗೆ ಏನು ಶಿಕ್ಷೆಯಾಗಿದೆ? ಇಲ್ಲಿ ಈ ವ್ಯಕ್ತಿಯಿಂದ ಸುಮಾರು 33 ಲಕ್ಷ ರೂ.ಗಳಷ್ಟು ನಷ್ಟವಾಗಿದೆ. ಆತನನ್ನೂ ಕೆಲಸದಿಂದ ತೆಗೆದರೆ ಆತ ಚೆನ್ನಾಗಿಯೆ ಇರುತ್ತಾರೆ. ಆದಕಾರಣ ಆತನಿಗೆ ಏನು ಶಿಕ್ಷೆ ಕೊಟ್ಟಿದ್ದೀರಿ ಎಂಬುದನ್ನು ತಿಳಿಸಬೇಕು.

ಶ್ರೀ ಕೆ.ಎಚ್. ರಂಗನಾಥ್:- ಈಗ ಸದ್ಯಕ್ಕೆ ಕೆಲಸದಿಂದ ತೆಗೆದಿದ್ದೇವೆ. ಕೇಸ್ ಹಾಕುತ್ತೇವೆ. ಕೇಸ್ ಹಾಕಿದ ಮೇಲೆ ಕೋರ್ಟ್‌ನಲ್ಲಿ ವ್ಯವಹಾರ ಯಾವ ರೀತಿ ನಡೆಯುತ್ತೆ ಎಂಬುದು ತಮಗೂ ಗೊತ್ತಿದೆ. ಅಲ್ಲಿ ಇದೆಲ್ಲಾ ವಿಚಾರಣೆಯಾಗಬೇಕಾಗುತ್ತದೆ. ಆತ ಮೂರು ಅಂಗಡಿಗಳನ್ನು ಇಟ್ಟುಕೊಂಡಿದ್ದಾನೆ. ಅದು ಯಾರ ಯಾರ ಹೆಸರಿನಲ್ಲಿದೆಯೋ ಗೊತ್ತಿಲ್ಲ. ತಾವು ಕೇಳಿದ್ದರಿಂದ ನಾನು ಇದನ್ನೆಲ್ಲಾ ಹೇಳಬೇಕಾಯಿತು. ಇಲ್ಲಿ ನಾನು ಒಂದು ವಿಚಾರವನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ.

ಇವೊತ್ತು ನಾವು ಈ ಸಂಸ್ಥೆಗಳಲ್ಲಿ ಕೆಲಸ ಮಾಡತಕ್ಕವರಲ್ಲಿ ನಂಬಿಕೆ ಇಟ್ಟುಕೊಂಡು ಹಣವನ್ನು ಕೊಡುತ್ತಿದ್ದೇವೆ. ಮೇನೆಜಿಂಗ್ ಡೈರೆಕ್ಟರ್, ಛೇರ್ಮನ್ ಆಡಳಿತ ಮಂಡಳಿ ಎಲ್ಲಾ ಇರುತ್ತದೆ. ಅಲ್ಲಿ ಕೆಲಸ ಮಾಡತಕ್ಕವರಿಗೆ ಹೆಚ್ಚು ಜವಾಬ್ದಾರಿ ಇರುತ್ತದೆ. ಅಲ್ಲಿ ಯೂನಿಯನ್ ವಗೈರೆಗಳು ಏನಿವೆ, ಅವು ಅಲ್ಲಿ ಏನಾದರೂ ತಪ್ಪಿ ನಡೆದರೆ ಅದನ್ನು ನೋಡಿ ತಕ್ಷಣವೇ ಸರ್ಕಾರಕ್ಕೆ ಸಹಾಯ ಮಾಡತಕ್ಕದ್ದು ಯೋಗ್ಯ. ಏತಕ್ಕೆಂದರೆ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಾಭ ಬಂದರೆ ಆದರ ಉತ್ಪತ್ತಿ ನಮಗೆ ಬರುವುದಿಲ್ಲ. ಅವರ ನೌಕರರಿಗೆ ಸಂಬಳ ಜಾಸ್ತಿ ಕೊಡುತ್ತೇವೆ. ಇತರ ಅನುಕೂಲಗಳನ್ನು ಮಾಡಿಕೊಡಬಹುದು. ಬೋನಸ್ ಕೊಡಬಹುದು. ಅದೂ ಅಲ್ಲದೆ ಇನ್ನೂ ಇತರೆ ಫೆಸಿಲಿಟೀಸ್ ಕೇಳುತ್ತಾರೆ. ಅಲ್ಲಿ ನಮಗೆ ಜನರಲ್ ರೆವಿನ್ಯೂ ಬರುವುದಿಲ್ಲ. ಇನ್‌ಕಂ ಟ್ಯಾಕ್ಸ್ ಡಿಪಾರ್ಟ್‌ಮೆಂಟ್‌ಗೆ ಸ್ವಲ್ಪ ಹೋಗುತ್ತದೆ. ಆದರೆ ಕಾರ್ಮಿಕ ಸಂಘಗಳು ಏನಿವೆ ಅವು ಹೆಚ್ಚು ಜವಾಬ್ದಾರಿಯಿಂದ ಕೆಲಸ ಮಾಡಿದರೆ ಮಾತ್ರ ಅನಾಹುತ ಆಗದೇ ಇರುವ ಹಾಗೆ ಮಾಡುವುದಕ್ಕೆ ಸಾಧ್ಯ. ಅನುಕೂಲ ಬಂದಾಗ ಆಗಬಹುದು. ಅನಾನುಕೂಲ ಬಂದಾಗ ಮುಷ್ಕರ ಹೂಡುತ್ತೇವೆ ಎನ್ನುವ ಕಾರ್ಮಿಕ ಸಂಘಗಳು ಏನಿವೆ ಅವುಗಳಿಂದ ದೇಶಕ್ಕೆ ದೊಡ್ಡ ಅನಾಹುತ ಆದೀತು ಎಂದು ಹೇಳುತ್ತೇನೆ.

ಶ್ರೀಮಾನ್ ಗಂಗಾಧರನ್ ಅವರು ಒಂದು ಮಾತನ್ನು ಹೇಳಿದರು. ಅವರು ಕೆಲವು ಆಡಿಟ್ ಕಾಪಿಯ ಫೋಟೋಸ್ಟೇಟ್ ಕಾಪಿಗಳನ್ನು ಕೊಟ್ಟಿದ್ದಾರೆ. ನಾನಾದರೂ ಒಂದು

ಪ್ರಶ್ನೆಯನ್ನು ಕೇಳುತ್ತೇನೆ. ಈ ಸದನದಲ್ಲಿ ಕೆಲಸ ಮಾಡತಕ್ಕವರು ಇಲ್ಲಿರತಕ್ಕ ಅಂಕಿ ಸಂಖ್ಯೆಗಳನ್ನು ಕಾಗದ ಪತ್ರಗಳನ್ನು ಹೊರಗಡೆ ಕಳುಹಿಸುವುದು ಯೋಗ್ಯ ಮಾರ್ಗವೇ ಎನ್ನುವುದು ನನ್ನ ಮೊದಲನೆಯ ಪ್ರಶ್ನೆ. ಇದರಿಂದ ಕೆಲವು ವಿಚಾರಗಳನ್ನು ಯೋಚನೆ ಮಾಡಿದ್ದಾರೆ. ಅವುಗಳನ್ನು ಬೆಳಕಿಗೆ ತರುವುದಕ್ಕೆ ಇವು ಸಹಾಯವಾಗಿರಬಹುದು. ಆದರೆ ಈ ಸಂಸ್ಥೆಯಲ್ಲಿರತಕ್ಕ ಕಾಗದಪತ್ರಗಳನ್ನು ಆ ಸಂಸ್ಥೆಯಲ್ಲಿರತಕ್ಕವರು ಹೊರಗಡೆ ಕೊಡುವುದು ಸರಿಯೇ? ಇಲ್ಲಿ ಹೊರಗಡೆಗೆ ಕೊಡುವವರು ಬೇರೆ ರಾಜ್ಯಕ್ಕೂ ಕೊಡಬಹುದು. ಇದರಿಂದ ದೇಶದ ಸೊತ್ತನ್ನು ಮಾರಾಟ ಮಾಡುವುದಕ್ಕೆ ಸಹಾಯಕ ಆದರೂ ಆಗಬಹುದು. ಇದನ್ನು ಮಾನ್ಯ ಸದಸ್ಯರು ತೀವ್ರವಾಗಿ ಯೋಜನೆ ಮಾಡಬೇಕಾಗುತ್ತದೆ. ಒಂದು ಡಿಸಿಪ್ಲಿನ್ ಇಲ್ಲದಿದ್ದರೆ ಕೋಡ್ ಆಫ್ ಕಾಂಡಕ್ಟ್ ಇಲ್ಲದಿದ್ದರೆ ಸೇವೆಯನ್ನು ಮಾಡತಕ್ಕವರು ಸೇವಾ ನಿಯಮವನ್ನು ಅನುಸರಿಸದಿದ್ದರೆ ತೊಂದರೆ ಸಂಸ್ಥೆಗೆ ಆಗುತ್ತದೆ. ರಾಜ್ಯಕ್ಕೆ ಆಗುತ್ತದೆ. ರಾಷ್ಟ್ರಕ್ಕೆ ಆಗುತ್ತದೆ.

ಆ ಸಂಸ್ಥೆಯವರು 4,52,090 ರೂಪಾಯಿ ಲಾಭವನ್ನು ತೋರಿಸಿದ್ದಾರೆ. ನಮ್ಮ ಅಂಕಿ ಅಂಶಗಳ ಪ್ರಕಾರ ನಷ್ಟ ತೋರಿಸಿದ್ದಾರೆಂದು ಹೇಳಿದ್ದೇವೆ. ಇದನ್ನು ವಿಚಾರ ಮಾಡಿದ್ದೇವೆ. ಅಕೌಂಟ್‌ಟೆಂಟ್ ಜನರಲ್ ಅವರು ಇದರ ಲೆಕ್ಕಪತ್ರಗಳನ್ನು ನೋಡುತ್ತಾ ಪ್ರತಿವರ್ಷ ಡಿಪ್ರಿಶಿಯೇಷನನ್ನು ಕಳಿಯಬೇಕು ಎಂದು ಹೇಳಿದ್ದಾರೆ. 31.03.78ರಲ್ಲಿ ಡಿಪ್ರಿಶಿಯೇಷನ್ ಪ್ರತಿವರ್ಷವೂ ತೆಗೆದಿಲ್ಲಾ ಎಂದು ಹೇಳಿದ್ದಾರೆ. ಅವರು ಸೂಚನೆ ಕೊಟ್ಟ ಮೇಲೆ 'ಫ್ರೈ' ಅಕೌಂಟ್ಸ್ ಮಾಡಿ 1970-71 ರಲ್ಲಿ 6,34,000 ರೂ. ಡಿಪ್ರಿಶಿಯೇಷನ್ ಕಳೆದಿದ್ದಾರೆ. ಅವರು 4,52,090 ರೂಪಾಯಿ ಲಾಭ ಬಂದಿದೆಯೆಂದು ಹೇಳಿದ್ದಾರೆ. ಅದರಲ್ಲಿ ಡಿಪ್ರಿಶಿಯೇಷನ್ 6,26,000 ರೂಪಾಯಿಯನ್ನು ಕಳೆದರೆ ಮೈನೆಸ್ 2 ಲಕ್ಷ ಚಿಲ್ಲರೆ ನಷ್ಟವಾಗುತ್ತದೆ. ಲಾಭವಾಗುವುದಕ್ಕೆ ಸಾಧ್ಯವಿಲ್ಲ. ಈ ವಿಷಯದ ಬಗ್ಗೆ ನನಗೇನಾದರೂ ತಾವು ತಿಳಿಸುವುದಿದ್ದರೆ, ಅದನ್ನು ತಿಳಿಸಿದಲ್ಲಿ ನಾನು ಅದರ ಬಗ್ಗೆ ವಿಚಾರ ಮಾಡುವುದಕ್ಕೆ ಪ್ರಯತ್ನಪಡುತ್ತೇನೆ ಎನ್ನುವ ಮಾತನ್ನು ಹೇಳುತ್ತೇನೆ. ಈ ಒಂದು ಕಾರ್ಯ ಚಟುವಟಿಕೆ ಏನಿದೆ, ಈ ಟ್ರೇಡ್ ಯುನಿಯನ್‌ಗಳು ಆಫೀಸಿನ ಕಾಗದ ಪತ್ರಗಳನ್ನು ಹೊರಗೆ ಹಾಕುವುದಾದರೆ ಯಾರಿಗೆ ಬೇಕಾದರೂ ಕೊಡುವುದಾದರೆ ಏತಕ್ಕಾಗಿ ಟ್ರೇಡ್ ಯೂನಿಯನ್‌ಗಳು ಇರಬೇಕು ಎನ್ನುವ ಪ್ರಶ್ನೆ ಬರುತ್ತದೆ. ಹೀಗೆಯೇ ಒಂದು ಸಲ ಒಬ್ಬ ಸದಸ್ಯರು ಒಂದು ಕಾಗದಪತ್ರ ತಂದಾಗ ನಾನು ಆಕಡೆ ಇದ್ದೆ. ಆಗ ಒಬ್ಬ ಮಂತ್ರಿಯವರು ಆ ಕಾಗದವನ್ನು ತಂದ ಸದಸ್ಯರು How did yout get it ಎಂದು ಕೇಳಿದರು. ಅದಕ್ಕೆ ಆ ಸದಸ್ಯರು How I get it is not your concern. I might have stolen ಎಂದು ಹೇಳಿದರು. ಈ ರೀತಿ ಸಂಸ್ಥೆಗೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಹೊರಗೆ ಬಹಿರಂಗ ಪಡಿಸುವುದಾದರೆ ಅದು ಒಂದು ಸಂಸ್ಥೆಯೇ? ಅಲ್ಲಿಯ ನೌಕರ ವರ್ಗದವರನ್ನು ಅಲ್ಲಿ ಕೆಲಸದಲ್ಲಿ ಇಟ್ಟುಕೊಳ್ಳುವುದು ಯೋಗ್ಯವೇ? ಅವರನ್ನು ಮನೆಗೆ ಕಳುಹಿಸಬೇಕು. Is it

not a breach of discipline and is he note ligible for punishment. ಎಂದು ಈ ಪ್ರಶ್ನೆಯನ್ನು ಸಭೆಯ ಮುಂದೆ ಇಡುವುದಕ್ಕೆ ಪ್ರಯತ್ನ ಪಡುತ್ತೇನೆ. ಏತಕ್ಕೆಂದರೆ ನಾವು ಇದಕ್ಕೆ ಅವಕಾಶ ಕೊಡದೇ ಇರುವ ಒಂದು ಮಟ್ಟಕ್ಕೆ ಬರಬಹುದು. ಈ ರೀತಿ ಸರ್ಕಾರದ ಒಂದು ಮುಖ್ಯವಾದ ಪತ್ರ ಬಯಲಾದರೆ ಸರ್ಕಾರ ಏತಕ್ಕೆ ಇರಬೇಕು ಎನ್ನುವ ದೃಷ್ಟಿಯಿಂದ ನಾನು ಹೇಳಿದೆ. ವಾಸ್ತವಾಂಶ ಏನಿದೆ ಅದನ್ನು ನಾನು ಹೇಳಿದೆ. ಈ ವಿಚಾರವನ್ನು ಎತ್ತಿರತಕ್ಕವರು ಇದು ಸರಿಯಲ್ಲ ಎಂದು ಹೇಳಿದರೆ ಬೇರೆ ವಿಚಾರ ಏನಾದರೂ ಇದ್ದರೆ ಅದನ್ನು ದಯವಿಟ್ಟು ತಿಳಿಸಬೇಕು. ಆದ್ದರಿಂದ ಈ ಬಗ್ಗೆ ಪರೀಕ್ಷೆ ಮಾಡಿ ಸೂಕ್ತ ಕ್ರಮ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇನೆ.

(ಶ್ರೀ ಎಸ್.ಆರ್. ಬೊಮ್ಮಾಯಿಯವರ ಭಾಷಣದ ನಂತರ)

**Sri K.H. Ranganath:** After all, as a Member, we will have to get the information and place it and that is how the Government will be put in order. That is a different thing but the other aspect, I am bringing to the notice of the hon. Members. ಅವರು ಮಾಡಿರತಕ್ಕ ಕೃತ್ಯದ ಬಗ್ಗೆ ನಾನು ಹೇಳುತ್ತಿದ್ದೇನೆ.

**Sri H. Gangadharan:** According to the philosophy of administration, except the Defence, actions of other things have to be revealed.

ಶ್ರೀ ಕೆ.ಎಚ್. ರಂಗನಾಥ್:- ಪ್ರಶ್ನೆ ಮುಖಾಂತರ ಕೇಳಿ ಸರ್ಕಾರದಿಂದ ಉತ್ತರವನ್ನು ತೆಗೆದುಕೊಳ್ಳಬಹುದು.

**Sri K.H. Ranganath:** The hon. Member can put questions and the Government will supply any information; But, I don't agree with the idea of the hon. Member that the clerk, the Superintendent, or the Deputy Secretary, or the Commissioner or the minister taking all the things and selling it to the public. Then, how does the Government run? Then, where is the oath of secrecy and how it should be maintained? There are very many methods of getting the information from the Government.

ಶ್ರೀ ಎಚ್. ಗಂಗಾಧರನ್:- ಸಾರ್ವಜನಿಕರ ಹಣವನ್ನು ಖರ್ಚು ಮಾಡಿ, ಸಾರ್ವಜನಿಕರಿಗೆ ಎಷ್ಟು ಹಣ ಖರ್ಚುಮಾಡಿದ್ದೀರಿ, ಏತಕ್ಕಾಗಿ ಖರ್ಚು ಮಾಡಿದ್ದೀರಿ

ಎನ್ನುವುದನ್ನು ಬಹಿರಂಗಪಡಿಸದೆ ಹೋದರೆ You are cheating the public. You are spending the public money.....

**Sri K.H. Ranganath:** I never questioned your right. You have get the right to speak. At the same time I have also right to answer your questions.........

ಶ್ರೀ ಎಚ್. **ಗಂಗಾಧರನ್**:- ಕಾರ್ಪೊರೇಷನ್ನಿನ ಆಡಿಟೆಡ್ ಅಕೌಂಟ್ಸ್, ಪ್ರತಿವರ್ಷ ಬಡ್ಜೆಟ್ ಅಧಿವೇಶನಕ್ಕೆ ಮುಂದೆ ಸಭೆಯು ಮಂಡಿಸಬೇಕು. ಒಂದು ವೇಳೆ ಇಡುವುದಕ್ಕೆ ವಿಫಲರಾದರೆ ಕಂಪನಿ ಕಾನೂನು ರೀತ್ಯ ಕಾರ್ಪೊರೇಷನ್ನಿನ ಛೇರ್ಮನ್, ಡೈರಕ್ಟರ್ಸ್ ಶಿಕ್ಷೆಗೆ ಅರ್ಹರಾಗುತ್ತಾರೆ.

ಶ್ರೀ **ಕೆ.ಎಚ್. ರಂಗನಾಥ್**:- ನಮ್ಮ ಆಗ್ರೊ ಇಂಡಸ್ಟ್ರೀಸ್ ಅಧಿಕಾರಿಗಳ ವರದಿ ಪ್ರಕಾರ ಪ್ರತಿ ವರ್ಷದ ಆನ್ಯೂಯಲ್ ರಿಪೋರ್ಟ್‌ನ್ನು ಸಭೆಗೆ ಒಪ್ಪಿಸಿದ್ದೇವೆ. 1978-79ರ ವರದಿಯನ್ನು ಇಷ್ಟರಲ್ಲೇ ಸಭೆಯಮುಂದೆ ಇಡಲಿದ್ದೇವೆ. ನನ್ನ ಖಾತೆಗೆ ಸಂಬಂಧಪಟ್ಟಂಥದ್ದನ್ನು ಸಕಾಲದಲ್ಲಿ ಆಯಾ ವರ್ಷವೇ ಮಾಡಲಿಕ್ಕೆ ಪ್ರಯತ್ನ ಪಡುತ್ತೇವೆಂದು ಮಾನ್ಯ ಸದಸ್ಯರಿಗೆ ಆಶ್ವಾಸನೆ ಕೊಡುತ್ತೇನೆ.

**Sri S.R. Bommai:** My only suggestion is that before the Departmental Demands are discussed the audited reports of the Corporations should be placed before this House. ತಮ್ಮ ಡಿಪಾರ್ಟ್‌ಮೆಂಟ್‌ನಲ್ಲಿ ಯಾವುದೇ ಬೋರ್ಡ್ ಇರಲಿ, ಯಾವುದೇ ಕಾರ್ಪೊರೇಷನ್ ಇರಲಿ, ಅದರ ವರದಿ ಸದಸ್ಯರ ಕೈಸೇರಬೇಕು, ಈ ಮನೆಯ ಮುಂದೆ ಬರಬೇಕು.

ಶ್ರೀ **ಕೆ.ಎಚ್. ರಂಗನಾಥ್**:- ಇನ್ನೂ ಒಂದು ವಿಷಯವನ್ನು ಮಾನ್ಯ ಸದಸ್ಯರಿಗೆ ಹೇಳಬೇಕು ಎಂದರೆ ಅಕೌಂಟೆಂಟ್ ಜನರಲ್ ಅಕೌಂಟ್ಸ್ ಆಡಿಟ್ ಮಾಡಿದ್ದನ್ನು ಕೊಟ್ಟಿರುತ್ತಾರೆ. ಅದನ್ನು ನಾವು ಸಭೆಗೆ ಕೊಟ್ಟಿರುತ್ತೇವೆ.

**Sri S.R. Bommai:** I am sorry, the Hon. Minister has not understood my point. Normally, the Accountant General will select some of the items for Audit. Therefore, it is for the Government to place the Audited Reports of the respective Corporations on the table of this House. So, my only request to the Hon. Minister is that the government should place the reports of the Corporations on the table of this House before their respective demands are taken up for discussion.

**Sri K.H. Ranganath:** I shall see that the reports are placed on he table of this House so far as my Department is concerned well in time. I shall do that.

ಶ್ರೀ ಭೀಮಣ್ಣ ಖಂಡ್ರೆ:- ಡಿಪ್ರಿಯೇಷನ್ ಬಗ್ಗೆ ಮಾನ್ಯ ಗಂಗಾಧರನ್ ಅವರು ತಮ್ಮ ಹತ್ತಿರ ಆಡಿಟ್ ಕಾಪಿ ಕೊಟ್ಟಿದ್ದಾರೆ. ತಾವು ಅದರಲ್ಲಿ ಡಿಪ್ರಿಯೇಷನ್ ಇನ್‌ಕ್ಲೂಡ್ ಮಾಡಿಲ್ಲ ಎಂದು ಹೇಳಿದ್ದೀರಿ. ಬೇರೆ ಆಡಿಟ್ ರಿಪೋರ್ಟ್ ತಮ್ಮ ಹತ್ತಿರ ಇದೆಯೇ?

ಶ್ರೀ ಕೆ.ಎಚ್. ರಂಗನಾಥ್:- ಸಬ್‌ಸಿಕ್ವೆಂಟಾಗಿ ಮಾಡಿಫೈ ಮಾಡಿದ್ದರಿಂದ ವೈಟ್ ಪೇಪರಿನಲ್ಲಿ ಇನ್‌ಕಾರ್ಪೊರೇಟ್ ಮಾಡಿದ್ದೇವೆ. ಅಕೌಂಟೆಂಟ್ ಜನರಲ್ ಮಾಡಬೇಕು ಎಂದು ಹೇಳಿದ್ದರಿಂದ ಮಾಡಿದ್ದೇವೆ.

ಶ್ರೀ ಎಂ.ಸಿ. ಬಸಪ್ಪ:- ಕೆಲವು ಲೋನಿಗಳಿಗೆ ಸಾಲ ಏನು ಕೊಟ್ಟಿರುತ್ತೀರಿ, ಅವರ ಮೇಲೆ ಇಂಟರೆಸ್ಟ್, ಪೀನಲ್ ಇಂಟರೆಸ್ಟ್ ತೆಗೆದುಕೊಳ್ಳಕ್ಕಂಥಾದ್ದು ಇತ್ತು.

ಶ್ರೀ ಕೆ.ಎಚ್. ರಂಗನಾಥ್:- ಅದು ಈಗಾಗಲೇ ಸರ್ಕಾರದ ಗಮನದಲ್ಲಿದೆ, ಪವರ್ ಟಿಲ್ಲರ್ಸ್, ಟ್ರಾಕ್ಟರ್ಸ್ ಸಾಲದ ಮುಖಾಂತರ ಕೊಟ್ಟಿದ್ದೇವೆ. ಮಾನ್ಯ ರಾಜಶೇಖರನ್‌ರವರು ಇದರ ಬಗ್ಗೆ ಹೇಳಿದ್ದಾರೆ. ಈಗ ಸರ್ಕಾರ ಪೀನಲ್ ಇಂಟರೆಸ್ಟ್ ಎಷ್ಟಾಗಿದೆ ಎಂದು ಲೆಕ್ಕ ಹಾಕಿಸುತ್ತಾ ಇದೆ, ಮತ್ತೆ ಇಂಟರೆಸ್ಟ್‌ನಲ್ಲೂ ಕೂಡ ಕೆಲವು ಭಾಗ ಕಡಿಮೆ ಮಾಡಬೇಕು ಎಂದು ಮಾನ್ಯ ಮುಖ್ಯಮಂತ್ರಿಗಳ ಜೊತೆಯಲ್ಲಿ ಪ್ರಸ್ತಾಪ ಮಾಡಬೇಕು ಎನ್ನುವುದು ನನ್ನ ವೈಯಕ್ತಿಕವಾದ ಅಭಿಪ್ರಾಯ ಕೂಡ ಇದೆ. ಪೀನಲ್ ಇಂಟರೆಸ್ಟ್‌ನ್ನು ಪೂರ್ಣವಾಗಿ ಮಾಫಿ ಮಾಡಿಸಬೇಕು ಎನ್ನುವ ಅಭಿಪ್ರಾಯ ಇದೆ. ಮತ್ತೆ ವಾಪಸ್ ಕೊಡುವುದರಲ್ಲಿ ಮಾನ್ಯ ಸದಸ್ಯರು ಸಹಾಯ ಮಾಡಬೇಕಾಗುತ್ತದೆ. ವಸೂಲಿ ಮಾಡತಕ್ಕ ಕ್ರಮದಲ್ಲಿ ಕೂಡ ಬದಲಾವಣೆ ಮಾಡಬೇಕು ಎಂದು ಯೋಚನೆ ಮಾಡುತ್ತಿದ್ದೇವೆ. ಬೆಳೆ ಬಂದ ಸಂದರ್ಭದಲ್ಲಿ ವಸೂಲಿ ಮಾಡುವುದಕ್ಕೆ ಒಳ್ಳೆಯದು, ಬೆಳೆ ಇಲ್ಲದ ಕಾಲದಲ್ಲಿ ಹಣ ಕೊಡಲಿಕ್ಕೆ ಸಾಧ್ಯವಿಲ್ಲ, ಬೆಳೆ ಆದ ಸಂದರ್ಭದಲ್ಲಿ ವಸೂಲಿ ಮಾಡಬೇಕು ಎಂದು ಯೋಚನೆ ಮಾಡುತ್ತಿದ್ದೇವೆ. ಅದು ಸರ್ಕಾರದ ಗಮನದಲ್ಲಿದೆ. ಈ ಸಹಾಯ ರೈತರಿಗೆ ದೊರೆಯಬಹುದು ಎಂದು ಆಶ್ವಾಸನೆ ಕೊಡಲಿಕ್ಕೆ ಇಷ್ಟಪಡುತ್ತೇನೆ. ಇನ್ನೊಂದು ವಿಚಾರವೇನೆಂದರೆ, ನನಗೆ ವಿಚಾರ ಗೊತ್ತಿಲ್ಲದೆ ನನ್ನ ಮಾತಿನಲ್ಲಿ ಒಂದು ಸಣ್ಣ ತಪ್ಪಾಯಿತು. ಮಾನ್ಯ ವಿರೋಧಪಕ್ಷದ ನಾಯಕರಿಗೆ ಡಿಮ್ಯಾಂಡ್ಸ್ ತೆಗೆದುಕೊಳ್ಳುವುದಕ್ಕೆ ಮುಂಚೆ ಆಡಿಟ್ ರಿಪೋರ್ಟ್ ಕೊಟ್ಟು ಬಿಡುತ್ತೇನೆ ಎಂದು ಹೇಳಿದೆ. ಕಾನೂನು ಪ್ರಕಾರ ಜನರಲ್ ಬಾಡಿ ಮೀಟಿಂಗ್ ಆದಮೇಲೆ ಆನ್ಯುಯಲ್ ರಿಪೋರ್ಟ್ ಕೊಡಬೇಕಾಗುತ್ತದೆ. ಬೇರೆಬೇರೆ ಕಂಪೆನಿಗಳಿಗೆ ಬೇರೆ ಬೇರೆ ತಾರೀಖಿನಲ್ಲಿ ಜನರಲ್ ಬಾಡಿ ಬಡ್ಜೆಟ್ ಸೆಷನ್ನಿನೊಳಗೆ ಇವೆಲ್ಲಾ ಆಗತಕ್ಕ ಪರಿಸ್ಥಿತಿ ಇದ್ದರೆ

ಕೊಡಿಸುತ್ತೇನೆ. I will try to place the latest Annual Report immediately after the General Body Meetings are over. ನನಗೆ ವಿಚಾರ ಗೊತ್ತಿಲ್ಲದೆ ಆ ಮಾತನ್ನು ಹೇಳಿದೆ. ಇಷ್ಟನ್ನು ಹೇಳುತ್ತಾ ಮಾನ್ಯ ಸದಸ್ಯರು ಕ್ರಾಪ್ ಇನ್‌ಷ್ಯೂರೆನ್ಸ್ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ಮಾನ್ಯ ವಿರೋಧ ಪಕ್ಷದ ನಾಯಕರು, ಶ್ರೀಮಾನ್ ರಾಮಕೃಷ್ಣರವರು, ಶ್ರೀಮಾನ್ ಬಸಪ್ಪನವರು ದೆಲ್ಲಿಗೆ ಹೋದಾಗ ನಮಗೆ ಸಹಾಯ ಮಾಡಿಸಿದರೆ ಒಳ್ಳೆಯದು. ಏಕೆಂದರೆ ಕೇಂದ್ರ ಸರ್ಕಾರ ರೈತ ಮತ್ತು ರಾಜ್ಯ ಸರ್ಕಾರ ಪ್ರಿಮಿಯಂ ಷೇರನ್ನು ವಹಿಸಿಕೊಳ್ಳಬೇಕು, ಕೇಂದ್ರ ಸರ್ಕಾರ ವಹಿಸಲಿಕ್ಕೆ ಸಾಧ್ಯವಿಲ್ಲವೆಂದು ಹೇಳಿರುವುದರಿಂದ ರೈತರಿಗೆ ಕೊಡಲಿಕ್ಕೆ ಸಾಧ್ಯವಾಗಿಲ್ಲ, ರೈತರು ಹೊರಲಿಕ್ಕೆ ಸಾಧ್ಯವಿಲ್ಲ ಎನ್ನುವುದು ನಿರ್ವಿವಾದ ಮಾತು. ರಾಜ್ಯಸರ್ಕಾರ ಕೂಡ ಅದನ್ನು ಹೊರತಕ್ಕ ಪರಿಸ್ಥಿತಿಯಲ್ಲಿಲ್ಲ. ಈ ಒಂದು ವಿಚಾರವಿರುವುದರಿಂದ ಹೋದ ಸಾರಿ ನಾವು ಹೇಗೆ ಮಾಡಬೇಕು ಎಂದು ಯೋಚನೆ ಮಾಡುತ್ತಿದ್ದೇವೆ ಎಂದು ನಾನು ಹೇಳಿದ್ದೆ. ಆದರೆ ಈಗ ಹೊಸದಾಗಿ ಇದು ಬಂದಿದೆ. ಕೇಂದ್ರ ಸರ್ಕಾರದ ಈ ಒಂದು ಧೋರಣೆ ನಮಗೆ ಸಹಾಯಕವಾಗಿಲ್ಲ. ಇದರ ಬಗ್ಗೆ ಕೇಂದ್ರ ಸರ್ಕಾರದೊಂದಿಗೆ ವಿಚಾರಮಾಡಿ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ, ತಾವೂ ಕೂಡ ಪ್ರಭಾವ ಬೀರಿ ಸಹಾಯ ಮಾಡಬೇಕಾಗುತ್ತದೆ ಎಂದು ಈ ಸಂದರ್ಭದಲ್ಲಿ ಹೇಳಲಿಕ್ಕೆ ಇಷ್ಟಪಡುತ್ತೇನೆ. ಇನ್ನು ನಮ್ಮ ಜಿ.ಕೆ. ಸುಬ್ಬಯ್ಯನವರು, tribal colonyಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ಅದು ನೇರವಾಗಿ ನಮ್ಮ ಇಲಾಖೆಗೆ ಸಂಬಂಧಪಡುವುದಿಲ್ಲ, ಸೋಷಿಯಲ್ ವೆಲ್‌ಫೇರ್ ಇಲಾಖೆಯವರು ನಿರ್ವಹಿಸುತ್ತಾರೆ. ಆದರ ಕಾರ್ಯವನ್ನು ನಿರ್ವಹಣೆ ಮಾಡಲಿಕ್ಕೆ ನಮ್ಮ ಒಬ್ಬರು ಆಫೀಸರ್ ಇರುತ್ತಾರೆ ಎಂದು ನನಗೆ ತಿಳಿದುಬಂದಿದೆ. ಇನ್ನು ನಮ್ಮ ಚಿಮ್ಮನಕಟ್ಟಿಯವರು ಅವರ ಬಾದಾಮಿ ತಾಲ್ಲೂಕಿನಲ್ಲಿ ಚೌಳು ಭೂಮಿ ಇದೆ, ಅದನ್ನು ಸರಿ ಮಾಡಬೇಕು ಎಂದು ಹೇಳಿದ್ದಾರೆ. ಈ ವರ್ಷಕ್ಕೆ ಈಗಾಗಲೇ ಸಾಯಿಲ್ ಕನ್ಸ್‌ರ್ವೇಷನ್ ಬಗ್ಗೆ ಕಾರ್ಯಕ್ರಮ ಹಾಕಿಕೊಂಡಿದ್ದೇವೆ. ಬರೀ ಸಾಯಿಲ್ ಕನ್ಸ್‌ರ್ವೇಷನ್ ಅಷ್ಟೇ ಅಲ್ಲ. ನೀರಾವರಿ ಪ್ರದೇಶದಲ್ಲೂ ಕೂಡ ಇದರ ಬಗ್ಗೆ ಕಾರ್ಯಕ್ರಮ ಹಾಕಿಕೊಂಡಿರುವುದರಿಂದ ಮಾಡಿಸುತ್ತೇವೆ ಎಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಇನ್ನು ನಾನು ಹೋದಸಾರಿ ಕೆಲವು ಅಷ್ಯೂರೆನ್ಸ್‌ನ್ನು ಕೊಟ್ಟಿದ್ದೆ ಅದನ್ನು ರಿಪೋರ್ಟ್‌ನಲ್ಲಿ ಪ್ರಿಂಟ್ ಮಾಡಿಸಿದ್ದರೆ ಚೆನ್ನಾಗಿತ್ತು ಎಂದು ಮಾನ್ಯ ಚೌಡಯ್ಯನವರು ಹೇಳಿದರು. ನಾನು ರೆಡಿ ಮಾಡಿಕೊಂಡಿದ್ದೆ. ಆದರೆ ಪ್ರಿಂಟ್ ಮಾಡಿಸತಕ್ಕವರ ಅಚಾತುರ್ಯದಿಂದ ನಡೆದಿದೆ. ನಾನು ಹೋದಸಾರಿ ರೀ ಆರ್ಗನೈಸೇಷನ್ ಸಣ್ಣ ರೈತರ ಎಕ್ಸ್‌ಟೆನ್‌ಷನ್ ವರ್ಕ್ ಚೆನ್ನಾಗಿ ಆಗಬೇಕು ಎನ್ನುವ ದೃಷ್ಟಿಯಿಂದ ಕೆಲವು ವಿಚಾರಗಳನ್ನು ಹೇಳಿದ್ದೆ. ಇವತ್ತು ಬೆನಾರ್‌ಸಿಸ್ಟಂ ಬಂದಿರುವುದರಿಂದ ವಿಸ್ತರಣಾ ಕ್ರಮಗಳಾದ ಪ್ಯಾಕೇಜ್ ಆಫ್ ಪ್ರಾಕ್ಟೀಸ್ ವಗೈರೆ ಬಗ್ಗೆ ಬೋಧನೆಯಾಗಿದೆಯೋ ಇಲ್ಲವೋ ಎಂದು ನೋಡತಕ್ಕ ಕೆಲಸವನ್ನು ಹೆಚ್ಚು ಅನುಕೂಲದಾಯಕವಾಗಿ ಮಾಡತಕ್ಕ ರೀತಿಯಲ್ಲಿ ಈ ಹೊಸ ಸಿಸ್ಟಂ ಸಹಾಯ ಮಾಡುತ್ತದೆ ಎನ್ನುವ ಮಾತನ್ನು ನಾನು ಹೇಳಲಿಕ್ಕೆ ಇಷ್ಟಪಡುತ್ತೇನೆ.

ಮತ್ತೆ ಕೆಲವೊಂದು ಪ್ಲಾಂಟೇಷನ್, ವಗೈರೆ ಬಗ್ಗೆ ಹೇಳಬೇಕಾಗಿದೆ. ಏತಕ್ಕೆಂದರೆ ಖಾಸಗಿ ಕ್ಷೇತ್ರದಲ್ಲಿ 400 ಕುಟುಂಬಗಳು, ವ್ಯವಸಾಯ ಕ್ಷೇತ್ರದಲ್ಲಿ 800 ಕುಟುಂಬಗಳು ಮತ್ತು 400 ಕುಟುಂಬಗಳ ನೀರಾವರಿ ಪ್ರದೇಶಗಳು ಇದರ ವ್ಯಾಪ್ತಿಯೊಳಗೆ ಬರುತ್ತದೆ. ಮತ್ತೆ ನೇರವಾಗಿ ಅವರು ವ್ಯವಸಾಯ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಅವರು ಕೆಲಸ ಮಾಡತಕ್ಕ ಪರಿಸ್ಥಿತಿ ಬರುತ್ತದೆ. ಅಷ್ಟೇ ಅಲ್ಲದೆ ಸ್ಪೆಷಲ್‌ಆಗಿ ಸ್ಪೆಷಲಿಸ್ಟ್ ಬರುತ್ತದೆ. ಮತ್ತೆ ನಮ್ಮ ಇಲಾಖೆಯಲ್ಲಿ ಇಲ್ಲಿಯವರೆಗೆ ಒಳ್ಳೆಯ ಪರಿಣತರ ಸಂಖ್ಯೆ ಕಡಿಮೆ ಇತ್ತು ಬಿ.ಎಸ್ಸಿ ಎ.ಜಿ., ಎಂ.ಎಸ್.ಎ.ಜಿ. ಸ್ಪೆಷಲಿಸ್ಟ್ ಕಡಿಮೆ ಇದ್ದರು. ಹೋದಸಾರಿ ಸ್ಪೆಷಲಿಸ್ಟ್ ಆಗಲು 30 ಜನರನ್ನು ಕಳುಹಿಸಿದ್ದೆವು. ಮೊದಲು ವರ್ಷಕ್ಕೆ ನಾಲ್ಕೈದು ಜನರನ್ನು ಕಳುಹಿಸಿ ಕೊಡುತ್ತಿದ್ದೆವು. ಆದರೆ ಈ ಸಾರಿ 50 ಜನರನ್ನು ಕಳುಹಿಸಬೇಕು ಅಂತ ಯೋಜನೆ ಹಾಕಿಕೊಂಡಿದ್ದೇವೆ. ಹಾಗೆಯೇ ಅವರು ಎರಡು ವರ್ಷಗಳಲ್ಲಿಯೇ ಎಂ.ಎಸ್ಸಿ. ಎ.ಜಿ.ಯನ್ನು ಮಾಡಿಕೊಂಡು ಬರಬೇಕು ಅಂತ ಕಂಡೀಷನ್ ಹಾಕಿದ್ದೇವೆ. ಅದರಂತೆ ಅವರು ಪಾಸ್ ಮಾಡಲೇಬೇಕು. ಇಲ್ಲದಿದ್ದರೆ ಅವರಿಗೇನು ನಾವು ಹಣವನ್ನು ಖರ್ಚು ಮಾಡಿರುತ್ತೇವೆ ಅವನ್ನೆಲ್ಲಾ ಅವರು ವಾಪಸ್ ಕೊಡಬೇಕಾಗುತ್ತದೆ. ಎರಡು ವರ್ಷಗಳ ಕಾಲ ಅವರು ತಮ್ಮ ಹೆಂಡತಿ ಮಕ್ಕಳನ್ನು ಮರೆತು ಮಾವನ ಮನೆಗೆ ಹೋಗುವುದನ್ನು ಬಿಟ್ಟು ಕಟ್ಟುನಿಟ್ಟಾಗಿ ಪಾಸ್ ಮಾಡಲೇಬೇಕೆಂದು ಆಜ್ಞೆ ಮಾಡಿದ್ದೇವೆ. ಮತ್ತು ಅಗ್ರಿಕಲ್ಚರಲ್ ಆಫೀಸರ್, ಅಸಿಸ್ಟೆಂಟ್ ಡೈರೆಕ್ಟರನ್ನು ನೇರವಾಗಿ ನೇಮಕ ಮಡತಕ್ಕ ಒಂದು ಕ್ರಮವನ್ನು ಕೂಡ ನಾವು ಈಗಾಗಲೇ ಜಾರಿಗೆ ತಂದಿದ್ದೇವೆ. ಇದರಿಂದ ಹೊಸದಾಗಿ ಬರತಕ್ಕ ಪರಿಣಿತರನ್ನು ಇಲಾಖೆಯಲ್ಲಿ ಹಾಕುವುದರಿಂದ, ನ್ಯೂ ಬ್ಲಡ್ ಜನ ಏನಿದ್ದಾರೆ ಅವರು ಸ್ವಲ್ಪ ಉತ್ಸಾಹದಿಂದ ಕೆಲಸ ಮಾಡುವುದಕ್ಕೆ ಅನುಕೂಲವಾಗುತ್ತದೆ ಎನ್ನುವ ದೃಷ್ಟಿಯಿಂದ ಮಾಡಿದ್ದೇವೆ.

ಇನ್ನು ಕ್ರಾಷಿಂಗ್ ಪ್ರೊಗ್ರಾಂ ಪ್ರಕಾರ ಮತ್ತು ಬ್ರಾಂಡೆಡ್ ಏರಿಯಾದಲ್ಲಿ ಸಾಯಿಲ್ ಕನ್‌ಸರ್‌ವೇಷನ್ ತೆಗೆದುಕೊಂಡಿದ್ದೇವೆ. ಅಂಥಾ ಕ್ಷೇತ್ರಗಳಲ್ಲಿ ನಮ್ಮ ಕ್ಯಾಸ್ಟರ್ ಹರಳು ಬೆಳೆ ಮಾಡತಕ್ಕಂಥಾದ್ದು ಕೂಡ ಮಾಡಿದ್ದೇವೆ. ನಿಮಗೆ ಹೇಳಬೇಕೆಂದರೆ ಸುಮಾರು 50 ಸಾವಿರ ಹೆಕ್ಟಾರ್ ಪ್ರದೇಶದಲ್ಲಿ ನಾವು ಈ ಒಂದು ಕ್ರಮವನ್ನು ನಮ್ಮ ಇಲಾಖೆಯವರು ತೆಗೆದುಕೊಂಡಿದ್ದಾರೆ. ಇನ್ನು ಈಗಾಗಲೇ ಹೇಳಿದ ಹಾಗೆ ಅಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್ನಿನಿಂದ ರೈತರಿಗೆ ಅನುಕೂಲವಾಗತಕ್ಕ ರೀತಿಯಲ್ಲಿ ಅದನ್ನು ವ್ಯವಸ್ಥೆ ಮಾಡಬೇಕು ಅಂತ ಅದರ ಬಗ್ಗೆ ಕ್ರಮವನ್ನು ತೆಗೆದುಕೊಂಡಿದ್ದೇವೆ. ಮತ್ತು ಅದರಲ್ಲಿ ನ್ಯೂನ್ಯತೆಗಳೇನಿವೆ ಅದರ ಬಗ್ಗೆ ನಾವು ಬಹಳ ಆಳವಾಗಿ ಪರೀಕ್ಷೆ ಮಾಡುವುದಕೋಸ್ಕರವಾಗಿ ಇದನ್ನು ಪಬ್ಲಿಕ್ ಅಂಡರ್ ಟೇಕಿಂಗ್ಸ್ ಕಮಿಟಿಯವರಿಗೆ ವಹಿಸುವುದು ಸೂಕ್ತವೇನೋ ಎಂದು ನನ್ನ ಮನಸ್ಸಿಗೆ ಬಂದಿದೆ. ಏತಕ್ಕೆಂದರೆ ಒಂದೇ ಸಾರಿ ಅದರಲ್ಲಿರತಕ್ಕ ನ್ಯೂನ್ಯತೆಗಳೆಲ್ಲಾ ಪರ್ಯಾಲೋಚನೆಗೆ ಬಂದು ಆ ನಂತರ ನಾವು ಸೂಕ್ತ ಕ್ರಮ ತೆಗೆದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆಂದು ತಿಳಿದಿದ್ದೇನೆ.

ಶ್ರೀ ವೈ. ರಾಮಕೃಷ್ಣ:- ಸ್ವಾಮಿ, ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್‌ಗೆ ಏನು ಒಂದು ಇಂಟ್ರೆಸ್ಟ್ ಇದೆ ಅದನ್ನಾದರೂ ತಾವು ಸಬ್‌ಸಿಡೈಜ್ ಮಾಡಬೇಕು. ಸರ್ಕಾರದಿಂದ ಕೊಡತಕ್ಕ ಇಂಟ್ರೆಸ್ಟ್ ಅಥವಾ ಮತ್ತೊಂದು ಆಗಲೀ ಅದನ್ನು ತಾವ ಸಬ್‌ಸಿಡೈಜ್ ಮಾಡಬೇಕು ಇಲ್ಲದೇ ಹೋದರೆ ಏನಾಗುತ್ತದೆ ಎನ್ನುವ ಬಗ್ಗೆ ನನ್ನ ಭಾಷಣದಲ್ಲಿ ನಾನು ಹೇಳಿದ್ದೇನೆ. ಕೊನೆಯ ಪಕ್ಷ 1.2 ಕೋಟಿ ಸಬ್‌ಸಿಡೈಜ್ ಮಾಡಿ ಕೊಡಿ ಉದ್ಧಾರವಾಗುತ್ತದೆ. ಅದನ್ನು ಬಿಜನೆಸ್ ತರಹ ನೋಡಬೇಡಿ. ಅದನ್ನು ನೀವು ಕಂಪನೀಸ್ ಆ್ಯಕ್ಟ್ ತರಹ ಮಾಡುವುದಕ್ಕೆ ಹೋದರೆ ಬಹುಶಃ ಯಾರ ಕೈಯಲ್ಲಿಯೂ ಅದನ್ನು ನಡೆಸುವುದಕ್ಕೆ ಆಗುವುದಿಲ್ಲವೆನ್ನುವುದನ್ನು ತಾವು ಗಮನದಲ್ಲಿಟ್ಟುಕೊಳ್ಳಬೇಕು.

ಶ್ರೀ ಕೆ.ಎಚ್. ರಂಗನಾಥ್:- ಸ್ವಾಮಿ, ತಮಗೆಲ್ಲಾ ಗೊತ್ತಿದೆ, ಯಾವುದೇ ಕಂಪನಿ ತನ್ನಲ್ಲಿರುವ ಸಾಕಷ್ಟು ಹಣವನ್ನು ಬೇರೆ ಕಂಪನಿಗಳಲ್ಲಿ ಶೇರು ಬಂಡವಾಳವನ್ನಾಗಿ ಹಾಕುವುದರಲ್ಲಿ ತೊಡಗಿಸಬೇಕು ಅಂತ. ಆಗ್ರೋ ಇಂಡಸ್ಟ್ರೀಸ್ ವ್ಯವಸಾಯ ಉತ್ಪನ್ನಗಳನ್ನು ಅವಲಂಬನೆ ಮಾಡಿರತಕ್ಕ ಇಂಡಸ್ಟ್ರೀಸ್ ಆಗಿದೆ. ನಾವು ಯಾವುದೇ ಬ್ಯಾಂಕ್‌ಗಳಲ್ಲಿ ಸಾಲ ತೆಗೆದುಕೊಂಡು ಬಂದಿರುತ್ತೇವೆ. ಆ ರೀತಿ ತಂದ ಹಣವನ್ನು ನಾವು ಶೇರ್ ಕ್ಯಾಪಿಟಲ್ ಆಗಿ ಬೇರೆ ಸಬ್‌ಸಿಡರಿ ಇನ್‌ಸ್ಟಿಟ್ಯೂಷನ್‌ಗಳಲ್ಲಿ ತೊಡಗಿಸಿದ್ದೇವೆ. ಅದರಿಂದ ಉತ್ಪನ್ನ ಬಾರದೇ ಇದ್ದರೆ ನಷ್ಟಕ್ಕೆ ಒಳಗಾಗುತ್ತೇವೆ. ಇಂಥಾ ಪರಿಸ್ಥಿತಿಯಿಂದ ಸಾಲ ಆಗತಕ್ಕಂಥದ್ದು ಜಾಸ್ತಿಯಾಗಿದೆ. ಮತ್ತು ನಾವು ನೋಡಿದರೆ ರೈತರಿಂದ ಬರತಕ್ಕ ಹಣ ನಮಗೆ ಬೇಕಾದಷ್ಟು ಇದೆ. ಪೀನಲ್ ಇಂಟ್ರೆಸ್ಟ್ ಮತ್ತು ಇಂಟ್ರೆಸ್ಟ್ ಸ್ವಲ್ಪ ಭಾಗ ಕಡಿಮೆ ಮಾಡಿದರೂ ಮಾಡುತ್ತೇವೆ. ಆ ಹಣದಿಂದ ಕೂಡ ನಮಗೆ ಸುಮಾರು 1 ಕೋಟಿ ನಷ್ಟವಾಗುತ್ತದೆ. ಅದರಿಂದ ನೇರವಾಗಿ ಬರತಕ್ಕ ಪರಿಸ್ಥಿತಿ ಇದೆ. ಮತ್ತೆ ಡೀಲರ್ಸ್ ಗೊಬ್ಬರ ವ್ಯಾಪಾರ ಮಾಡತಕ್ಕ ಡೀಲರ್ಸ್‌ನಿಂದ ಸುಮಾರು 1 ಕೋಟಿ 80 ಲಕ್ಷ ರೂಪಾಯಿ ಬರಬೇಕಾಗಿದೆ. ಆದರೆ ಅವರು ಯಾರೋ ಏನೋ ಅಡ್ರೆಸ್ಸೇ ಇಲ್ಲ. ಇದೆಲ್ಲಾ ಹಿಂದೆ ನಡೆದಿದೆ. ಎಲ್ಲಾ ತಮಗೆಲ್ಲಾ ಗೊತ್ತೇ ಇದೆ. ಇದು 1967ನೇ ಇಸವಿಯಲ್ಲಿ ಆಗಿರುವುದರಿಂದ ನಾವು ಅಲ್ಲಿಂದ ಇಲ್ಲಿಯವರೆಗೆ ಅದನ್ನು ಲೆಕ್ಕ ಹಾಕಿಕೊಂಡು ಬಂದರೆ ಅದು ಸಮಂಜಸವಾಗಲಿಕ್ಕೆ ಇಲ್ಲ. ಅದನ್ನು ಕೂಡ ತಾವು ಯೋಚನೆ ಮಾಡಬೇಕಾಗಿದೆ.

ಶ್ರೀ ವೈ. ರಾಮಕೃಷ್ಣ:- ಅದು ಇರಲಿ 1971-72ರಿಂದ ಎಷ್ಟು ನಷ್ಟವಾಗಿದೆ ಎಂದು ತಾವು ಹೇಳಿದಿರಲ್ಲಾ, 5 ಕೋಟಿ ರೂಪಾಯಿ ನಷ್ಟವಾಗಿದೆಯಲ್ಲಾ ಅದರ ಬಗ್ಗೆ ಯೋಚನೆ ಮಾಡಬೇಕಾಗಿದೆ.

ಶ್ರೀ ಕೆ.ಎಚ್. ರಂಗನಾಥ್:- 5 ಕೋಟಿ ರೂಪಾಯಿ ಲೆಕ್ಕ ಹಾಕಿದರೆ ಇಂಟ್ರೆಸ್ಟ್ ಅಷ್ಟು ಬರುತ್ತಿರಲಿಲ್ಲ. ತಾವು ತೆಗೆದು ನೋಡಿದರೆ ಗೊತ್ತಾಗುತ್ತದೆ. ನಾವು ಕೆಲವೊಂದು ವಿಚಾರಗಳನ್ನು ಕನ್‌ಸಲ್‌ಟೇಟಿವ್ ಕಮಿಟಿಯಲ್ಲೂ ಕೂಡ ಪರ್ಯಾಲೋಚನೆ ಮಾಡಿ ತೀರ್ಮಾನ

ತೆಗೆದುಕೊಂಡಿದ್ದೇವೆ. ಅದನ್ನು ಕೂಡ ಕಾರ್ಯಗತ ಮಾಡುವುದಕ್ಕೆ, ಹತ್ತಿ ಕೊಳ್ಳುವುದಕ್ಕೆ ನಾವು ಪ್ರಯತ್ನ ಮಾಡುತ್ತಿದ್ದೇನೆ. ಕೆಲವು ಹತ್ತಿ ಅಂದರೆ ಜಯಧರ್ ಹತ್ತಿ ಮತ್ತು ಲಕ್ಷ್ಮಿ ಹತ್ತಿಗೆ ಸಾಮಾನ್ಯವಾಗಿ ಡಿಸೆಂಬರ್ ಮತ್ತು ಜನವರಿಯಲ್ಲಿ ಮಳೆ ಬಂದರೆ ಕೆಟ್ಟು ಹೋಗುತ್ತದೆ. ಆಗ ಅದು ಒಳ್ಳೆಯ ಕ್ವಾಲಿಟಿಯಾಗಿರುವುದಿಲ್ಲ ಅದನ್ನು ಸಹ ಎಕ್ಸ್‌ಪೋರ್ಟ್ ಮಾಡತಕ್ಕದರ ಬಗ್ಗೆ ನಾವು ದಕ್ಷಿಣ ವಲಯ ಕಾನ್‌ಫರೆನ್ಸ್‌ನಲ್ಲಿ ಪ್ರಸ್ತಾಪ ಮಾಡಿದಾಗ, ಇದನ್ನು ಪ್ರಧಾನ ಮಂತ್ರಿಗಳ ಗಮನಕ್ಕೆ ತಂದಾಗ ಎಕ್ಸ್‌ಪೋರ್ಟ್ ಮಾಡುವುದಕ್ಕೆ ಸಹಾಯ ಮಾಡುತ್ತೇವೆ ಎನ್ನುವುದನ್ನು ಕೂಡ ತಿಳಿಸಿದ್ದಾರೆ. ಆದರ ಉಪಯೋಗವನ್ನು ಕೂಡ ಪಡೆದುಕೊಳ್ಳಬೇಕು ಎನ್ನುವ ಬಗ್ಗೆ ಕೂಡ ಕನ್‌ಸಲ್‌ಟೆಟೀವ್ ಕಮೀಟಿಯಲ್ಲಿ ಕೂಡ ಪ್ರಸ್ತಾಪ ಆಗಿದೆ. ಅದರ ಬಗ್ಗೆ ಕ್ರಮ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಿದ್ದೇವೆ. ಇನ್ನು ಕೆಲವು ವಿಚಾರಗಳನ್ನು ನಾನು ಈ ಸಭೆಯ ಮುಂದೆ ಹೇಳಲಿಕ್ಕೆ ಇಷ್ಟಪಡುತ್ತೇನೆ. ಬೇಳೆಗಳು ಮತ್ತು ಆಯಿಲ್ ಸೀಡ್ಸ್‌ಗಳ ಬಗ್ಗೆ ಕ್ರಮ ತೆಗೆದುಕೊಳ್ಳುವುದರ ಜೊತೆಗೆ ಸಾಯಿಲ್ ಕನ್ಸ್‌ರ್ವೇಷನ್ ಕೆಲಸವನ್ನು ನಾವು ಸ್ಕೇರ್ಸಿಟಿ ಮೆಜರ್ಸ್ ಆಗಿ ಕೆಲಸ ಮಾಡಿಸಿದಾಗ ಸುಮಾರು ಹಣವನ್ನು ನಾವು ಖರ್ಚು ಮಾಡಿದ್ದೇವೆ. ಇವತ್ತು ಬಹಳ ಜನ ಅದನ್ನು ವಾಪಸ್ಸು ಕೊಡತಕ್ಕ ಪರಿಸ್ಥಿತಿಯಲ್ಲಿದ್ದಾರೆ. ಇದರ ಬಗ್ಗೆ ಏನು ಮಾಡಬೇಕೆನ್ನುವುದರ ಬಗ್ಗೆ ಕೂಡ ಯೋಚನೆ ಮಾಡಿ ಅದರಿಂದ ಏನಾದರೂ ಬಿಡುಗಡೆ ಮಾಡತಕ್ಕದ್ದು ಮಾಡಿದರೆ ಅದರಿಂದ ಅವರಿಗೆ ಸ್ವಲ್ಪ ಭಾರ ಕಡಿಮೆ ಆಗುತ್ತದೆಯೇನೋ ಎನ್ನುವುದು ಕೂಡ ಸರ್ಕಾರ ಯೋಚನೆ ಮಾಡುತ್ತಿದೆ. ಮಾನ್ಯ ಸದಸ್ಯರು ಒಂದು ಮಾತನ್ನು ಹೇಳಿದರು. ಸಾಯಿಲ್ ಕನ್‌ರ್ವೇಶನ್‌ಗೆ ಕೊಡತಕ್ಕ ಕೂಲಿ ಏನಿದೆ ಅದು ಬಹಳ ಕಡಿಮೆ ಇದೆ, ಯಾವುದೋ ಕಾಲದಲ್ಲಿ ಮಾಡಿರತಕ್ಕದ್ದು ಜಾಸ್ತಿ ಮಾಡಬೇಕು. ಕೊನೆಯ ಪಕ್ಷ ಮಿನಿಮಂ ವೇಜಸ್ ಏನಿದೆ ಅದರ ಮಟ್ಟಕ್ಕಾದರೂ ಕೊಡಿ ಅಂತ ಹೇಳಿದರು. ಒಂದೊಂದು ಸಾರಿ ಅದನ್ನೂ ಕೂಡ ರಿವೈಜ್ ಮಾಡಬೇಕು ಎನ್ನುವುದು ಸರ್ಕಾರದ ಗಮನದಲ್ಲಿದೆ.

ಶ್ರೀ ವೈ. ರಾಮಕೃಷ್ಣ:- ಬಡವರಿಗೆ ಅನುಕೂಲವಾಗುವ ಕೆಲಸ ಯಾವುದು ತಾವು ಮಾಡುತ್ತಿದ್ದೀರಿ ಸ್ವಾಮಿ?

ಶ್ರೀ ಕೆ.ಏಚ್. ರಂಗನಾಥ್:- ಕೂಲಿಯನ್ನು ಬಡವರು ಅಲ್ಲದೆ ಇನ್ನು ಯಾರು ಶ್ರೀಮಂತರು ಮಾಡುತ್ತಿದ್ದಾರೆಯೇ? ಆದುದರಿಂದ ಅದನ್ನು ಕೂಡ ರಿವೈಜ್ ಮಾಡಬೇಕು ಎನ್ನುವುದು ಸರ್ಕಾರದ ಗಮನದಲ್ಲಿದೆ. ಇನ್ನು ಲ್ಯಾಂಡ್ ರಿಕ್ಲಮೇಷನ್. ಇದನ್ನು ಕೂಡ ಸರ್ಕಾರ ಈಗಾಗಲೇ ಯೋಚನೆ ಮಾಡಿ 38 ಲಕ್ಷ ರೂಪಾಯಿಗಳ ಒಂದು ಕಾರ್ಯಕ್ರಮವನ್ನು ಹಾಕಿ ಖರ್ಚು ಮಾಡಬೇಕು ಅಂತ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಮತ್ತೆ ಹತ್ತಿ ಕೊಳ್ಳತಕ್ಕ ವಿಚಾರದಲ್ಲಿ ಈ ಸಾರಿ ನಮಗೆ ಕಾಟನ್ ಕಾರ್ಪೊರೇಷನ್‌ನವರು ಸಹಾಯ ಮಾಡಿದ್ದಾರೆ. ಸುಮಾರು 26 ಕೋಟಿ ರೂಪಾಯಿಗಳಷ್ಟು ಬೆಲೆ ಬಾಳುವ ಹತ್ತಿಯನ್ನು

ಅವರು ಕರ್ನಾಟಕದಲ್ಲಿ ಕೊಂಡಿದ್ದಾರೆ. ಅದೇ ರೀತಿ ಇವತ್ತು ನಾವು ಎಣ್ಣೆ ಕಾಳುಗಳನ್ನು ಹತ್ತಿಯನ್ನು ಸಹಕಾರ ಕ್ಷೇತ್ರದಲ್ಲಿ ಮತ್ತಿತರ ಕ್ಷೇತ್ರದಲ್ಲಿ ಕೊಂಡುಕೊಳ್ಳುವುದಕ್ಕೆ ವ್ಯವಸ್ಥೆ ಮಾಡಬೇಕಾಗಿದೆ. ಯಾರು ಕ್ರಸಿಂಗ್, ಜನ್ನಿಂಗ್ ಪ್ರೆಸ್ಸಿಂಗ್ ಫ್ಯಾಕ್ಟರಿಗಳನ್ನು ಇಟ್ಟುಕೊಂಡಿದ್ದಾರೆ ಅವರು ಇದನ್ನು ಕೊಂಡುಕೊಳ್ಳತಕ್ಕ ವ್ಯವಸ್ಥೆಯನ್ನು ಮಾಡದೇ ಹೋದರೆ ನಮ್ಮ ರೈತ ಬೆಳದಂಥ ಮಾಲಿಗೆ ಒಳ್ಳೆಯ ಹಣ ದೊರೆಯದೇ, ಅವನಿಗೆ ಲಾಭದಾಯಕವಾಗದೇ ಇರುವ ಪರಿಸ್ಥಿತಿ ಬರುತ್ತದೆ. ವಿಜಾಪುರದಲ್ಲಿ ನಮ್ಮ ಮಿಲ್ ಒಂದು ಸಹಕಾರ ಕ್ಷೇತ್ರದಲ್ಲಿರತಕ್ಕ ಒಂದು ಜವಳಿ ಮಿಲ್ ನಷ್ಟದಲ್ಲಿ ನಡೆಯುತ್ತಿದೆ. ಅದರ ಪಕ್ಕದಲ್ಲಿರುವ ಖಾಸಗಿ ಮಿಲ್ ಲಾಭದಲ್ಲಿ ನಡೆಯುತ್ತಿದ್ದೆ. ಇದಕ್ಕೆ ಕಾರಣವೇನೆಂದರೆ, ಯಾವ ನೂಲನ್ನು ಎಂದರೆ 200, 220 ಕೌಂಟ್ಸ್ ನೂಲನ್ನು ಉಪಯೋಗಿಸಿ ಬಟ್ಟೆ ಮಾಡಿ ಲಾಭ ಮಾಡುತ್ತಿದ್ದಾರೆ. ಅಂಥಾ ನೂಲನ್ನು ನಾವು ಮಾಡುತ್ತಿಲ್ಲ. ಅದಕ್ಕಿಂತ ಹೆಚ್ಚಿನ ನೂಲನ್ನು ಮಾಡಿ, ನೂಲನ್ನು ಸ್ಟಾಕ್ ಇಟ್ಟುಕೊಂಡು ಬಟ್ಟೆ ಮಾಡತಕ್ಕಂಥ ಒಂದು ಕಾರ್ಯಕ್ರಮ ನಡೆದಿದೆ. ಇದರಿಂದ, ಈ ಒಂದು ವ್ಯವಹಾರದ ನೀತಿಯಿಂದ ಸ್ವಲ್ಪ ತೊಡಕಾಗಿ ಬರೀ ಬಡ್ಡಿಯನ್ನು ಕೊಡತಕ್ಕ ಕಾರ್ಯವಾಗಿದೆ. ಇದರ ಬಗ್ಗೆ ನಾವು ಸ್ವಲ್ಪ ಯೋಚನೆ ಮಾಡಬೇಕಾಗಿದೆ. ಕಾಟನ್ ಕಾರ್ಪೊರೇಷನ್‌ನವರನ್ನು ಅವಲಂಬನೆ ಮಾಡಬೇಕೆಂದು ಹೇಳಿ, ನಮ್ಮಲ್ಲೂ ಕೂಡ ಅದನ್ನು ಬಳಕೆ ಮಾಡುವುದಕ್ಕೆ ಪ್ರಯತ್ನ ಪಡಬೇಕಾಗಿದೆಯೆಂದು ಹೇಳುತ್ತಾ ಹೆಚ್ಚಿನ ಮಟ್ಟಿಗೆ ಮಾನ್ಯ ಸದಸ್ಯರುಗಳು ಪ್ರಸ್ತಾಪ ಮಾಡಿದ ಎಲ್ಲಾ ವಿಷಯಗಳಿಗೂ ನಾನು ಇಲ್ಲಿ ಪ್ರಸ್ತಾಪ ಮಾಡಿ ಹೇಳಧಿದ್ದರೂ ಬಹುಪಾಲು ಉತ್ತರ ಕೊಟ್ಟಿದ್ದೇವೆ ಅಂತ ಹೇಳಿ ನಾನು ಇವತ್ತಿನ ದಿವಸ ಮಂಡಿಸಿರತಕ್ಕ ಬೇಡಿಕೆಗೆ ಈ ಮಾನ್ಯ ಸಭೆಯು ಸರ್ವಾನುಮತದಿಂದ ಒಪ್ಪಿಗೆ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ವೈ. ರಾಮಕೃಷ್ಣ:- ಲೆಜಿಸ್ಲೇಚರ್ ಡಿಮ್ಯಾಂಡಿಗೆ ಉತ್ತರಿಸಲಿಲ್ಲ.

ಶ್ರೀ ಕೆ.ಎಚ್. ರಂಗನಾಥ್:- ಮರೆತುಬಿಟ್ಟೆ. ಸಾಮಾನ್ಯವಾಗಿ ಲೆಜಿಸ್ಲೇಚರಿಗೆ ಸಂಬಂಧಪಟ್ಟ ವಿಚಾರಗಳನ್ನು ಹಿಂದೆ ಪ್ರಸ್ತಾಪ ಮಾಡುತ್ತಿರಲಿಲ್ಲ. ಆದರೆ ಈಗ ಪ್ರಸ್ತಾಪ ಮಾಡತಕ್ಕ ಮಟ್ಟಕ್ಕೆ ಬಂದಿದ್ದೇವೆ. ಮಾನ್ಯ ರಾಮಕೃಷ್ಣರವರು ಮಾತನಾಡುತ್ತಾ ತಾರೀಖನ್ನು ಜ್ಞಾಪಕ ಮಾಡಿ ಇಷ್ಟನೇ ತಾರೀಖಿನಿಂದ ಇದುವರೆಗೆ ಏನೂ ಮಾಡಲಿಲ್ಲ ಎಂದರು. ಆ ದಿಸೆಯಲ್ಲಿ ನಾವು ಸ್ವಲ್ಪ ಕೆಲಸವನ್ನು ಮುಂದುವರಿಸಿದ್ದೇವೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಕಳೆದ ತಿಂಗಳು ಮಾನ್ಯ ಲೋಕಸಭಾಧ್ಯಕ್ಷರು ಇಲ್ಲಿಗೆ ಬಂದಿದ್ದಾಗ; ಅವರೊಡನೆ ನಾನು ವಿಧಾನ ಪರಿಷತ್ತಿನ ಅಧ್ಯಕ್ಷರು ಹಾಗೂ ನಮ್ಮ ಕಾನೂನು ಕಾರ್ಯದರ್ಶಿಯವರು, ಲೋಕಸಭೆಯಲ್ಲಿ ಯಾವ ರೀತಿ ವ್ಯವಸ್ಥೆ ಇದೆ ಎಂಬುದನ್ನು ವಿಚಾರ ಮಾಡಿದ್ದೇವೆ. ಅಲ್ಲಿ ಏನು ಕ್ರಮ ಇದೆ, ಅದೇ ಕ್ರಮದಲ್ಲಿ ಇಲ್ಲೂ ಮಾಡಬೇಕೆಂದು ಪ್ರಸ್ತಾಪ ಮಾಡಿ ಈಗಾಗಲೇ ಫೈಲು ಆ ದಿಸೆಯಲ್ಲಿ ಮುಂದುವರಿದಿದೆ. ಅತಿ ಶೀಘ್ರವಾಗಿ ಅದರ ಬಗ್ಗೆ ಕ್ರಮ ತೆಗೆದುಕೊಳ್ಳುತ್ತೇನೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಈಗ ಇರತಕ್ಕ ಪ್ರಶ್ನೆ ಏನೆಂದರೆ,

ನಮ್ಮ ಲೆಜಿಸ್ಲೇಚರ್ ಸೆಕ್ರೆಟರಿಯವರಿಗೂ ಮತ್ತು ಪಾರ್ಲಿಮೆಂಟರಿ ಮಿನಿಸ್ಟರಿಗೂ ಬಹಳ ಸಣ್ಣ ಗಂಟು ಮಾತ್ರ ಇದೆ. ಅವರಿಂದ ಬರತಕ್ಕ ಕಾಗದ ಪತ್ರಗಳೆಲ್ಲಾ ಕಾನೂನು ಕಾರ್ಯದರ್ಶಿಯವರ ಮುಖಾಂತರ ನನಗೆ ಬರುತ್ತವೆ. ಆ ಒಂದು ಕೊಂಡಿಯನ್ನು ತೆಗೆದರೆ ಅದು ಇಂಡಿಫೆಂಡೆಂಟ್ ಬಾಡಿ ಆಗುತ್ತದೆ. ಇಷ್ಟೇ ಇರತಕ್ಕ ವಿಚಾರ. ಆದರೆ ಅದನ್ನು ಮಾಡುವಾಗ ಹೇಗೆ ಮಾಡಬೇಕು, ಏನು ಮಾಡಬೇಕು, ಲೋಕಸಭೆಯಲ್ಲಿ ಯಾವ ರೀತಿ ಇದೆ ಎಂಬುದನ್ನೆಲ್ಲ ನೋಡಬೇಕು. ಲೆಜಿಸ್ಲೇಚರ್ಸ್‌ನವರು ಬೇಡಿಕೆಗಳನ್ನು ಕೇಳದಿದ್ದರೂ ಮಾನ್ಯ ರಾಮಕೃಷ್ಣ ಅವರೇ ಹೇಳಿದ್ದಾರೆ; ಆದ್ದರಿಂದ ಇವರು ಯಾವಾಗ ಟ್ರೇಡ್ ಯೂನಿಯನ್ ಲೀಡರ್ ಆದರು ಎಂದು ಗೊತ್ತಿಲ್ಲ! ಈಗಾಗಲೇ, ಲೋಕಸಭಾಧ್ಯಕ್ಷರು ಬೆಂಗಳೂರಿಗೆ ಬಂದಿದ್ದಾಗ, ಅವರೊಡನೆ ನಾನು, ವಿಧಾನ ಪರಿಷತ್ತಿನ ಅಧ್ಯಕ್ಷರು, (ವಿಧಾನಸಭಾಧ್ಯಕ್ಷರು ಇರಲಿಲ್ಲ) ಲೆಜಿಸ್ಲೇಚರ್ ಸೆಕ್ರೆಟರಿಯವರು, ಲಾ ಸೆಕ್ರೆಟರಿಯವರು ಪ್ರಸ್ತಾಪ ಮಾಡಿದ್ದೇವೆ. ಮತ್ತು ಅವರೂ ಕೂಡ ಕೆಲವು ಅಭಿಪ್ರಾಯಗಳನ್ನು ಹೇಳಿದ್ದಾರೆ. ರಾಜ್ಯಾಂಗದ ಪ್ರಕಾರ ಇಂಡಿಪೆಂಡೆಂಟ್ ಆಗಿ ಇರಬೇಕೆಂಬ ವಿಷಯವನ್ನು ಪ್ರಸ್ತಾಪ ಮಾಡಿದ್ದಾರೆ. ಲೋಕಸಭೆಯಲ್ಲಿ ಕೆಲಸ ಮಾಡುವ ರೀತಿಯಲ್ಲಿ ಮಾಡುವುದಕ್ಕೆ ಅನುಕೂಲವಾಗುವ ರೀತಿಯಲ್ಲಿ ತೀರ್ಮಾನ ತೆಗೆದುಕೊಳ್ಳಬೇಕೆಂದು ಈಗಾಗಲೇ ವಿಚಾರ ಮಾಡಿದ್ದೇವೆ. ಫೈಲು ಮೂವ್ ಆಗುತ್ತಿದೆ. ಈ ಸದನ ಮುಗಿದ ತಕ್ಷಣ ಅದರ ಬಗ್ಗೆ ಪ್ರಸ್ತಾಪ ಮಾಡಿ ಆದಷ್ಟು ಜಾಗ್ರತೆ ವ್ಯವಸ್ಥೆ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇನೆ. ಈಗಾಗಲೇ ನಾವು ಕೆಲವು ಅನುಕೂಲಗಳನ್ನು ಕೊಟ್ಟಿದ್ದೇವೆ. ವಾಸ್ತವವಾಗಿ ಹೇಳುವುದಾದರೆ, ಯಾವ ಒಂದು ವ್ಯವಹಾರದಲ್ಲೂ ಸರ್ಕಾರ ಅಡ್ಡಿ ಬಂದಿಲ್ಲ. ಎಷ್ಟೋ ಸಾರಿ ಪೋಸ್ಟ್ ಡೇಟೆಡ್ ಅಪ್ರೂವಲ್ ಮಾಡಿದ್ದೇವೆ. ಈಗ ನಾವೇ ಇಂಡಿಪೆಂಡೆಂಟ್ ಆಗಿ ನೇಮಕಾತಿ ವಗೈರೆ ಎಲ್ಲ ಮಾಡಿಕೊಳ್ಳಬೇಕೆಂದು ಹೇಳುತ್ತಾ ಇದ್ದಾರೆ. ಯಾರು ಬೇಡ ಅನ್ನುತ್ತಾರೆ? ಮಾಡಿಕೊಳ್ಳಲಿ. ಆದರೆ ಒಂದು ಏನೆಂದರೆ, ರಿಸರ್ವೇಷನ್ ವಗೈರೆ ಬಗ್ಗೆ ಏನೇನು ನಿಯಮಗಳಿವೆ ಅವುಗಳನ್ನೆಲ್ಲ ಸರಿಯಾಗಿ ಅನುಸರಿಸಿಕೊಂಡು ಹೋಗಬೇಕಾಗುತ್ತದೆ. ರಿಸರ್ವೇಷನ್ ಬಗ್ಗೆ ಮಾನ್ಯ ರಾಮಕೃಷ್ಣ ಅವರು ಹೇಳುತ್ತಿದ್ದರು; ಆಗ್ರೋ ಇಂಡಸ್ಟ್ರೀಸ್‌ನಲ್ಲಿ ಹಾಗೂ ಇಲಾಖೆಯಲ್ಲಿ ರಿಸರ್ವೇಷನ್ಸ್ ಕಡಿಮೆ ಇದೆ ಎಂದು. ಹೊಸದಾಗಿ ನೇಮಿಸುವುದರಲ್ಲಿ ಕ್ರಮವಾಗಿ ನಡೆಯುತ್ತಿದೆ; ಆದರೆ ಹಿಂದೆ ಆಗಿರುವುದರಲ್ಲಿ ಕಡಿಮೆ ಇದೆ. ಮೊನ್ನೆ ಪ್ರೊಮೋಷನ್ ಕೊಡುವಾಗ ಕೆಲವು ಕೇಡರ್‌ಗಳಿಗೆ ಅಲ್ಲಿ ಅಭ್ಯರ್ಥಿಗಳು ಇಲ್ಲದೆ ಇದ್ದುದರಿಂದ ರಿಸರ್ವೇಷನ್‌ಗೆ ಕೊಡುವುದಕ್ಕೆ ಸಾಧ್ಯವಾಗಲಿಲ್ಲ. ಹೊಸದಾಗಿ ಬರತಕ್ಕ ಪದವೀಧರರನ್ನು ವ್ಯವಸಾಯಾಧಿಕಾರಿಗಳನ್ನಾಗಿ ನೇಮಕ ಮಾಡುವಾಗ ಅಥವಾ ಸಹಾಯಕ ವ್ಯವಸಾಯ ನಿರ್ದೇಶಕರನ್ನಾಗಿ ನೇಮಕ ಮಾಡುವಾಗ ಇರತಕ್ಕ ರಿಸರ್ವೇಷನ್ ಕೋಟಾ ಪೂರ್ತಿಯಾಗುತ್ತದೆ. ನಾಳೆ ಹೊಸದಾಗಿ ನೇಮಕ ಮಾಡಿಕೊಳ್ಳುವುದಕ್ಕೆ ಅಭ್ಯರ್ಥಿಗಳನ್ನು ಕರೆದಿದ್ದೇವೆ, ಅದರಲ್ಲಿ ಖಂಡಿತ ಪೂರ್ಣವಾಗುತ್ತದೆ. ಆದರೆ ಹಿಂದೆ ಸಾಕಷ್ಟು ಸಂಖ್ಯೆಯಲ್ಲಿ ಜನ ಇಲ್ಲದಿದ್ದುದರಿಂದ ಅದು ಆಗಿಲ್ಲ. ಕೆಳದರ್ಜೆ ನೌಕರರಲ್ಲೂ ಕೂಡ

ಎಲ್ಲ ಇಲಾಖೆಯಗಳಲ್ಲೂ ಹೇಗೆ ಇದೆ ಆ ರೀತಿ ಇಲ್ಲಿ ಆಗಿಲ್ಲ. ಕಳೆದ ಒಂದೆರಡು ವರ್ಷಗಳಿಂದ ನೋಡುತ್ತಿದ್ದೇವೆ. ರೆಗ್ಯುಲರ್ ಆಗಿ ನೇಮಕಾತಿ ಕಾರ್ಯ ನಡೆಯುತ್ತಿದೆ. ಇನ್ನು ಮುಂದೆ, ಹಿಂದೆ ಆದ ರೀತಿ ಆಗದ ಹಾಗೆ ನೋಡಿಕೊಳ್ಳುತ್ತೇನೆಂಬ ಭರವಸೆ ಕೊಡುತ್ತೇನೆ. ಈ ಬೇಡಿಕೆಗೆ ಮಂಜೂರಾತಿ ಕೊಡಬೇಕೆಂದು ಕೇಳಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

(ಶ್ರೀ ಭೀಮಣ್ಣಾ ಖಂಡ್ರೆ, ಶ್ರೀ ಎಸ್.ಆರ್. ಬೊಮ್ಮಾಯಿ ಮತ್ತಿತರ ಸದಸ್ಯರ ಮಾತಿನ ನಂತರ....)

ಶ್ರೀ ಕೆ.ಎಚ್. ರಂಗನಾಥ್:- ಸ್ವಾಮಿ, ಬೆಂಬಲ ಬೆಲೆ ಕುರಿತು ಮಾನ್ಯ ಆಹಾರ ಸಚಿವರು ಸಾಕಷ್ಟು ವಿವರವಾಗಿ ನಿನ್ನೆ ದಿವಸ ಹೇಳಿದ್ದಾರೆ. ಆದರೂ, ಪರ್ಚೇಸಿಂಗ್ ಪಾಯಿಂಟ್ ಓಪನ್ ಆಗುವುದು ತಡವಾಯಿತು. ಅಷ್ಟರೊಳಗೆ ಧಾನ್ಯ ಮಾರಾಟವಾಗಿತ್ತು ಎಂದು ಮಾನ್ಯ ಸದಸ್ಯರು ಹೇಳಿದರು. ಈಗಾಗಲೇ ಹೆಚ್ಚು ಮಾರಾಟವಾಗಿದೆ. ನಮ್ಮಲ್ಲಿ ಈ ವರ್ಷ ಖಾರಿಫ್ ಬೆಳೆ ಜಾಸ್ತಿಯಾಗಿದೆ ಮತ್ತು ರಾಬಿ ಬೆಳೆ ಬಹಳ ಕಡಿಮೆಯಾಗಿದೆ. ಅಲ್ಲದೆ, ನಾವೇನು ಕೊಂಡುಕೊಳ್ಳುವುದಿಲ್ಲವೆಂದು ಹೇಳಿಲ್ಲ. ಆದರೂ, ಇದರ ಬಗ್ಗೆ ನಾನು ಮತ್ತು ಆಹಾರ ಸಚಿವರು ಸೇರಿ ಚರ್ಚೆ ಮಾಡಿ ಒಂದು ತೀರ್ಮಾನಕ್ಕೆ ಬಂದು ಅದನ್ನು ಕಾರ್ಯಗತ ಮಾಡುವ ವ್ಯವಸ್ಥೆ ಮಾಡಲಾಗುವುದು. ಹೈಬ್ರಿಡ್ ಜೋಳವನ್ನು ಕೊಂಡುಕೊಳ್ಳುವಲ್ಲಿ ಎಫ್.ಎ.ಕ್ಯೂ. ತೊಂದರೆ ಬಂದಿದೆ. ಮೊನ್ನೆ ಸ್ವಾಮಿನಾಥನ್ ಅವರು ಬಂದಾಗ ನಮ್ಮ ಅಭಿವೃದ್ಧಿ ಕಮೀಷನರ್ ಮುಂತಾದವರು ಇದನ್ನು ಪ್ರಸ್ತಾಪ ಮಾಡಿದ್ದಾರೆ. ಇನ್ನು ಮಾನ್ಯ ಖಂಡ್ರೆಯವರು ಹೇಳಿದ್ದನ್ನೂ ನಾನು ಗಮನಕ್ಕೆ ತೆಗೆದುಕೊಳ್ಳುತ್ತೇನೆ; ಮತ್ತು ಯಾವ ರೀತಿ ಶೀಘ್ರವಾಗಿ ಮಾರಾಟ ಮಾಡಲಿಕ್ಕೆ ವ್ಯವಸ್ಥೆ ಮಾಡಬೇಕೋ ಅದನ್ನು ಮಾಡಿಸಲಿಕ್ಕೆ ಪ್ರಯತ್ನ ಮಾಡುತ್ತೇನೆ.

ಶ್ರೀ ಭೀಮಣ್ಣಾ ಖಂಡ್ರೆ:- ಹಾಗೆ ಮಾಡುವಾಗ ಹೈದರಾಬಾದ್ ಕರ್ನಾಟಕವೆಂಬ ಭಾಗವೊಂದಿದೆ ಎಂಬುದನ್ನು ಮಾನ್ಯ ಸಚಿವರು ಗಮನದಲ್ಲಿಟ್ಟುಕೊಳ್ಳಬೇಕು.

ಶ್ರೀ ಕೆ.ಎಚ್. ರಂಗನಾಥ್:- ನಮ್ಮ ಪ್ರಯತ್ನದಿಂದಲೇ ಇಲ್ಲಿಗೆ ಎಲ್ಲರೂ ಬಂದರು. ಇವರೇ ಲಾಗ ಹೊಡೆದಿದ್ದರೂ ಯಾರೂ ಬರುವುದಕ್ಕಾಗುತ್ತಿರಲಿಲ್ಲ. ಹೈದರಾಬಾದ್ ಕರ್ನಾಟಕವೆನ್ನುವ ಭಾಗವೊಂದಿದೆ ಎಂದು ನಾನು ತಿಳಿದುಕೊಂಡಿದ್ದೇನೆ ಮತ್ತು ಅದರ ಬಗ್ಗೆ ಕೊಂಚಮಟ್ಟಿಗೆ ನಾನೂ ಪ್ರಯತ್ನ ಪಟ್ಟಿದ್ದೇನೆ. ಆದರೆ, 1973ನೇ ಇಸವಿಯಲ್ಲಿ ಕೊಟ್ಟ ಬೀಜದ ಸಾಲವನ್ನು ಕೈಬಿಡಬೇಕೆಂದು ಹಿಡಿದುಕೊಂಡರೆ ಹೇಗೆ? ಇದರ ಬಗ್ಗೆ ಮಾನ್ಯ ಸದಸ್ಯರು ಹಾಕಿದ್ದ ಎರಡು ಚುಕ್ಕೆ ಗುರುತಿನ ಪ್ರಶ್ನೆಗಳಿಗೆ ಉತ್ತರ ಕೊಟ್ಟಿದ್ದೇನೆ. ಮತ್ತೆ ಅದಕ್ಕಿಂತಲೂ ಹೆಚ್ಚಿನ ರೀತಿಯಲ್ಲಿ ಉತ್ತರ ಕೊಡುವುದಕ್ಕೆ ನಾನು ಇಷ್ಟಪಡುವುದಿಲ್ಲ. ಅದೊಂದು ದೊಡ್ಡ ಹಗರಣ; ಅದರ ಹಿಂದೆ ಒಂದು ದೊಡ್ಡ ಕಥೆ ಇದೆ. ಅಲ್ಲದೆ ಈ ವ್ಯವಹಾರದಲ್ಲಿ ಸರ್ಕಾರಕ್ಕೆ ನಷ್ಟವಾಗಿದೆ.

ಶ್ರೀ ಭೀಮಣ್ಣಾ ಖಂಡ್ರೆ:- ಬೀದರ್‌ನಲ್ಲಿ ಹಂಚಿರುವುದರಿಂದ ಸುಮಾರು ಹನ್ನೆರಡು ಲಕ್ಷ ರೂಪಾಯಿಗಳಷ್ಟು ಲಾಭ ಬಂದಿದೆ.

ಶ್ರೀ ಕೆ.ಎಚ್. ರಂಗನಾಥ್:- ಇದರಲ್ಲಿ ನಮಗೆ ಸೀಡ್ಸ್ ಫೆಡರೇಷನ್‌ನಿಂದ ಸುಮಾರು ನಾಲ್ಕು ಕೋಟಿ ರೂಪಾಯಿಗಳಷ್ಟು ಬರಬೇಕಾಗಿದೆ. ಅದನ್ನೆಲ್ಲ ಈಗ ಲೆಕ್ಕಾಚಾರ ಹಾಕಿದರೆ, ತಿಪ್ಪೆ ತೆಗೆದಂತಾಗುತ್ತದೆ. ಆದುದರಿಂದ, ಅದೀಗ ಬೇಡ. ಮಾನ್ಯ ವಿರೋಧ ಪಕ್ಷದ ನಾಯಕರು ಕೆಲವು ಮೂಲಭೂತ ವಿಷಯಗಳನ್ನು ಪ್ರಸ್ತಾಪ ಮಾಡಿದ್ದಾರೆ. ಸಾಲ ವಸೂಲಿಯನ್ನು ಮುಂದಕ್ಕೆ ಹಾಕುವ ವಿಚಾರವಾಗಿ ಅವರು ಮಾತನಾಡಿದ್ದಾರೆ. ಇದರ ಬಗ್ಗೆ ನನ್ನ ವೈಯಕ್ತಿಕ ಅಭಿಪ್ರಾಯ ಹೇಳುವುದಾದರೆ, ಸಾಲ ವಸೂಲಿಯನ್ನು ಮುಂದಕ್ಕೆ ಹಾಕುವುದು ಜನರ ಹೊರೆಯನ್ನು ಇನ್ನು ಸ್ವಲ್ಪ ಕಾಲ ಮುಂದೂಡಿದಂತಾಗುತ್ತದೆಯೇ ವಿನಃ ಅವರಿಗೆ ಯಾವ ಅನುಕೂಲಗಳನ್ನೂ ಮಾಡಿದಂತಾಗುವುದಿಲ್ಲ. ಬೆಳೆ ಬೆಳೆದಂತಹ ಕಾಲದಲ್ಲಿ ಸಾಲ ವಸೂಲ್ಮಾಡುವ ಕ್ರಮವನ್ನು ತೆಗೆದುಕೊಳ್ಳಬೇಕಾಗುತ್ತದೆ. ಅಲ್ಲದೆ, ಕಂದಾಯ ಬಾಕಿ ಮತ್ತು ಸಾಲ ವಗೈರೆಗಳನ್ನು ಬೆಂಬಲ ಬೆಲೆ ಕೊಟ್ಟು ಕೊಳ್ಳುವಾಗ ಧಾನ್ಯದ ರೂಪದಲ್ಲಿ ಕೊಡಿ ಎಂದು ರೈತರಿಗೆ ಹೇಳಿದ್ದೇವೆ. ಆಗ ಧಾನ್ಯದ ಬೆಲೆ ಮಾರುಕಟ್ಟೆಯಲ್ಲಿ ಕ್ವಿಂಟಾಲಿಗೆ ನಲವತ್ತು ರೂಪಾಯಿಗಳಿದ್ದರೂ ಎಂಬತ್ತು ರೂಪಾಯಿಗಳಿಗೇ ಕೊಡಿ, ಮತ್ತು ಅದರ ಮುಖಾಂತರ ಕಂದಾಯದ ಬಾಕಿ, ಸಂಘದ ಸಾಲ ಮತ್ತು ತಕಾವಿ ಸಾಲಗಳನ್ನು ಮುರಿದುಕೊಳ್ಳುತ್ತೇವೆ ಎಂದು ಹೇಳಲಾಗಿದೆ.

ಶ್ರೀ ಭೀಮಣ್ಣ ಖಂಡ್ರೆ:- ಹೀಗೆ ಮಾಡುವುದನ್ನು ಬಿಟ್ಟು ಮಹಾರಾಷ್ಟ್ರದಲ್ಲಿ ಮಾಡಿರುವ ಹಾಗೆ ಮಾಡಿ.

ಶ್ರೀ ಕೆ.ಎಚ್. ರಂಗನಾಥ್:- ಮಹಾರಾಷ್ಟ್ರ ಸರ್ಕಾರಕ್ಕೆ ಮುಂಬಯಿ ನಗರವೊಂದರಿಂದಲೇ ಬೇಕಾದಷ್ಟು ಉತ್ಪತ್ತಿ ಬರುತ್ತಿದೆ. ಆದರೆ, ನಮಗೆಲ್ಲಿಂದ ಬರುತ್ತಿದೆ?

ಶ್ರೀ ಭೀಮಣ್ಣ ಖಂಡ್ರೆ:- ಬೆಂಗಳೂರು ಇಲ್ಲವೆ?

ಶ್ರೀ ಕೆ.ಎಚ್. ರಂಗನಾಥ್:- ಮಾನ್ಯ ಖಂಡ್ರೆಯವರು ಬಹಳ ಸುಲಭವಾಗಿ ಮಾತನಾಡುತ್ತಾರೆ. ಕಬ್ಬಿನ ಪರ್ಚೇಸ್ ಟ್ಯಾಕ್ಸ್ ಮತ್ತು ಅಗ್ರಿಕಲ್ಚರಲ್ ಇನ್‌ಕಂ ಟ್ಯಾಕ್ಸ್ ಕುರಿತು ಮಾನ್ಯ ಸದಸ್ಯರು ಪ್ರಸ್ತಾಪ ಮಾಡಿದ್ದಾರೆ. ಇದನ್ನು ಮಾನ್ಯ ಸದಸ್ಯರು ಆಯವ್ಯಯದ ಮೇಲೆ ನಡೆದ ಸಾಮಾನ್ಯ ಚರ್ಚೆಯಲ್ಲಿ ಪ್ರಸ್ತಾಪ ಮಾಡಿ, ಮಾನ್ಯ ಅರ್ಥ ಮಂತ್ರಿಗಳಿಂದ ಈ ಬಗ್ಗೆ ಸಮಜಾಯಿಷಿ ಪಡೆದಿದ್ದರೆ ಬಹಳ ಅನುಕೂಲವಾಗುತ್ತಿತ್ತು.

ಶ್ರೀ ಎಸ್.ಆರ್. ಬೊಮ್ಮಾಯಿ:- ಈ ಎಲ್ಲಾ ವಿಚಾರಗಳನ್ನು ನನ್ನ ಬಡ್ಜೆಟ್ ಭಾಷಣದಲ್ಲಿ 1, 2, 3, 4, 5 ಎಂದು ಸರ್ಕಾರದವರು ಏನೇನು ಮಾಡಿದ್ದಾರೆ ಎಂದು ಕೇಳಿದ್ದೇನೆ. ಆದರೂ ಉತ್ತರ ಕೊಡಲಿಲ್ಲ. ಅದಕ್ಕಾಗಿ ರೈತ ಮಂತ್ರಿಗಳಾದ ತಮಗೆ ಮೊರೆ ಹೋಗಿದ್ದೇವೆ.

ಶ್ರೀ ಕೆ.ಎಚ್. ರಂಗನಾಥ್:- ಸ್ವಾಮಿ, ಅಭಿವೃದ್ಧಿ ಖರ್ಚುಗಳನ್ನು ನೋಡುತ್ತಾ ಹೋದರೆ ನಮ್ಮ ರಾಜ್ಯದಲ್ಲಿಯೂ ಕೂಡ ಜಾಸ್ತಿ ಇದೆ. ಹಣ ಒದಗಿಸಬೇಕಾಗುತ್ತೆ. ಹಣ ಒದಗಿಸತಕ್ಕ ವ್ಯವಸ್ಥೆ ಇಲ್ಲದೇ ಹೋದರೆ ತೊಂದರೆಯಾಗುತ್ತದೆ. ಹಣದ ವ್ಯವಸ್ಥೆಯಿಲ್ಲದೆ ಸರ್ಕಾರ ನಡೆಸುತ್ತೇವೆಂದು ಹೇಳಿದರೆ ತಪ್ಪಾಗುತ್ತದೆ. ಈ ದೃಷ್ಟಿಯಿಂದ ವಿಚಾರ ಮಾಡಬೇಕಾಗುತ್ತದೆ.

ಶ್ರೀ ಎಸ್.ಆರ್. ಬೊಮ್ಮಾಯಿ:- ಮಂತ್ರಿಮಂಡಲದ ಮುಂದೆ ಇಡಿ.

ಶ್ರೀ ಕೆ.ಎಚ್. ರಂಗನಾಥ್:- ನಾನು ಈ ವಿಚಾರವನ್ನು ಲಘುವಾಗಿ ತೆಗೆದುಕೊಂಡಿಲ್ಲ. ಗಂಭೀರವಾಗಿಯೇ ತೆಗೆದುಕೊಂಡಿದ್ದೇನೆ. ಎಲ್ಲ ರಾಜ್ಯಗಳಿಗಿಂತಲೂ ನಮ್ಮ ರಾಜ್ಯ ಬಹಳ ಕಷ್ಟದ ರಾಜ್ಯ, ಆಂಧ್ರದವರಿಗೂ ಲಾಭವಾಯಿತು. ಮದ್ರಾಸ್‌ನವರಿಗೆ ಮಲಬಾರ್ ಹೋದುದರಿಂದ ಅವರಿಗೂ ನಷ್ಟವಾಗಲಿಲ್ಲ. ನಮ್ಮ ಕರ್ನಾಟಕ ರಾಜ್ಯಕ್ಕೆ 5 ಭಾಗಗಳಿಂದ ಬಂದಂಥ ಪ್ರದೇಶಗಳು ಇರುವುದರಿಂದ ಹೆಚ್ಚು ಕೆಲಸವಾಗಬೇಕಾಗುತ್ತದೆ.

ಶ್ರೀ ಎಸ್.ಆರ್. ಬೊಮ್ಮಾಯಿ:- ಮಹಾರಾಷ್ಟ್ರಕ್ಕೂ ಮರಾಠವಾಡ ಹೋಯಿತು. ಅದು ಕೂಡ ಹಿಂದುಳಿದಂಥ ಜಿಲ್ಲೆ. ಬೆಲೆ ಕುಸಿದುಬಿದ್ದು ಇವತ್ತು ರೈತ ಕಷ್ಟದಲ್ಲಿದ್ದಾನೆ. ಎಲ್ಲ ರಾಜ್ಯಗಳ ಸರ್ಕಾರಗಳು ರೈತರಿಗೆ ಕೆಲವು ತೆರಿಗೆಗಳನ್ನು ಮನ್ನಾ ಮಾಡಿವೆ? ನೀವು ಕೂಡ ಅದೇ ರೀತಿ ಮಾಡಿ ಎಂದು ಹೇಳುತ್ತೇನೆ.

ಶ್ರೀ ಕೆ.ಎಚ್. ರಂಗನಾಥ್:- ನಾನು ಗಮನಿಸಿದ್ದೇನೆ, ಅಂಕಿ ಸಂಖ್ಯೆಗಳನ್ನು ಸಭೆಯ ಮುಂದಿಟ್ಟಿದ್ದೇನೆ. ನಮ್ಮ ಬೆಲೆ ಏನೂ ಕುಂದಿಲ್ಲ , ತೊಂದರೆಯಾಗಿದೆ, ಡಿಸೆಂಬರ್ ಮತ್ತು ಜನವರಿಯಲ್ಲಿ ಮಳೆ ಬಿದ್ದುದರಿಂದ ಹತ್ತಿ ವಗೈರೆ ಪದಾರ್ಥಗಳ ಗುಣಮಟ್ಟ ಕಡಿಮೆಯಾಗಿರುವುದು ಮತ್ತು ಕೆಟ್ಟುಹೋಗಿರುವುದು ಎಲ್ಲರಿಗೂ ಗೊತ್ತಿದೆ. ಆದರೆ, ಇನ್‌ಕಂಟ್ಯಾಕ್ಸ್ ಹಾಗೂ ಶುಗರ್‌ಕೇನ್ ಪರ್ಚೇಸ್ ಟ್ಯಾಕ್ಸ್ ಮನ್ನಾ ಮಾಡಬೇಕೆಂದು ಏನು ಕೇಳಿದ್ದಾರೆ. ಅದು ಪಾಲಿಸಿ ಡಿಸಿಷನ್, ಅದನ್ನು ನನ್ನ ಗಮನಕ್ಕೆ ತೆಗೆದುಕೊಂಡಿದ್ದೇನೆ. ಆದು ನನ್ನ ವ್ಯಾಪ್ತಿಯೊಳಗೆ ಬರುವುದಿಲ್ಲ ಎನ್ನುವ ಮಾತನ್ನು ಹೇಳಿದ್ದೇನೆ.

ಮಾನ್ಯ ಚೌಡಯ್ಯನವರು ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್‌ನವರು ಒದಗಿಸತಕ್ಕ ಬುಲ್ಡೋಜರ್‌ಗಳಿಗೆ ಬಾಡಿಗೆ ಜಾಸ್ತಿ ಇದೆ ಎಂದು ಹೇಳಿದರು. ಬಾಡಿಗೆ ಜಾಸ್ತಿ ಕೊಟ್ಟಿರತಕ್ಕವರ ಪೈಕಿ ನಾನು ಒಬ್ಬ. ವ್ಯವಸಾಯ ಇಲಾಖೆಯಲ್ಲಿದ್ದಂಥ ಎಲ್ಲ ಬುಲ್ಡೋಜರುಗಳನ್ನು ಇಲ್ಲಿಗೆ ಕಳುಹಿಸಿಬಿಟ್ಟರು. ಆ ಬುಲ್ಡೋಜರ್‌ಗಳು ಹೇಗಿವೆ ಅಂದರೆ ಬೇಂದ್ರೆಯವರ ಕವನ ಇದ್ದ ಹಾಗಿವೆ. ಕುರುಡ, ಕುಂಟ ಈ ರೀತಿ ಇವೆ. ಹೀಗಾಗಿ ಅವುಗಳು ಒಂದು ವರ್ಷಕ್ಕೆ ಒಂದು ಸಾವಿರ ಗಂಟೆ ಕೆಲಸ ಮಾಡಿದರೆ ಹೆಚ್ಚು ಎನ್ನುವ ಸ್ಥಿತಿಯಲ್ಲಿವೆ? ಸಾಮಾನ್ಯ ದಿನ ಒಂದಕ್ಕೆ 8 ಗಂಟೆ ಕೆಲಸ ಮಾಡಿದರೆ ಎಕನಾಮಿಕ್ ಆಗಿ ಸರಿಯಾಗಿರುತ್ತದೆ. 365 ದಿವಸಕ್ಕೆ ಒಂದು ಸಾವಿರ ಗಂಟೆ ಕೆಲಸ ಮಾಡಿದರೆ ಹೆಚ್ಚು, ಒಂದು ದಿವಸಕ್ಕೆ 3 ಗಂಟೆ ಕೆಲಸ ಮಾಡಿದರೆ ಸಾಕು, ಬುಲ್ಡೋಜರ್ ನಡೆಸುವವನು ಆ ಕಡೆ ಈ ಕಡೆ ಓಡಾಡಿದರೆ ಎರಡೂವರೆ ಗಂಟೆ ಮಾಡಿದರೆ ಮಾಡಬಹುದು, ಇಲ್ಲ ಒಂದು ಗಂಟೆ ಮಾಡಿದರೆ ಮಾಡಬಹುದು, ಹೀಗಾಗಿ ಇದನ್ನು ಸರಿಯಾದ ದಾರಿಯಲ್ಲಿ ತರಬೇಕೆನ್ನುವ ಬಗ್ಗೆ ಯೋಚನೆ ಮಾಡುತ್ತಿದ್ದೇವೆ. ಕೆಲಸ ಇಲ್ಲದೇ ಇರತಕ್ಕ ಪರಿಸ್ಥಿತಿ ಇದೆ. ಈಗ ಫಾರೆಸ್ಟ್ ಡಿಪಾರ್ಟ್‌ಮೆಂಟಿನವರು ಹಾಗೂ ಕುದುರೆಮುಖ ಯೋಜನೆಯಿಂದ ಸ್ವಲ್ಪ ಕೆಲಸ ಬರುವುದರಲ್ಲಿದೆ. ಕೆಲಸ ಸಾಕಷ್ಟು ಬಂದರೆ ಬಹಳಮಟ್ಟಿಗೆ ವಿಚಾರ ಮಾಡಬಹುದು. ಬಾಡಿಗೆ ಜಾಸ್ತಿ ಎನ್ನುವುದು ನನ್ನ ಗಮನಕ್ಕೆ ಬಂದಿದೆ. ಇದು ಅನಿವಾರ್ಯವಾಗಿ ಜಾಸ್ತಿಯಾಗಿದೆ ಎಂದು ಹೇಳುತ್ತೇನೆ. ಮಾನ್ಯ ಚಿಮ್ಮನಕಟ್ಟಿಯವರು ಶೇಂಗಾ ವಗೈರೆ ಬೆಳೆಗಳಿಗೆ ಬರತಕ್ಕ

ರೋಗದ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ಮತ್ತೆ ನೀರು ನುಗ್ಗಿ ಬೆಳೆಗಳಿಗೆ ನಷ್ಟವಾಗುವ ವಿಚಾರವನ್ನು ಪ್ರಸ್ತಾಪ ಮಾಡಿದ್ದಾರೆ. ಬಾದಾಮಿ ಮತ್ತಿತರ ಕಡೆ ಬೆಳೆಗಳಿಗೆ ಬರತಕ್ಕ ರೋಗವನ್ನು ಕೇಂದ್ರ ಸರ್ಕಾರದ ಸಹಾಯದಿಂದ ತಡೆಗಟ್ಟುವುದಕ್ಕೆ ವ್ಯವಸ್ಥೆ ಮಾಡುತ್ತಿದ್ದೇವೆ. ಕಾಡಾ ಏರಿಯಾ ಎಂಡೋಮಿಕ್ ಏರಿಯಾ ಎಂದು ಪರಿಗಣಿಸಿ ಕಾರ್ಯಕ್ರಮ ಹಾಕಿದ್ದೇವೆ. ಮತ್ತೆ ಅವರು ಚೌಳು ಮಟ್ಟಿನ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ಅದನ್ನು ತೆಗೆಯುವುದಕ್ಕೆ ವ್ಯವಸ್ಥೆ ಮಾಡುತ್ತೇವೆಂದು ಹೇಳುತ್ತೇನೆ. ಇನ್ನು ನೀರಾವರಿಯಾಗದೇ ಇರತಕ್ಕ ಪ್ರದೇಶದ ಬಗ್ಗೆ ಹೇಳಿದ್ದಾರೆ. ಈ ವಿಚಾರದಲ್ಲಿ ನೀರಾವರಿ ಮಂತ್ರಿಯವರೊಂದಿಗೆ ವಿಚಾರ ಮಾಡುತ್ತೇನೆ. ಇದು ತಕ್ಷಣವೇ ಆಗುವ ಕೆಲಸ ಅಲ್ಲ. ಬಹಳ ದೊಡ್ಡ ಕೆಲಸ ನಿಧಾನವಾಗಿ ಆಗುತ್ತದೆಂದು ಹೇಳುತ್ತೇನೆ. ಪಶುವೈದ್ಯ ಕಾಲೇಜುಗಳಲ್ಲಿ 80 ಪರ್ಸೆಂಟ್ ಸೀಟುಗಳನ್ನು ಕೊಡಬೇಕೆಂದು ಮಾನ್ಯ ಚೌಡಯ್ಯನವರು ಹೇಳಿದ್ದಾರೆ. ಸಾಮಾನ್ಯವಾಗಿ ಈಗ ವ್ಯವಸಾಯಗಾರರ ಮಕ್ಕಳಿಗೆ ಶೇಕಡ 79-80ರಷ್ಟು ಸೀಟುಗಳು ದೊರೆಯುತ್ತಿವೆ. ತಾವು ವ್ಯವಸಾಯಗಾರರ ಮಕ್ಕಳಿಗೆ ಕೇಳುತ್ತೀರೋ?......

ಶ್ರೀ ಟಿ. ಚೌಡಯ್ಯ:- ಗ್ರಾಮಾಂತರ ಪ್ರದೇಶದ ಮಕ್ಕಳಿಗೆ.

ಶ್ರೀ ಕೆ.ಎಚ್. ರಂಗನಾಥ್:- ಇನ್ನೂ ಕಷ್ಟವಾಯಿತು. ಮೊನ್ನೆ ಈ ಪ್ರಶ್ನೆ ಬಂದಿತ್ತು, ಮೆಡಿಕಲ್ ಕಾಲೇಜು ಹಾಗೂ ಇನ್ನಿತರೇ ಕಾಲೇಜುಗಳಲ್ಲಿ ಗ್ರಾಮಾಂತರ ಪ್ರದೇಶದ ಮಕ್ಕಳಿಗೆ ಸೀಟುಗಳನ್ನು ಕೊಡುವ ಬಗ್ಗೆ ಈಗ 70-80 ಪರ್ಸೆಂಟ್ ಸೀಟುಗಳು ದೊರೆಯುತ್ತಿವೆ. ಜೊತೆಗೆ 10 ಪರ್ಸೆಂಟ್ ಮಾರ್ಕ್ಸ್ ಅವಾರ್ಡ್ ಮಾಡಿಕೊಡತಕ್ಕಂಥಾದ್ದು ಬೇರೆ ಇದೆ. ಇದನ್ನೆಲ್ಲಾ ಲೆಕ್ಕ ಹಾಕಿ ನೋಡಬೇಕಾಗುತ್ತದೆ. ಮತ್ತೆ ಪಶುವೈದ್ಯ ಕಾಲೇಜುಗಳಲ್ಲಿ ಸೀಟುಗಳನ್ನು ಜಾಸ್ತಿ ಮಾಡುವ ಬಗ್ಗೆ ಹೇಳಿದ್ದಾರೆ. ಹೋದವರ್ಷ 20 ಸೀಟು ಜಾಸ್ತಿ ಮಾಡಿದ್ದೇವೆ. ಸೀಟುಗಳನ್ನು ಜಾಸ್ತಿ ಮಾಡುವುದು ದೊಡ್ಡದಲ್ಲ. ಅದಕ್ಕೆ ತಕ್ಕಂತೆ ವಿದ್ಯಾರ್ಥಿಗಳಿಗೆ ಅನುಕೂಲಗಳನ್ನು ಮಾಡಬೇಕಾಗುತ್ತದೆ. ಪ್ರಯೋಗಶಾಲೆಯ ಅನುಕೂಲಗಳನ್ನು ಮಾಡಬೇಕಾಗುತ್ತದೆ. ಮೊನ್ನೆ ಮುಖ್ಯಮಂತ್ರಿಗಳು ಕೂಡ ಈ ಸಭೆಯಲ್ಲಿ ಭರವಸೆ ಕೊಟ್ಟಿದ್ದಾರೆ. ಪ್ರಯೋಗಶಾಲೆಗಾಗಿ ಮಲ್ಲೇಶ್ವರಂನಲ್ಲಿರತಕ್ಕ ಪಶುವೈದ್ಯ ಶಾಲೆಯನ್ನು ಹಾಗೂ ಇನ್ನಿತರ ಶಾಲೆಗಳನ್ನು ವಿದ್ಯಾರ್ಥಿಗಳ ಪ್ರಯೋಗಾಲಯಕ್ಕಾಗಿ ತೆಗೆದುಕೊಳ್ಳಲಾಗುವುದೆಂದು ಆಶ್ವಾಸನೆ ಕೊಟ್ಟಿದ್ದಾರೆ. ಈ ವಿಚಾರದಲ್ಲಿ ಸೂಕ್ತಕ್ರಮ ತೆಗೆದುಕೊಳ್ಳುತ್ತೇವೆಂದು ಹೇಳುತ್ತಾ, ಮಾನ್ಯ ರಾಜಶೇಖರನ್‌ರವರು ಡ್ರೈ ಫಾರ್ಮಿಂಗ್ ಏರಿಯಾ ಬಗ್ಗೆ ಪ್ರಸ್ತಾಪಮಾಡಿದ್ದಾರೆ. ಅದರ ಬಗ್ಗೆ ತೀವ್ರಗತಿಯ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತೇವೆ. ಸುಮಾರು 80 ಭಾಗ ರೈತರು ಡ್ರೈಫಾರ್ಮಿಂಗ್ ಏರಿಯಾದಲ್ಲಿದ್ದಾರೆ. ಇವರೆಲ್ಲ ಸಾಮಾನ್ಯವಾಗಿ ಸಣ್ಣ ಹಿಡುವಳಿದಾರರಾಗಿದ್ದಾರೆ. ಈ ವಿಚಾರದಲ್ಲಿ ವಿಶೇಷವಾದ ಯೋಜನೆಯನ್ನು ಸರ್ಕಾರದವರು ಹಾಕಿಕೊಂಡು ಕೆಲವು ತಾಲ್ಲೂಕುಗಳನ್ನು ತೆಗೆದುಕೊಂಡು ಈ ಯೋಜನೆಯನ್ನು ಕಾರ್ಯ ರೂಪಕ್ಕೆ ತರಲಾಗುವುದು. ಕರಾವಳಿ ಪ್ರದೇಶದಲ್ಲಿ ಇಳುವರಿ ಕಡಿಮೆಯಾಗಿರುವುದನ್ನು ಮಾನ್ಯ ರಾಜಶೇಖರನ್‌ರವರು ಸರ್ಕಾರದ ಗಮನಕ್ಕೆ ತಂದಿದ್ದಾರೆ. ನಾನು ಕಳೆದ ಒಂದೂವರೆ ತಿಂಗಳಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಪ್ರವಾಸ ಮಾಡಿದ್ದಾಗ್ಗೆ, ಭತ್ತದಲ್ಲಿ ಕೊರತೆಯಿತ್ತು. ಇವತ್ತು ಅದು ಹೆಚ್ಚುವರಿಯಾಗಿದೆ. ಅಂಥ ಒಂದು ವೆರೈಟಿಯನ್ನು ಭತ್ತದಲ್ಲಿ

ಕಂಡುಹಿಡಿಯಲಾಗಿದೆ. ಹೀಗಾಗಿ ಮಲೆನಾಡಿಗೆ ಒಂದು ಭತ್ತದ ಸಂಶೋಧನಾ ಕೇಂದ್ರವನ್ನು ಕೊಡುವ ವ್ಯವಸ್ಥೆ ಮಾಡಿದ್ದೇನೆ. ಸ್ವಾಮಿ, ಇಲ್ಲಿಯವರೆಗೂ ಕಡಿಮೆಯಾಗಿಲ್ಲ, ಜಾಸ್ತಿಯಾಗುತ್ತಿದೆ, ಅದರ ಬಗ್ಗೆ ತಮಗೆ ಅಂಕಿ ಅಂಶ ಒದಗಿಸಿಕೊಡುತ್ತೇನೆ. ಇವೊತ್ತು ಭತ್ತ ಅಷ್ಟೆ ಅಲ್ಲ, 10 ಸಾವಿರ ಎಕರೆಯಲ್ಲಿ ಪಲ್‌ಸಸ್ ಬೆಳೆದಿದ್ದಾರೆ. 1 ಸಾವಿರ ಎಕರೆಯಲ್ಲಿ ಶುಗರ್‌ಕೇನ್ ಬೆಳವಣಿಗೆ ಮಾಡುತ್ತಿದ್ದಾರೆ. ಇನ್ನು ಮೂಡಬಿದರೆ ತಾಲ್ಲೂಕಿನಲ್ಲಿ ಸಿ ಐ ಕಾಟನ್ ಬೆಳೆ ಆಗುತ್ತದೆ ಎಂದು ಅಭಿಪ್ರಾಯ ಬಂತು. ನಾನು ಅಲ್ಲಿಗೆ ಹೋದಾಗ ಅದನ್ನು ಪ್ರಯೋಗ ಮಾಡಿನೋಡಿ ಎಂದು ಹೇಳಿದೆ. ಮಾನ್ಯ ಸದಸ್ಯರು ಯೂನಿವರ್ಸಿಟಿ ಫಾರಮ್ಸ್ ಕೂಡ ಲಾಭದಾಯಕವಾಗಿ ಕೆಲಸ ಮಾಡುತ್ತಿಲ್ಲ ಎಂದು ಹೇಳಿದರು. ಇವೊತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಮ್ಮ ಅಗ್ರಿಕಲ್ಚರ್ ಫಾರಂಸ್ ಎಲ್ಲಾ ಲಾಭದಾಯಕವಾಗಿದೆ. ಲಾಭ ಕೂಡ ಮಾಡುತ್ತಿವೆ. ಪ್ರಯೋಗ ದೃಷ್ಟಿಯಿಂದ ಅಲ್ಲಿ ಹೆಚ್ಚು ಶ್ರಮವಹಿಸಿ ಮಾಡುತ್ತಿದ್ದಾರೆ. ಇನ್ನು ವಿಶ್ವವಿದ್ಯಾಲಯದ ನಷ್ಟದ ಬಗ್ಗೆ ಹೇಳಿದ್ದಾರೆ. ಅದು ಸಿಬ್ಬಂದಿ ಮೇಲೆ ಕಟ್ಟಡದ ಮೇಲೆ, ಇವೆಲ್ಲಾ ಸೇರಿರುವುದರಿಂದ ಸ್ವಲ್ಪ ನಷ್ಟವಾಗಿದೆ. ಈಗ ಮ್ಯಾನೇಜ್‌ಮೆಂಟ್ ಅಂಕಿ ಅಂಶ ಬೇರೆ ಇಟ್ಟು, ರಿಸರ್ಚ್ ಅಂಕಿ ಅಂಶ ಬೇರೆ ಇಟ್ಟರೆ ಆಗ ಗೊತ್ತಾಗುತ್ತದೆ. ಆದುದರಿಂದ ಅದನ್ನು ಬೇರ್ಪಡಿಸಲಿಕ್ಕೆ ಹೇಳಿದ್ದೇನೆ. ಇನ್ನು ಕೋಸ್ಟಲ್ ಏರಿಯಾದಲ್ಲಿ ವಿಕ್ರಮ್ ಜಿ.ಎಂ.ಆರ್; 17 ಜಯ, ರೆಡ್ ಅನ್ನಪೂರ್ಣ, ವಾಣಿ ಈ ಬೆಳೆಗಳನ್ನು ತೆಗೆದುಕೊಂಡು ಹೆಚ್ಚು ಇಳುವರಿ ಮಾಡುತ್ತಿದ್ದಾರೆ. ಇನ್ನು ಶಾಮಣ್ಣನವರು ತೊಗರಿ ಬೇಳೆ ವಿಚಾರ ಹೇಳಿದರು. ಅವರು ಲೆಕ್ಕ ಹಾಕುವುದರಲ್ಲಿ ಬಹಳ ಹುಷಾರ್ ಇದ್ದಾರೆ. ಸೇಲ್ಸ್ ಟ್ಯಾಕ್ಸ್ ಎಷ್ಟಾಗುತ್ತದೆಂದು ಲೆಕ್ಕ ಹಾಕಿ ಹಾಗೆ ನಾಲ್ಕು ರೂಪಾಯಿಗೆ ಬಂದಿದೆ ಎಂದು ಹೇಳಿದರು. ಅವರ ಲೆಕ್ಕಾಚಾರ ಮೆಚ್ಚಬೇಕಾದ್ದು ಇದೆ. ಅವರಿಂದ ಕಟ್‌ಮೋಷನ್ ಬರುತ್ತದೆ, ಇದನ್ನೆಲ್ಲಾ ಪ್ರಸ್ತಾಪ ಮಾಡುತ್ತಾರೆ ಎನ್ನುವುದು ನನಗೆ ಮೊದಲೇ ಗೊತ್ತಿತ್ತು. ಇವೊತ್ತು ನಮ್ಮ ರಾಜ್ಯದಲ್ಲಿ ಸೇಲ್ಸ್‌ಟ್ಯಾಕ್ಸ್ ಫುಡ್‌ಗ್ರೈನ್ಸ್ ಮೇಲೆ ನಾವು ಹಾಕಿರುವುದರಿಂದ ಸ್ವಲ್ಪ ಬೆಲೆ ಹೆಚ್ಚು ಆಗಲಿಕ್ಕೆ ಕಾರಣವಾಗಿದೆ.

ಶ್ರೀ ಭೀಮಣ್ಣ ಖಂಡ್ರೆ:- ಸ್ವಾಮಿ ಬೇರೆ ರಾಜ್ಯದಲ್ಲಿ ಇಲ್ಲ.

ಶ್ರೀ ಕೆ.ಎಚ್. ರಂಗನಾಥ್:- ಬೇರೆ ರಾಜ್ಯದಲ್ಲಿ ಇಲ್ಲ ಎನ್ನುವುದು ನನಗೂ ಗೊತ್ತಿದೆ. ಫುಡ್‌ಗ್ರೈನ್ಸ್ ಮೇಲೆ ತೆರಿಗೆ ಬೀಳುವುದರಿಂದ ಸ್ವಲ್ಪ ಜಾಸ್ತಿಯಾಗುತ್ತದೆ. ಅದು ನನ್ನ ವ್ಯಾಪ್ತಿಗೆ ಸೇರಿಲ್ಲ ಎಂದು ನಾನು ಈಗಾಗಲೇ ಪ್ರಸ್ತಾಪ ಮಾಡಿದೆ.

ಶ್ರೀ ಭೀಮಣ್ಣ ಖಂಡ್ರೆ:- ಏನಾದರೂ ಒಂದು ಮಿತಿ ಇಡಲಿಕ್ಕೆ ಸಾಧ್ಯವಿಲ್ಲವೇ?

ಶ್ರೀ ಕೆ.ಎಚ್. ರಂಗನಾಥ್:- ಸ್ವಾಮಿ, ತಾವು ಕಾರಂಜಿ ಪ್ರಾಜೆಕ್ಟ್ ಬೇಡ ಎಂದು ಹೇಳುತ್ತೀರಾ? ಅಪ್ಪರ್ ಕೃಷ್ಣ ಪ್ರಾಜೆಕ್ಟ್ ಬೇಡ ಎಂದು ಹೇಳುತ್ತೀರಾ? ಇವೊತ್ತು ಏಳೆಂಟು ಪ್ರಾಜೆಕ್ಟ್‌ಗಳು ಆಗುತ್ತಿವೆ. ಇಷ್ಟನ್ನು ಹೇಳಿ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

*****

# ರೈತ ಚಳವಳಿ ಸರ್ಕಾರದ ವೈಫಲ್ಯ: ಒಂದು ಚರ್ಚೆ

30 ಜನವರಿ 1984

ಶ್ರೀ ಕೆ.ಎಚ್. ರಂಗನಾಥ್ (ಹಿರಿಯೂರು):- ಮಾನ್ಯ ಉಪಾಧ್ಯಕ್ಷರೇ, ಮಾನ್ಯ ವಿರೋಧ ಪಕ್ಷದ ನಾಯಕರು ನಿಲುವಳಿ ಸೂಚನೆಯ ಬಗ್ಗೆ ಪ್ರಸ್ತಾಪ ಮಾಡುವ ಸಮಯದಲ್ಲಿ ಎಲ್ಲಾ ವಿಚಾರಗಳನ್ನು ಹೇಳಿದ್ದಾರೆ. ಆ ಒಂದು ಚಳುವಳಿ ಪ್ರಾರಂಭ ಆಗುವುದಕ್ಕೆ ಮೂರು ದಿವಸಗಳ ಮುನ್ನವೇ ತನ್ನದೇ ಆದ ಧಾಟಿಯಲ್ಲಿ ಅರ್ಥಾತ್ ಪ್ರಚೋದನೆ ಮಾಡತಕ್ಕ ಧಾಟಿಯಲ್ಲಿ ಪ್ರಯತ್ನ ಮಾಡಿರುವುದರಿಂದ ಅದನ್ನು ಕೈಗೆ ಎತ್ತಿಕೊಂಡು ಚಳುವಳಿಯನ್ನು ನಿರಂತರವಾಗಿ 4 ದಿವಸಗಳವರೆಗೆ ನಡೆಸಿ ರಾಜ್ಯದಲ್ಲಿ ಎಂದೂ ಆಗದೆ ಇರತಕ್ಕ ರೀತಿಯಲ್ಲಿ ಸಾರ್ವಜನಿಕರಿಗೆ ತೊಂದರೆ ಆಗಿರುವುದನ್ನು ನಾವು ನೋಡುತ್ತಿದ್ದೇವೆ. ನಾನು 23ನೇ ತಾರೀಖು ಸಭೆಯಲ್ಲಿ ಇದ್ದೆ. ಆಗ ಮಾನ್ಯ ಮುಖ್ಯಮಂತ್ರಿಯವರು ಬಿ.ಜೆ.ಪಿ. ಸದಸ್ಯರಾದ ಮಾನ್ಯ ಯಡಿಯೂರಪ್ಪನವರು ಎತ್ತಿದಂತಹ ಒಂದು ಸಾಧಾರಣದ ವಿಷಯದ ಮೇಲೆ ಚರ್ಚೆ ಮಾಡುತ್ತಾ ಒಂದು ಹೇಳಿಕೆಯನ್ನು ನೀಡಿದರು. 26ನೇ ತಾರೀಖಿನಿಂದ ಚಳುವಳಿ ಪ್ರಾರಂಭವಾಗುವುದರ ಬಗ್ಗೆ ಅವರು ತಮ್ಮ ಗಮನವನ್ನು ಸೆಳೆದರು. ಆ ಬಗ್ಗೆ ನನ್ನ ದೃಷ್ಟಿಯಲ್ಲಿ ಹೇಳುವುದಾದರೆ ಮಾನ್ಯ ಮುಖ್ಯಮಂತ್ರಿಗಳು ಅಂತಹ ಪ್ರಚೋದನಾತ್ಮಕವಾದ ಹೇಳಿಕೆಯನ್ನು ಕೊಡುವ ಅವಶ್ಯಕತೆ ಇರಲಿಲ್ಲ. ಅದು ಅವರಿಗೆ ಬಿಟ್ಟಿದ್ದು. ಅವರು ಭಾವಪರವಶರಾಗಿ ಮಾತನಾಡುತ್ತಾ ರಾಜ್ಯಾದ್ಯಂತ ಈ ಒಂದು ಚಳುವಳಿ ವ್ಯಾಪಕವಾಗಿ ಹರಡುವುದಕ್ಕೆ ಅನುಕೂಲವಾಗುವ ಹಾಗೆ ಈ ಒಂದು ಸದನದ ಮೂಲಕ ಅದನ್ನು ಸೃಷ್ಟಿ ಮಾಡಿದರು ಎಂದು ಹೇಳಿದರೆ ತಪ್ಪಾಗಲಾರದು. ಸಾಧಾರಣವಾಗಿ ರೈತ ಸಂಘದ ಪದಾಧಿಕಾರಿಗಳು ಈ ಸದನದ ಸದಸ್ಯರಾಗದೇ ಇರುವುದರಿಂದ ಸಾಮಾನ್ಯವಾಗಿ ಹೊರಗಡೆಯಿಂದ ತಮ್ಮ ಹೇಳಿಕೆಗಳನ್ನು ಕೊಡುತ್ತಾರೆ. ಅದಕ್ಕೆ ಸಂಬಂಧಪಟ್ಟಂತೆ ಸರ್ಕಾರದವರು ಏನಾದರೂ ಹೇಳಿಕೆ ಕೊಡುವುದಿದ್ದರೆ ಅದನ್ನು ಅವರು ಹೊರಗಡೆ ಕೊಟ್ಟರೆ ಒಳ್ಳೆಯದು ಎಂದು ನಾನೂ ಕೂಡ ಅಭಿಪ್ರಾಯ ಪಡುತ್ತೇನೆ. ಆದರೆ ಸರ್ಕಾರ ಆ ದಿವಸ ಉತ್ತರವನ್ನು ಕೊಡುವ ಪ್ರಯತ್ನ ಮಾಡಿತು. ಇದನ್ನು ಇವರು ಬುದ್ಧಿಪೂರ್ವಕವಾಗಿ ಮಾಡುತ್ತಿರುಬಹುದೆಂದು ನನಗನ್ನಿಸುತ್ತದೆ. ಅದಕ್ಕೆ ಸಹಾಯಕವಾಗುವ ರೀತಿಯಲ್ಲಿ ರೈತಸಂಘದ ಅಧ್ಯಕ್ಷರಾಗಿರುವ ರುದ್ರಪ್ಪನವರು ಒಂದು ಮಾತನ್ನು ಹೇಳಿದ್ದಾರೆ: ಅದು 29ನೇ ತಾರೀಖಿನ ಪತ್ರಿಕೆಗಳಲ್ಲಿ ಬಂದಿದೆ. ಆ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳೂ ಕೂಡಾ ಹೇಳಿದ್ದಾರೆ. ಈ ಬಗ್ಗೆ ಮಾನ್ಯ ಕೈಗಾರಿಕಾ ಮಂತ್ರಿಗಳು ಮಾತಾಡುತ್ತಾರೆನ್ನುವ ಹಾಗೆ ಮಾತನ್ನು ಪ್ರಸ್ತಾಪ ಮಾಡಿದ್ದಾರೆ. "Rajya Raitha Sangha chief Sri H.S. Rudrappa has ruled out any possibility of suspending the three day old agitation in the State". ಇವತ್ತು ತೀವ್ರಗೊಳಿಸಿ ಅದನ್ನು ನಡೆಸುವುದಕ್ಕೆ ಇದು ಕಾರಣ ಎಂದು ಅವರು ಹೇಳಿದ್ದಾರೆ.

ಇದಕ್ಕೆ ಯಾರು ಕಾರಣರು ಹಾಗೂ ಇದನ್ನು ಮೊಟಕು ಮಾಡಬಹುದಾಗಿತ್ತೇ ಎಂಬ ಪ್ರಶ್ನೆಗಳ ಬಗ್ಗೆ ಪ್ರಸ್ತಾಪ ಮಾಡಬೇಕಾಗಿದೆ ಎಂದು ಅವರು ಹೇಳಿದ್ದಾರೆ.

"He told Deccan Herald that Industries Minister Sri S.R. Bommai's appeal to stop agitation was not a new proposal" ಏಕೆಂದರೆ ಇವರು ಹೀಗೆ ಮಾತನಾಡುತ್ತಾ ಬಂದಿರುವುದು ಹೊಸದೇನೂ ಅಲ್ಲ. ಆ ಒಂದು ಮಾತಿಗೆ ಯಾವ ವಿಧವಾದ ಅರ್ಥವೂ ಇಲ್ಲ. ಹೇಳುವ ಹಾಗೆ ನಡೆದುಕೊಳ್ಳುವುದಿಲ್ಲವೆಂದು ಅರ್ಥ. "We could honour his words only when the Government met the charter of demands presented by the Association, he added". ಎಂದು ಹೇಳಿದರೆ ಅವರು ಕೊಟ್ಟಿರತಕ್ಕ ಡಿಮ್ಯಾಂಡ್‌ಗಳ ಬಗ್ಗೆ ಏನೂ ಕ್ರಮವನ್ನು ತೆಗೆದುಕೊಂಡಿಲ್ಲ. ಹಾಗೂ ಇವರ ಬಗ್ಗೆ ಅವರಿಗೆ ವಿಶ್ವಾಸ ಹೋಗಿದೆ ಎನ್ನುವ ಮಾತನ್ನು ಹೇಳಿದ್ದಾರೆ. ಮಾನ್ಯ ವಿರೋಧಪಕ್ಷದವರು ಇವರಲ್ಲಿ ಬಹಳ ಆತ್ಮೀಯತೆ ಇತ್ತು, ಪ್ರೇಮ ಇತ್ತು ಎಂದು ಹೇಳಿದರು. ಆ ಬಗ್ಗೆ ನಾನು ಪ್ರಸ್ತಾಪ ಮಾಡುವುದಿಲ್ಲ. ಅದು ನನಗೆ ಸಂಬಂಧಪಟ್ಟ ವಿಚಾರವಲ್ಲ. "Owing to illhealth, he could not meet Mr. Bommai and Chief Minister Ramakrishna Hegde, but Professor Nanjundaswamy and Sundareshan would represent the Association if the Government came forward for taluks". ಹೀಗೆಂದು ಹೇಳಿದ್ದಾರೆ. ಎಂದರೆ ಮಾತುಕತೆ ಆಗುವುದಕ್ಕೂ ಇವತ್ತು ಕೂಡಾ ತಯಾರು ಇಲ್ಲವೆಂದು ಅವರು ಸ್ಪಷ್ಟ ಪಡಿಸಿದ್ದಾರೆ. ಸ್ವಾಮಿ, ರುದ್ರಪ್ಪನವರು ವಯಸ್ಸಾದವರು. ಅವರೂ ಕೂಡಾ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದರು. ಕೃಷಿ ಮಂತ್ರಿಗಳಾಗಿದ್ದವರು. ಅವರು ರಾಷ್ಟ್ರದ ಸ್ವಾತಂತ್ರ ಹೋರಾಟದಲ್ಲಿ ಭಾಗವಹಿಸಿದ್ದವರು. ರೈತರ ಸಮಸ್ಯೆಗಳ ಬಗ್ಗೆ ಬಹಳ ಕಳಕಳಿಯಿಂದ ಪ್ರಸ್ತಾಪ ಮಾಡುತ್ತಿದ್ದಾರೆ. ಅವರ ಬಗ್ಗೆ ಈಗತಾನೆ ಮಾತನಾಡಿದ ಮಾನ್ಯ ಮುಖ್ಯಮಂತ್ರಿಗಳು ತಮ್ಮ ಗೌರವವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಅಲ್ಲಿನ ಪದಾಧಿಕಾರಿಗಳು ಎನ್ನುವ ಮಾತನ್ನು ಹೇಳಿದರು. ಆದರೆ ಇವರ ಹೇಳಿಕೆಗಳನ್ನು ನೋಡುತ್ತಾ ಬಂದರೆ ಎಷ್ಟು ಮಟ್ಟಿಗೆ ಪ್ರಚೋದನೆಗೆ ಸರ್ಕಾರ ಅವಕಾಶವನ್ನು ಮಾಡಿಕೊಟ್ಟಿದೆ. ಹಾಗೂ ಹೊಣೆಯಾಗಿದೆ ಎಂಬುದನ್ನು ಅವರ ಮಾತಿನಿಂದಲೇ ಏನು ಪತ್ರಿಕೆಗಳಲ್ಲಿ ವರದಿಯಾಗಿದೆ ಅದನ್ನು ನೋಡಿದರೆ ಗೊತ್ತಾಗುತ್ತದೆ. "Chief Minister Ramakrishna Hegde today warned the agitating farmers" 23ನೇ ತಾರೀಖು ಅವರು ಹೇಳಿದರು. ಅವರಿಗೆ ಟೆಲಿಗ್ರಾಂ 24ನೇ ತಾರೀಖು ಬಂದಿರಬಹುದು. ಪದಾಧಿಕಾರಿಗಳು, ವಗೈರೆ ಎಂದು ಹೇಳಿದ್ದಾರೆ. ಮತ್ತೆ 21ನೇ ತಾರೀಖು ಮುಖ್ಯಮಂತ್ರಿಗಳು ಅವರಿಗೆ ಕಳುಹಿಸಿರುವ ಟೆಲಿಗ್ರಾಂನ್ನು ಅವರು ಓದಿ ಹೇಳಿದರು.

**Sri S.R. Bommai:** One correction. The date of the Telegram is 22nd, night.

ಶ್ರೀ ಕೆ.ಎಚ್. ರಂಗನಾಥ್:- 21ನೇ ತಾರೀಖು ಟೆಲಿಗ್ರಾಂ ಕೊಟ್ಟಿದ್ದಾರೆ. 22ನೇ ತಾರೀಖು ಉತ್ತರ ಬಂದಿದೆ. ಆದಾದಮೇಲೆ 23ನೇ ತಾರೀಖು ಪ್ರಸ್ತಾಪ ಮಾಡುವ ಸಮಯದಲ್ಲಿ ಎಷ್ಟು ಉತ್ತರವನ್ನು ಕೊಡಬಹುದಿತ್ತೋ ಅಷ್ಟನ್ನು ಕೊಡುವುದರ ಬದಲು ಈ ಸದನವನ್ನು ಉಪಯೋಗಿಸಿಕೊಂಡು ಸರ್ಕಾರದ ಹೊಣೆಯನ್ನು ಹೊತ್ತಿರತಕ್ಕವರು ಈ ಮಾತನ್ನು ಆಡಿರುವುದರಿಂದ ಪ್ರಚೋದನೆ ಜಾಸ್ತಿಯಾಗಿದೆಯೆಂದು ಹೇಳಿದರೆ ತಪ್ಪಾಗಲಾರದು. "ಪ್ಯಾರಲಲ್ ಗವರ್ನಮೆಂಟ್" ಹಾಗೆ ಎನ್ನುವ ಮಾತನ್ನು ಹೇಳಿದ್ದಾರೆ. ಇದನ್ನು ಪತ್ರಿಕೆಗಳಲ್ಲಿ ಇನ್ವೆರ್ಟೆಡ್ ಕಾಮಾದಲ್ಲಿ ಹಾಕಿದ್ದಾರೆ. ಇದರಿಂದ ಎಷ್ಟರಮಟ್ಟಿಗೆ ಪರಿಣಾಮ ಅವರಿಗೆ ಆಗಿರಬಹುದೆಂಬುದನ್ನು ಊಹಿಸಬಹುದಾಗಿದೆ.

"A section of the Sangha led by big landlords was virtually holding the Government servants and the people to ransome. ಈ ಮಾತನ್ನು ಮಾನ್ಯ ಮುಖ್ಯಮಂತ್ರಿಗಳು ಅಂದಿದ್ದಾರೆ. ಸರ್ಕಾರದ ಈ ಒಂದು ಪ್ರಚೋದನೆಯಿಂದ ಆಗಿರತಕ್ಕ ಚಳುವಳಿ ಇದು. ಬಹಳ ಮಟ್ಟಿಗೆ 22ನೇ ತಾರೀಖು ಟೆಲಿಗ್ರಾಂ ಬಂದಿದೆ. 23ನೇ ತಾರೀಖು ಕರೆದಿದ್ದಾರೆ. ಆ ಬಗ್ಗೆ ಮಾತನಾಡತಕ್ಕದ್ದಕ್ಕೆ ಕಾಲ ಇತ್ತು. ಆ ದಿವಸ ಪ್ರಶ್ನೋತ್ತರದ ವೇಳೆ ಮುಗಿದ ಮೇಲೆ ಈ ವಿಚಾರ ಪ್ರಸ್ತಾಪಕ್ಕೆ ಬಂತು. ಈ ಬಗ್ಗೆ ಸ್ವಲ್ಪ ತಡೆದು ಎಷ್ಟು ಬೇಕೋ ಅಷ್ಟನ್ನು ಹೇಳಿ ಆ ನಂತರ ಇವರ ಜೊತೆ ಕುಳಿತು ಮಾತನಾಡಿದ್ದರೆ ಈ ಒಂದು ವಾತಾವರಣಕ್ಕೆ ರಾಜ್ಯವನ್ನು ತೆಗೆದುಕೊಂಡು ಹೋಗುವುದನ್ನು ಕಡಿಮೆ ಮಾಡಬಹುದಾಗಿತ್ತೇನೋ ಎಂದು ನನಗನ್ನಿಸುತ್ತದೆ. ಆದರೆ ಆ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ಭಾವೋದ್ರೇಕದಿಂದ ಹೆಚ್ಚು ಮಾತನಾಡಿದರು. "Replying to Mr. Yadiyurappa, (BJP), who urged the Government to extend the time limit for re-payment of farm loans till March 31st". That was the request. ಇದರ ಜೊತೆಗೆ ಈ ಸದನವನ್ನು ಪೂರ್ಣವಾಗಿ ದುರುಪಯೋಗ ಮಾಡಿಕೊಂಡಿದ್ದಾರೆ. ಅವರು ಏನು ಹೇಳಿದ್ದಾರೆಂದರೆ:

"Mr. Hegde came down heavily on the attitude of Sangha led by Nanjundaswamy and Rudrappa and Sundaresh, and charged that they were adopting delay tactics to thwarn government's sincere efforts to evolve a solution and round table discussion".

ತದನಂತರ,

"He regretted that in the name of farmers, some anti social elements were indulging in arson and looting. Some persons claiming themselves to be Raitha Sangha members were working against the Government and also to hand over liquor shop managements to them."

ಇದು ನಮಗೆ ಗೊತ್ತಿಲ್ಲದೇ ಇರುವ ವಿಚಾರ. ಇನ್ನೂ ಒಂದು ಮಾತು ಮುಂದೆ ಹೋಗಿದ್ದಾರೆ.

"It is not the busineess of the farmers to run liquor shops. A farmer is always a farmer, Mr. Hegde said and charged that some bootloggers and anti-social elements were agitating in the name of farmers."

ಈ ಎಲ್ಲಾ ವಿಚಾರ ನಮಗೆ ಗೊತ್ತಿಲ್ಲ. ಬಹಳ ಮಟ್ಟಿಗೆ ಅವರಿಗೆ ಗೊತ್ತಿರಬಹುದು, ಹೋಮ್ ಇಲಾಖೆಯವರಿಗೆ ಗೊತ್ತಿರಬಹುದು. ಆದರೆ is it wise to use this House to use these words against the farmers and against the proposed agitation, ಇದರ ಬಗ್ಗೆ ಈ ಸದನ ವಿಚಾರ ಮಾಡಬೇಕಾಗುತ್ತದೆ. ಅದರಿಂದ, ಎಷ್ಟೋ ವಿಚಾರಗಳು ನಮಗೆ ಗೊತ್ತಾಗಬಹುದು. ಈ ಸದನದಲ್ಲಿ ಇಂಥ ಮಾತುಗಳನ್ನು ಬಳಸಿದ್ದರಿಂದ ಹೊರಗಡೆ ಒಂದು ಅಚಾತುರ್ಯ ನಡೆಯಲಿಕ್ಕೆ ಕಾರಣವಾಗಿದೆ. ಇದು ಸರ್ಕಾರದ ಮುಖ್ಯಸ್ಥರ ಕರ್ತವ್ಯವೇ, ಬುದ್ಧಿವಂತಿಕೆಯ ಲಕ್ಷಣವೇ ಎಂದು ಕೇಳಬೇಕಾಗುತ್ತದೆ. ಮಾನ್ಯ ಮುಖ್ಯಮಂತ್ರಿಗಳು ಹೇಳಿದ ಮಾತುಗಳು ಪತ್ರಿಕೆಯಲ್ಲಿ ಬಂದಿದೆ. ಮೊದಲೇ ಈ ರೀತಿ ಬೆಂಕಿ ಹತ್ತಿದಂಥ ವಿಚಾರದಲ್ಲಿ ಈ ಮಾತು ಇನ್ನೂ ಹೆಚ್ಚು ಪರಿಣಾಮವನ್ನು ಬೀರಿರಬಹುದು ಎಂದು ನಾನು ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಬೂಟ್‌ಲೆಗ್ಗರ್ ಅಂಡ್ ಆಂಟಿ ಸೋಷಿಯಲ್ ಎಲಿಮೆಂಟ್ಸ್ ಎಂದು ಹೇಳಿದರು. ಸರ್ಕಾರದಲ್ಲಿ ಸ್ವಲ್ಪ ದಿವಸ ಕೆಲಸ ಮಾಡತಕ್ಕ ಅವಕಾಶ ನನಗೂ ದೊರೆತಿತ್ತು. ಸಾಮಾನ್ಯವಾಗಿ ಕಾನ್‌ಫರೆನ್ಸ್ ಅಕ್ರಾಸ್ ದಿ ಟೇಬಲ್ ನಡೆಯತಕ್ಕ ಎಷ್ಟೋ ವಿಷಯಗಳನ್ನು ಅಷ್ಟಕ್ಕೆ ಬಿಡುತ್ತೇವೆ. ಅದನ್ನು ಹೊರಗಡೆ ತಿಳಿಸುವುದಿಲ್ಲ. ಅದು ಸೌಜನ್ಯ ಸದನದಲ್ಲಿ ಹೇಳಿದರೆ ಅದರ ಬಗ್ಗೆ ಕೋರ್ಟಿಗೆ ಹೋಗಲು ಅವಕಾಶವಿಲ್ಲ. ಹೊರಗಡೆ ಹೇಳಿದ್ದರೆ ಅದರ ಬಗ್ಗೆ ಹೌದೋ, ಅಲ್ಲವೋ ಎಂದು ಕೋರ್ಟಿನಲ್ಲಿ ಅಥವಾ ಮತ್ತೆಲ್ಲೋ ಕ್ರಮ ತೆಗೆದುಕೊಳ್ಳಲಿಕ್ಕೆ ಅನುಕೂಲವಾಗುತ್ತಿತ್ತು. ಈ ರೀತಿ ಮಾಡಿದ್ದರಿಂದ ನಾಲ್ಕು ದಿವಸದವರೆಗ ಹೋಗಿದೆ. ಇದರ ಕೊನೆ ಏನಾಗಿದೆ ಎಂದರೆ ಸಾಧಾರಣ ಒಬ್ಬ ವ್ಯಕ್ತಿ ಓಡಾಡಲಿಕ್ಕೆ ಸಾಧ್ಯವಾಗದ ಪರಿಸ್ಥಿತಿ ಬಂದಿದೆ. ತಮ್ಮ ಕರ್ತವ್ಯ ಏನು? ತಾವು ಗುಂಡು ಹಾಕುವುದಿಲ್ಲ, ಲಾಠಿಚಾರ್ಜ್ ಮಾಡಬೇಡಿ ಎಂದು ಹೇಳಿದ್ದೀರಿ. ಅದನ್ನು ಮಾಡಬೇಡಿ ಎನ್ನುವುದೇ ನಮ್ಮ ಉದ್ದೇಶ. ಆದರೆ ಇವೊತ್ತು ಸಾರ್ವಜನಿಕರಿಗೆ ಸಾರಿಗೆ ವ್ಯವಸ್ಥೆ ಮಾಡಬೇಕಾದಂಥ ಹೊಣೆಗಾರಿಕೆ ತಮ್ಮದು ಇದೆ. ಇವೊತ್ತು ಚಳುವಳಿ ನಡೆಯುತ್ತದೆಂದು ಬಸ್ಸುಗಳನ್ನು ನಿಲ್ಲಿಸಲಿಕ್ಕೆ ಆಗುವುದಿಲ್ಲ. ಕಲ್ಲುಗಳನ್ನು ಹೊಡೆಯುತ್ತಾರೆ

ಅದರಿಂದ ಹಾನಿಯಾಗುತ್ತದೆ ಎಂದರೆ ಅದರ ಜವಾಬ್ದಾರಿ ಹೊರಬೇಕಾಗುತ್ತದೆ. ಸರ್ಕಾರದಿಂದ ಬಸ್‌ಗಳನ್ನು ಓಡಾಡಿಸತಕ್ಕ ವ್ಯವಸ್ಥೆ ಮಾಡಬೇಕಾಗುತ್ತದೆ. ಈಗಾಗಲೇ ಒಂದು ಕೋಟಿ ರೂಪಾಯಿ ನಷ್ಟವಾಗಿದೆ ಎಂದು ಹೇಳಿದ್ದೀರಿ. ಸಾರ್ವಜನಿಕರಿಗೆ ಅನುಕೂಲ ಮಾಡಿಕೊಡತಕ್ಕ ಹೊಣೆಗಾರಿಕೆ ತಮ್ಮ ಮೇಲೆ ಇದೆ. ಈ ಸಂದರ್ಭದಲ್ಲಿ ಒಂದು ವಿಚಾರವನ್ನು ನಾನು ಬಹಳ ವಿಷಾದದಿಂದ ಹೇಳುತ್ತಿದ್ದೇನೆ. ನೆನ್ನೆ ತಾನೇ ನಮ್ಮ ಡಿಜಿಪಿ ಅವರನ್ನು ನೋಡುವ ಅವಕಾಶ ಬಂತು. ಹಿರಿಯ ಸದಸ್ಯರಾಗಿದ್ದ ಮಾನ್ಯ ಕೆಂಚಪ್ಪನವರ ಮಗಳು ನೆನ್ನೆ ಕ್ಯಾನ್ಸರ್ ಇನ್‌ಸ್ಟಿಟ್ಯೂಟ್‌ನಲ್ಲಿ ತೀರಿಹೋದರು. ಅಳಿಯ, ಮಗಳು ನಾಗಮಂಗಲದಲ್ಲಿ ಕೆಲಸ ಮಾಡುತ್ತಿದ್ದರು, ಶವ ಸಂಸ್ಕಾರಕ್ಕೆ ಹೋಗಬೇಕಾಯಿತು. ಅವರು ಇಲ್ಲಿ ಇರಲಿಲ್ಲ. ಅವರ ಆಫೀಸಿಗೆ ಹೋಗಿ ಸಹಾಯ ಕೇಳಿದೆ. ಸಾರ್ವಜನಿಕ ಪ್ರೀತಿಯನ್ನು ಗಳಿಸಲಿಕ್ಕೆ ಮಾನ್ಯ ಮುಖ್ಯಮಂತ್ರಿಗಳು ಕೆಲವು ವಿಚಾರಗಳನ್ನು ಹೇಳಿದ್ದಾರೆ. ತಾವು ಅವರಿಗೆ ಒಂದು ಕಡೆ ಏನೂ ಮಾಡುವುದಿಲ್ಲ ಎಂದು ಹೇಳಿದ ಮೇಲೆ ಸಾರ್ವಜನಿಕ ಸಂಚಾರ ವ್ಯವಸ್ಥೆಯ ಬಗ್ಗೆ ಮತ್ತು ಸಾರ್ವಜನಿಕರಿಗೆ ಯಾವುದೇ ರೀತಿಯಲ್ಲಿ ಅನಾನುಕೂಲವಾಗದ ರೀತಿಯಲ್ಲಿ ನೋಡಿಕೊಳ್ಳತಕ್ಕದ್ದು ತಮ್ಮ ಜವಾಬ್ದಾರಿ ಇದೆ. ಆ ಕರ್ತವ್ಯವನ್ನು ತಾವು ನಿರ್ವಹಿಸಲೇಬೇಕಾಗುತ್ತದೆ. ಅದರ ಬಗ್ಗೆ ಯಾವ ರೀತಿ ಮಾಡುತ್ತಿರೆಂಬುದು ತಮಗೆ ಸಂಬಂಧಪಟ್ಟ ವಿಚಾರ.

ಶ್ರೀ ಕೆ.ಜಿ. ಮಹೇಶ್ವರಪ್ಪ:- ಹೇಗೆ ಮಾಡಬೇಕೆಂದು ಸಲಹೆ ಕೊಡಿ.

ಶ್ರೀ ಕೆ.ಎಚ್. ರಂಗನಾಥ್:- ತಾವು ಮಾತನಾಡುವಾಗ ಸಲಹೆ ಕೊಡಿ. ನನಗೆ ತಿಳಿದದ್ದು ನಾನು ಹೇಳುತ್ತೇನೆ. ಇನ್ನು ಬಳ್ಳಾರಿ ಜಿಲ್ಲೆಯಲ್ಲಿ ರೈತರ ದಾಂಧಲೆಯಾಗಿ 25 ಜನರಿಗೆ ಗಾಯ ಆಗಿದೆ. ಈ ವಿಚಾರ ಇವೊತ್ತಿನ ಪತ್ರಿಕೆಯಲ್ಲಿ ಬಂದಿದೆ. ಅದರ ಪದಾಧಿಕಾರಿಗಳ ದಸ್ತಗಿರಿಯಾಗಿದೆ. ಇನ್ನು ಚಿಕ್ಕಮಗಳೂರು ಜಿಲ್ಲೆಯಲ್ಲಿ ನಡೆದಿರತಕ್ಕದ್ದು ಪತ್ರಿಕೆಯಲ್ಲಿ ವರದಿಯಾಗಿದೆ. ಜನತಾ ಪಕ್ಷದ ಸುಮಾರು ಒಂದು ಸಾವಿರ ಜನ ಕಾರ್ಯಕರ್ತರು ಅವರನ್ನು ಬಿಟ್ಟುಬಿಡಿ ಎಂದು ಪೊಲೀಸ್ ಸ್ಟೇಷನ್‌ಗೆ ಹೋಗಿ ಹೇಳಿರುವುದು ಇದೆ. ಇದನ್ನು ನೋಡಿದರೆ ಏನು ಅನ್ನಿಸುತ್ತದೆ ಅಂದರೆ ಸಂಚು ಇರಬಹುದು ಎಂದು ಕಾಣುತ್ತದೆ. ಇದಕ್ಕೆ ಪ್ರೇರಕ ಶಕ್ತಿ ಸರ್ಕಾರವೇ ಆಗಿರಬೇಕೋ ಏನೋ ಎಂದು ಸಾರ್ವಜನಿಕರ ಮನಸ್ಸಿಗೆ ಮೇಲೆ ಆಗತಕ್ಕದ್ದು ಸ್ವಾಭಾವಿಕ. ಇವೊತ್ತು ಮಾನ್ಯ ಮುಖ್ಯಮಂತ್ರಿಗಳು ಸಭೆಯಲ್ಲಿ ಕೈ ಮುಗಿದು ಕೇಳಿಕೊಳ್ಳಬಹುದು. ಆದರೆ ಯಾವ ರೀತಿ ವ್ಯವಸ್ಥೆ ಮಾಡಲಿಕ್ಕೆ ಸಾಧ್ಯವಾಗುತ್ತದೆ ಎಂಬುದು ಮುಖ್ಯವಾದ ವಿಷಯ. ಸರ್ಕಾರದ ಹೊಣೆ ಹೊತ್ತಿರತಕ್ಕಂಥ ತಾವು ಇದರ ಬಗ್ಗೆ ವಿಚಾರ ಮಾಡಬೇಕಾಗುತ್ತದೆ. ಸ್ವಾಮಿ, ಕರ್ನಾಟಕದಲ್ಲಿ ಇಂತಹ ಪರಿಸ್ಥಿತಿ ಎಂದೂ ಆಗಿರಲಿಲ್ಲ. ಒಂದು ನೀತಿಯನ್ನು ಮಾತ್ರ ಪ್ರತಿಪಾದನೆ ಮಾಡಲಿಕ್ಕೆ ಹೊರಟಿದ್ದಾರೆ. ಗುಂಡು ಹೊಡೆಯಲಿಲ್ಲ. ಲಾಠಿಚಾರ್ಜ್ ಮಾಡಲಿಲ್ಲ ಎಂದು ಹೇಳುತ್ತಾರೆ. ಆ ರೀತಿ ಹೇಳಿದ ಮೇಲೆ ತಾವು ಅಧಿಕಾರಕ್ಕೆ ಬಂದ ಮೇಲೆ ಎಲ್ಲಿಯೂ ಗುಂಡು ಹಾಕಿ, ಲಾಠಿ ಚಾರ್ಜ್ ಮಾಡಿಲ್ಲವೇ? ಸರ್ಕಾರ ಇವೊತ್ತು ಏನು ಕೆಲಸ ಮಾಡಿದೆ ಎಂದು ನೋಡುವುದಾದರೆ,

ಇವೊತ್ತು ಸರ್ಕಾರ ಇಲ್ಲವೇನೋ ಎನ್ನುವ ಪರಿಸ್ಥಿತಿಗೆ ಬಂದು ನಿಂತಿದ್ದೇವೆ. ಈ ಮನೆಯ ಸದಸ್ಯರಾದಂಥ ಮಾನ್ಯ ಹುಚ್ಚಮಾಸ್ತಿಗೌಡರಿಗೆ ಪೊಲೀಸರ ಎದುರಿನಲ್ಲಿಯೇ ಕೊಲೆ ಪ್ರಯತ್ನ ನಡೆದಾಗ..............

(ಗೊಂದಲ)

ಉಪಾಧ್ಯಕ್ಷರು:- ತಾವು ಮುಗಿಸಿ.

ಶ್ರೀ ಕೆ.ಎಚ್. ರಂಗನಾಥ್:- ಪೊಲೀಸರು ನೋಡಿಕೊಂಡಿರತಕ್ಕ ಪರಿಸ್ಥಿತಿ ಬಂದಿರುವಾಗ ಚಿಕ್ಕಮಗಳೂರಿನಲ್ಲಿ ಒಂದು ಸಾವಿರ ಜನರು ಹೋಗಿ ಅವರನ್ನು ಬಿಟ್ಟು ಬಿಡಿ ಎಂದು ಹೇಳಿದರೆ ಅರ್ಥ ಏನು? ಪತ್ರಿಕಾ ವರದಿಯ ಪ್ರಕಾರ ಹೇಳಿದೆ. ಇವೊತ್ತು ಜನರನ್ನು ಸೆರೆ ತೆಗೆದುಕೊಂಡ ಮೇಲೆ ಕಾನೂನು ಪ್ರಕಾರ ಒಬ್ಬ ಪ್ರಿಸನರ್‌ಗೆ ಏನು ರಕ್ಷಣೆ ಕೊಡಬೇಕು, ಏನು ವ್ಯವಸ್ಥೆ ಮಾಡಬೇಕು. ಅದನ್ನು ಮಾಡತಕ್ಕದ್ದು ಸರ್ಕಾರದ ಕರ್ತವ್ಯ. ಅದು ಇಲ್ಲದೇ ಇದ್ದರೆ ಬಹಳ ಕಷ್ಟವಾಗುತ್ತದೆ. ಇವೊತ್ತು ಏನಾಗಿದೆ, ಜನರನ್ನು ಅರೆಸ್ಟ್ ಮಾಡಿ ಅವರಿಗೆ ಸರಿಯಾದಂತಹ ವ್ಯವಸ್ಥೆ ಮಾಡತಕ್ಕ ಕೆಲಸ ಆಗಿಲ್ಲ. ಸಾರ್ವಜನಿಕರಿಗೆ ತೊಂದರೆಯನ್ನು ಕೊಡತಕ್ಕ ಕೆಲಸ ನಡೆದಿದೆ. ಇದು ಕೊನೆಯಾಗತಕ್ಕ ಪರಿಸ್ಥಿತಿ ಕಂಡುಬರುವುದಿಲ್ಲ. ಇದನ್ನು ಮುಂದುವರಿಸುವುದೇ ಸರ್ಕಾರದ ವರ್ತನೆಯಾಗಿದೆ. ಸರ್ಕಾರ ಉದ್ದೇಶ ಪೂರ್ವಕವಾಗಿ ರಾಜ್ಯದಲ್ಲಿ ಈ ರೀತಿ ಮಾಡುತ್ತಿದ್ದಾರೆ. ರಾಜ್ಯದಲ್ಲಿ ರೈತರು ಮತ್ತು ರೈತ ಕಾರ್ಮಿಕರಿಗೆ ಭೇದ ಮಾಡತಕ್ಕದ್ದು ನಡೆಯುತ್ತಿದೆ. ಈ ರೀತಿ ಮಾಡುವುದರಿಂದ ನಿಮ್ಮಲ್ಲಿ ಲಾ ಅಂಡ್ ಆರ್ಡರ್ ಸಿಚ್ಯುಯೆಷನ್ ಹುಟ್ಟಿ ಹಾಕತಕ್ಕ ಅಶಾಂತಿಯನ್ನು ಹುಟ್ಟುಹಾಕತಕ್ಕ ಉದ್ದೇಶದಿಂದ ಸರ್ಕಾರ ಬುದ್ಧಿ ಪೂರ್ವಕವಾಗಿ ಮಾಡುತ್ತಾ ಇರುವುದರಿಂದ, ಇದರ ಬಗ್ಗೆ ವ್ಯಾಪಕವಾಗಿ ಚರ್ಚೆ ಆಗಬೇಕಾಗುತ್ತದೆ. ಇಲ್ಲದೆ ಹೋದರೆ ನಾವು ಎಲ್ಲಿಗೆ ಬಂದು ನಿಲ್ಲುತ್ತೇವೆಂದು ಹೇಳಲಿಕ್ಕೆ ಸಾಧ್ಯವಾಗುವುದಿಲ್ಲ ಎಂದು ಹೇಳಿ, ಅಧ್ಯಕ್ಷರಿಗೆ ವಂದಿಸಿ, ನನ್ನ ಮಾತನ್ನು ಮುಗಿಸುತ್ತೇನೆ. ಹಾಗೆಯೇ ಈ ವಿಚಾರದ ಬಗ್ಗೆ ಮಾನ್ಯ ಸದಸ್ಯರಾದ ಕೃಷ್ಣನ್‌ರವರು ನೋಟೀಸ್ ಕೊಟ್ಟಿದ್ದಾರೆ. ಇದೇ ಒಂದು ನಿಲುವಳಿ ಸೂಚನೆಯನ್ನು ಮಾನ್ಯ ಬಂಗಾರಪ್ಪನವರೂ ಸಹ ಕೊಟ್ಟಿದ್ದಾರೆ. ಅವರು ಈ ಬಗ್ಗೆ ಪ್ರಸ್ತಾಪ ಮಾಡುವರೆಂದು ನಾನು ತಿಳಿದುಕೊಂಡಿದ್ದೇನೆ. ಸ್ವಾಮಿ, ಇವತ್ತು ತಾವು ಪತ್ರಿಕೆಯನ್ನು ಓದಿದ್ದರೆ ಗೊತ್ತಾಗುತ್ತದೆ. ಇವತ್ತಿನ ಪತ್ರಿಕೆಯಲ್ಲಿ "ಹಸಿರನ್ನು ಸುಟ್ಟು ಕೆಂಪು ಚೆಲ್ಲಿದ ಪೊಲೀಸರು" ಎಂದು ದಪ್ಪ ಅಕ್ಷರಗಳಲ್ಲಿ ವರದಿಯಾಗಿದೆ. ಮಾನ್ಯ ಸಚಿವರು ಉತ್ತರ ಕೊಡುವಾಗ ಇದರ ಬಗ್ಗೆ ಹೇಳುತ್ತಾರೆಂದು ಅಂದುಕೊಂಡಿದ್ದೇನೆ.

ಶ್ರೀ ರಾಮಕೃಷ್ಣ ಹೆಗಡೆ:- ಮೆಜಿಸ್ಟೀರಿಯಲ್ ಎನ್‌ಕ್ವೈರಿಗೆ......

ಶ್ರೀ ಕೆ.ಎಚ್. ರಂಗನಾಥ್:- ಮೆಜಿಸ್ಟೀರಿಯಲ್ ಎನ್‌ಕ್ವೈರಿ ಮಾಡುವುದು ಮುಖ್ಯ ಪ್ರಶ್ನೆಯಲ್ಲ. ಕೊಲೆ ಆಗುತ್ತಿದ್ದುದನ್ನು ನೋಡಿಕೊಮಡು ನಿಂತುಕೊಳ್ಳುವ ಪರಿಸ್ಥಿತಿ ಬಂದಿದೆಯೆಂದು ಹೇಳುತ್ತಿದ್ದೇನೆ. ಪೊಲೀಸ್ ಇಲಾಖೆಯಲ್ಲಿ ಕೂಡ ನಾವು ಏನು

ಮಾಡಬೇಕೋ, ಏನು ಮಾಡಬಾರದೋ ಎಂದು ಹಿಂದುಮುಂದು ನೋಡಬೇಕಾದ ಪರಿಸ್ಥಿತಿ ಬಂದಿದೆ. ಪೊಲೀಸ್ ಸಿಬ್ಬಂದಿಯಲ್ಲಿ ಇವತ್ತು ಎರಡು ಭಾಗವಾಗಿದೆ. ಈ ವಿಚಾರವನ್ನು ನಾನು ಈ ಹಿಂದೆಯೇ ಪ್ರಸ್ತಾಪ ಮಾಡಬೇಕೆಂದು ಇಚ್ಛೆಪಟ್ಟಿದ್ದೆ. ನಾನು ಏತಕ್ಕೆ ಈ ಮಾತನ್ನು ಹೇಳುತ್ತಿದ್ದೇನೆಂದರೆ, ಹಿಂದೆ ರಾಜಾಜಿನಗರದಲ್ಲಿ ಆಟೋರಿಕ್ಷಾ ಗಲಾಟೆ ಆದಾಗ ಮಾನ್ಯ ಮುಖ್ಯ ಮಂತ್ರಿಗಳು ಅಲ್ಲಿಗೆ ಹೋಗಿದ್ದರು. ಆ ಸ್ಥಳಕ್ಕೆ ಮಾನ್ಯ ಮುಖ್ಯಮಂತ್ರಿಗಳೇ ಹೋಗಿ ಒಬ್ಬ ಸಬ್‌ಇನ್‌ಸ್ಪೆಕ್ಟರ್‌ನ್ನು ಸಸ್ಪೆಂಡ್ ಮಾಡಿದರು. ಕೇವಲ ಒಂದು ಗಲಾಟೆ ಆಯಿತೆಂದರೆ ಮಾನ್ಯ ಮುಖ್ಯ ಮಂತ್ರಿಗಳೇ ಅಲ್ಲಿಗೆ ಹೋಗಬೇಕೇ? ಆ ಕೆಲಸವನ್ನು ಇಲ್ಲೇ ಮಾಡುವುದಕ್ಕಾಗುವುದಿಲ್ಲವೇ? ಇದು ಹೇಗಿದೆ ಎಂದರೆ ಸಾರು ಆಗಿದೆಯೋ ಎಂಬುದನ್ನು ಸೌಟಿನಲ್ಲಿ ನೋಡುವ ಬದಲು ಕೈಯನ್ನು ಆ ಸಾರಿನೊಳಕ್ಕೆ ಇಟ್ಟಂತಾಗಿದೆ. ತಮಗೆ ಎಲ್ಲ ಅಧಿಕಾರವೂ ಇದೆ. ಇಲ್ಲೆ ಕುಳಿತು ಯಾವ ಕೆಲಸವನ್ನು ಬೇಕಾದರೂ ಮಾಡಬಹುದು. ಆದರೆ ಸಾರ್ವಜನಿಕರಿಂದ ಭೇಷ್ ಎನಿಸಿಕೊಳ್ಳುವುದಕ್ಕೋಸ್ಕರ ಈ ರೀತಿ ಅಧಿಕಾರಿ ವರ್ಗವನ್ನು ಈ ಮಟ್ಟಕ್ಕೆ ತರುವುದಾದರೆ ಅಧಿಕಾರಿಗಳು ಏನೂ ಮಾಡದೇ ಇರುವಂಥ ಪರಿಸ್ಥಿತಿ ಬರುತ್ತದೆ. ಇವತ್ತು ರಾಜ್ಯದಲ್ಲಿ ಸರ್ಕಾರ ಇದೆಯೇ? ಅಧಿಕಾರಿ ವರ್ಗ ಇದೆಯೇ? ಎನ್ನುವ ಪರಿಸ್ಥಿತಿ ಬಂದಿದೆ. ಇವತ್ತಿನ ವಾತಾವರಣದಲ್ಲಿ ಹೇಳುವುದಾದರೆ ಕಳೆದ ಸಾರಿ ಮಾನ್ಯ ಮಂತ್ರಿಗಳು ಹೇಳಿದ ವಿಚಾರವನ್ನು ಪತ್ರಿಕೆಗಳು ಅಗ್ರಲೇಖನಗಳನ್ನು ಹಾಕಿದರು. ಇವತ್ತು ಸರ್ಕಾರವೇ ಒಂದು ಕನ್‌ಫ್ರಂಟೇಷನ್‌ಗೆ ಅವಕಾಶವನ್ನು ಕೊಡುತ್ತಿದೆ ಎನ್ನುವ ಭಾವನೆ ಜನರಲ್ಲಿ ಬರುತ್ತಿದೆ. ಎಲ್ಲ ಘಟನೆಗಳಿಗೂ ಸರ್ಕಾರವೇ ಕಾರಣವೆಂದು ಹೇಳಬೇಕಾಗಿದೆ. ಈಗಲೂ ಕೂಡ ಕಾಲಾವಕಾಶ ಮೀರಿಲ್ಲ. ಮಾನ್ಯ ಮುಖ್ಯಮಂತ್ರಿಗಳು ಇವತ್ತಿನ ಸಂದರ್ಭವನ್ನು ಚೆನ್ನಾಗಿ ಪರಿಶೀಲಿಸಿ ತಮ್ಮ ನಿಲುವನ್ನು ಬದಲಾವಣೆ ಮಾಡಿಕೊಳ್ಳಬೇಕು. ಮುಂದೆ ಆಗುವಂಥ ಈ ಪರಿಸ್ಥಿತಿಯನ್ನು ಈಗಲೇ ಸಭೆಯ ಮುಖಾಂತರ ಹೇಳುವುದು ಸರಿಯಲ್ಲ. ಇವತ್ತಿನ ನಿಲುವನ್ನು ಸರ್ಕಾರ ಏನು ತಳೆದಿದೆ ಇದು ಸರ್ಕಾರಕ್ಕೆ ಒಳ್ಳೆಯದಲ್ಲ. ಇದಕ್ಕೆ ವಿರೋಧ ಪಕ್ಷದವರು ಅವಕಾಶವನ್ನು ಕೊಡುವುದಿಲ್ಲವೆಂದು ಹೇಳಿ ಇಷ್ಟು ಮಾತನಾಡಲು ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

*****

# ಸಹಕಾರಿ ಸಂಘಗಳ ತಿದ್ದುಪಡಿ ಮಸೂದೆ-1976

21 ಫೆಬ್ರವರಿ 1976

**Sri K.H. Ranganath** (Minister for Co-Operation): I beg to move: "That the Karnataka Co-operative Societies (Amendment) Bill. 1976, be taken into consideration."

**Madam speaker:** Motion moved: "That the Karnataka Co-operative Societies (Amendment) Bill, 1976, be taken into consideration"

ಶ್ರೀ ಕೆ.ಎಚ್. ರಂಗನಾಥ್:- ಸನ್ಮಾನ್ಯ ಅಧ್ಯಕ್ಷರೇ, ಜನವರಿ 20ನೇ ತಾರೀಖಿನಿಂದ ಜಾರಿಗೆ ಬಂದಿರತಕ್ಕ ಸುಗ್ರೀವಾಜ್ಞೆಯನ್ನು ರೀಪ್ಲೇಸ್ ಮಾಡಲಿಕ್ಕಾಗಿ ಈ ಮಸೂದೆಯನ್ನು ತರಲಾಗಿದೆ. ಇದರಿಂದ ಪ್ರಮುಖವಾಗಿ ಸೆಕ್ಷನ್ 14ಎ, 16, 29, 26 ಹಾಗೂ 29ಎ ಕಾಲಂಗಳಿಗೆ ತಿದ್ದುಪಡಿ ಸೂಚಿಸಲಾಗಿದೆ. ಸರ್ಕಾರದ ನೀತಿ ಏನು ಇದೆ ಎಂದರೆ ಹಾಲಿ ಇರತಕ್ಕ ಕಾನೂನಿನಲ್ಲಿ ವಿಶೇಷವಾಗಿ ಸಾಲದ ವ್ಯವಸ್ಥೆಯನ್ನು ಮಾಡಿರತಕ್ಕಂಥಾದ್ದು; ಈಗಿನ ಪರಿಸ್ಥಿತಿಯಲ್ಲಿ ವ್ಯವಸಾಯಗಾರರು ಮತ್ತಿತರೇ ದುರ್ಬಲ ವರ್ಗದವರಿಗೂ ಕೂಡ ಸಹಕಾರ ಸಂಘಗಳಲ್ಲಿ ಸದಸ್ಯತನ ಸಿಕ್ಕಿ ಅವರಿಗೆ ಅನುಕೂಲವಾಗುವ ದೃಷ್ಟಿಯಿಂದ ಸೆಕ್ಷನ್ 16ಕ್ಕೆ ತಿದ್ದುಪಡಿ ತರಲಾಗಿದೆ. ಹಾಲಿ ಇರತಕ್ಕ ಕಾನೂನಿನಲ್ಲಿ ಯಾರಾದರೂ ಸದಸ್ಯತನ ಅಪೇಕ್ಷೆ ಮಾಡಿ ಸೊಸೈಟಿಗೆ ಅರ್ಜಿ ಹಾಕಿದರೆ ಕೊಡಬಹುದು, ಇಲ್ಲವೇ ನಿರಾಕರಿಸಬಹುದು. ಈ ಸದಸ್ಯತನಕ್ಕೆ ಅರ್ಜಿ ಹಾಕಿದವನಿಗೆ ಮೂರು ತಿಂಗಳೊಳಗಾಗಿ ತಿಳಿಸತಕ್ಕುದು; ಮೂರು ತಿಂಗಳೊಳಗೆ ತಿಳಿಸದೇ ಹೋದರೆ deemed to have been refused ಎಂದು ಈಗ ಇರತಕ್ಕುದು.

ಈಗ ತಂದಿರತಕ್ಕ ತಿದ್ದುಪಡಿಯಲ್ಲಿ ಆ ಕಾನೂನನ್ನು ಅಮೂಲಾಗ್ರವಾಗಿ ಬದಲಾವಣೆ ಮಾಡಲಾಗಿದೆ. ಈಗ ಯಾರು ಷೇರು ಅಪೇಕ್ಷೆ ಮಾಡಿ ಸಹಕಾರ ಸಂಘಗಳಿಗೆ ಅರ್ಜಿ ಹಾಕಿದರೂ ತತ್‌ಕ್ಷಣ ಅಸೋಸಿಯೇಟೆಡ್ ಮೆಂಬರ್ ಆಗಿ ಪರಿಗಣಿಸಲಾಗುವುದು. ಷೇರು ಒಪ್ಪುವಾಗ ತಕರಾರು ಇದ್ದರೆ, ಸೊಸೈಟಿಯ ರಿಜಿಸ್ಟ್ರಾರ್‌ರವರಿಗೆ 15 ದಿವಸದಲ್ಲಿ ಅರ್ಜಿ ಹಾಕಿಕೊಳ್ಳತಕ್ಕುದು; ರಿಜಿಸ್ಟ್ರಾರ್‌ರವರು ಅಲ್ಲಿರತಕ್ಕ ಅಂಶಗಳನ್ನು ಪ್ರಮುಖವಾಗಿ ಗಮನಿಸಿ ಸೆಕ್ಷನ್ 17ರ ಪ್ರಕಾರ ನಿರಾಕರಿಸಬಹುದು ಇಲ್ಲದೆಹೋದರೆ ನಿರಾಕರಿಸಲಿಕ್ಕೆ ಸಾಧ್ಯವಿಲ್ಲ ಎಂದು ಹೇಳಬಹುದು. ರಿಜಿಸ್ಟ್ರಾರ್‌ರವರು ತೀರ್ಮಾನ ಕೊಡುವ ದಿವಸದಿಂದ he is

demed, have been Share a holder ಇವತ್ತಿನ ದಿವಸ ಹಳ್ಳಿಗಾಡಿನಲ್ಲಿರುವ ಗ್ರಾಮಸೇವಾ ಸಹಕಾರ ಸಂಘಗಳನ್ನು ಅವಲಂಬಿಸಿರತಕ್ಕ ಸಣ್ಣ ಹಿಡುವಳಿದಾರರು ಮತ್ತು ದುರ್ಬಲವರ್ಗದವರಿಗೆ ಈ ತಿದ್ದುಪಡಿಯಿಂದ ಹೆಚ್ಚಿನ ಅನುಕೂಲ ಪಡೆಯುವುದಕ್ಕೆ ಸಾಧ್ಯವಾಗುತ್ತದೆ. ಯಾವಯಾವ ಸೊಸೈಟಿಗಳಿಗೆ ಇಂಥ ಒಂದು ಸದಸ್ಯತನ ಕೊಡಬೇಕೆನ್ನುವುದನ್ನೂ ಕೂಡ ಸರ್ಕಾರ ನಿಗದಿ ಮಾಡುತ್ತದೆ. ಕೆಲವೊಂದು ಸಹಕಾರ ಸಂಘಗಳಿಗೆ ರಿಸ್ಟ್ರಿಕ್ಷನ್ ಇರಬೇಕು ಎನ್ನುವ ದೃಷ್ಟಿಯಿಂದ 16ನೇ ಸೆಕ್ಷನ್‌ಗೆ ತಿದ್ದುಪಡಿ ತರಲಾಗಿದೆ.

ಮಾನ್ಯ ಸದಸ್ಯರುಗಳು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾ ಎಷ್ಟೋ ಸಹಕಾರ ಸಂಘಗಳು ದುರ್ಬಲವಾಗಿವೆ. ಮತ್ತೆ ಕೆಲವು ಸಹಕಾರ ಸಂಘಗಳು they are not viable ಎಂದು ಟೀಕೆ ಮಾಡಿದ್ದಾರೆ. ಸಿರಿಕಲ್ಚರ್ ಕೋಆಪರೇಟಿವ್ ಸೊಸೈಟಿ, ಫಾರಂ ಸರ್ವೀಸ್ ಕೋಆಪರೇಟಿವ್ ಸೋಸೈಟಿಗಳಲ್ಲಿ 10 ಸಾವಿರ ಜನ ಸದಸ್ಯರು ಇರಬಹುದು. ಅಮಾಲ್ಗಮೇಟ್ ಮಾಡುವುದಕ್ಕೆ, ಮತ್ತು ಬೈಫರ್‌ಕೇಟ್ ಮಾಡುವುದಕ್ಕೆ ಪ್ರಯತ್ನ ಮಾಡಿದ್ದೇವೆ; ಈ ದೃಷ್ಟಿಯಿಂದ 14ಎ ಗೆ ತಿದ್ದುಪಡಿ ತರಲಾಗಿದೆ. ಸೆಕ್ಷನ್ 21ಕ್ಕೆ ಚಿಕ್ಕ ತಿದ್ದುಪಡಿ ತರಲಾಗಿದೆ. ಒಬ್ಬ ಸದಸ್ಯ ತಾನೇ ಹೋಗಿ ಓಟು ಮಾಡಬೇಕು. ಪ್ರಾಕ್ಸಿ ಮುಖಾಂತರ ಓಟು ಮಾಡಬಾರದು. ಜನರಲ್ ಬಾಡಿಯಲ್ಲಿ ರೆಸ್ಯೂಲ್ಯೂಷನ್ ಮಾಡಿದರೆ ಅದು ನಮ್ಮನ್ನು ಬಾಧಿಸುತ್ತೆ. ಕೆಲವು ಸಹಕಾರ ಸಂಘಗಳಲ್ಲಿ ಮಿಸ್‌ಯೂಸ್ ಆಗಿರುವುದು ಕಂಡು ಬಂದಿದೆ. ಇದನ್ನು ಸರಿಪಡಿಸುವ ದೃಷ್ಟಿಯಿಂದ 26ರಲ್ಲಿ ಕಾನೂನು, ನಿಯಮ ಬಾಹಿರ ರೆಸೊಲ್ಯೂಷನ್ ಮಾಡಬಾರದು ಎನ್ನುವ ವಿಧಿನಿಯಮವನ್ನು ಹಾಕಲಾಗಿದೆ. ಮತ್ತೆ ಕೆಲವು ಸಹಕಾರ ಸಂಘಗಳ ವ್ಯಾಪ್ತಿ ಕೂಡಾ ದೊಡ್ಡದಾಗಿದ್ದು, ಇಡೀ ರಾಜ್ಯಕ್ಕೆ ಅದರ ವ್ಯಾಪ್ತಿಯಿರುತ್ತದೆ; ಸದಸ್ಯತನ ಕೂಡ ಜಾಸ್ತಿಯಿರುತ್ತದೆ. ಎಲ್ಲಾ ಸದಸ್ಯರೂ ಕೂಡ ಸರ್ವ ಸದಸ್ಯರ ಸಭೆಗೆ ಬರುವುದೂ ಕಷ್ಟ ಮತ್ತು ಹಣವೂ ಕೂಡ ವ್ಯಯವಾಗುತ್ತದೆ. ಈ ದೃಷ್ಟಿಯಿಂದ ರೆಪ್ರೆಸೆಂಟಿಟೀವಸ್ ಜನರಲ್ ಬಾಡಿ...............

ಶ್ರೀ ಕಾಗೋಡು ತಿಮ್ಮಪ್ಪ:- ಯಾವ ನೇಚರ್ ಆಫ್ ಸೊಸೈಟಿಗೆ?

ಶ್ರೀ ಕೆ.ಎಚ್. ರಂಗನಾಥ್:- ಸ್ಟೇಟ್ ಇಂಡಸ್ಟ್ರೀಯಲ್ ಬ್ಯಾಂಕ್ ಇದೆ. ಅದರಲ್ಲಿ 2 ಸಾವಿರ ಜನ ಸದಸ್ಯರು ಇದ್ದಾರೆ; ಹಣ ಕೂಡ ಹೆಚ್ಚಾಗಿದೆ; ಅಂಥ ಸೊಸೈಟಿಗಳನ್ನು ವ್ಯವಸ್ಥೆಯಾಗಿಡತಕ್ಕುದು ಕೂಡ ಕಷ್ಟ, ಆ ದೃಷ್ಟಿಯಿಂದ ರೆಪ್ರಸೆಂಟಿಟೀವ್ ಜನರಲ್ ಬಾಡಿ ಮಾಡತಕ್ಕಂಥಾದನ್ನು ವಿಚಾರ ಮಾಡಿ, ಸಂಖ್ಯೆ ಎಷ್ಟಿರಬೇಕು; ಏರಿಯಾ ಎಷ್ಟಿರಬೇಕು ಎನ್ನುವುದನ್ನು ಸರ್ಕಾರವೇ ನಿಗದಿ ಮಾಡತಕ್ಕುದು; ರೆಪ್ರೆಸೆಂಟಿಟೀವ್ ಜನರಲ್ ಬಾಡಿ ಬರುವಂತಹ ಕಡೆ ಚುನಾವಣೆ ನಡೆಯುವುದಕ್ಕೆ ಅವಕಾಶ ಮಾಡಿಕೊಡತಕ್ಕದ್ದು; ಬೈಲಾದಲ್ಲಿ ಇರತಕ್ಕ ಅಧಿಕಾರವನ್ನು ತೆಗೆದುಕೊಳ್ಳುವುದಾಗಲೀ, ಡೈರೆಕ್ಟಾಗಿ ಬದಲಾವಣೆ ಮಾಡುವುದಕ್ಕಾಗಲೀ ರೆಪ್ರೆಸೆಂಟಿಟೀವ್ಸ್‌ಗೆ ಅಧಿಕಾರ ಇರುವುದಿಲ್ಲ. ಅದನ್ನು ಇದರಲ್ಲಿ ಮಾಡಲಾಗಿದೆ.

ಶ್ರೀ ಕಾಗೋಡು ತಿಮ್ಮಪ್ಪ- ರೆಪ್ರೆಸೆಂಟಿಟೀವ್ ಜನರಲ್ ಬಾಡಿ ಮಾಡತಕ್ಕಂಥಾದ್ದು ರಾಜ್ಯಮಟ್ಟದ ಕೋಆಪರೇಟಿವ್ ಸೊಸೈಟಿಗಳಿಗೋ, ಜಿಲ್ಲಾಮಟ್ಟದ ಸೊಸೈಟಿಗಳಿಗೋ?

ಶ್ರೀ ಕೆ.ಎಚ್. ರಂಗನಾಥ್:- ಪ್ರಿಸ್‌ಕ್ರೈಬ್ ಮಾಡುವ ಅಧಿಕಾರವನ್ನು ಸರ್ಕಾರ ಇಟ್ಟುಕೊಂಡಿದೆ; ಸಾಮಾನ್ಯವಾಗಿ ರಾಜ್ಯ ಮಟ್ಟದ ಸಹಕಾರ ಸಂಘಗಳಿಗೆ ಮಾಡಬೇಕಾಗಿ ಬರುತ್ತದೆ. ಎಲ್ಲಿ ಸದಸ್ಯರ ಸಂಖ್ಯೆ ಜಾಸ್ತಿಯಿರುತ್ತದೆ, ಅಂಥ ಕಡೆ ಮಾಡಬೇಕಾಗುತ್ತದೆ. ಅಧ್ಯಕ್ಷರೇ ಸೆಕ್ಷನ್ 29ಎ ಪ್ರಕಾರ ಹಾಲಿ ಇರತಕ್ಕ ಕಾನೂನಿನಲ್ಲಿ ಯಾರಿಗೆ ಅಧಿಕಾರ ವಹಿಸಿಕೊಡಬೇಕೆಂಬ ಬಗ್ಗೆ ಜಿಜ್ಞಾಸೆ ಇದೆ. ಇಂಥ ವಿಚಾರಗಳಲ್ಲಿ ಕೋರ್ಟಿಗೆ ಹೋಗತಕ್ಕಂಥ ಪರಿಸ್ಥಿತಿ ಇದೆ. ಬೋರ್ಡ್ ಆಫ್ ಡೈರೆಕ್ಟರ್ಸ್ ಮೂರನೇ ಒಂದು ಭಾಗ ಇದ್ದು ಚುನಾವಣೆ ಆದರೆ, ಬೈಲಾ ಪ್ರಕಾರ ಕೋರಂ ಇರುತ್ತದೆ; It has been duly constituted.

ಮತ್ತೆ ಕೆಲವು ಸಾರಿ ಏನಾಗುತ್ತದೆ ಎಂದರೆ ಅವರಿಗೆ ಬೇಕಾದವರು ಅಲ್ಲಿಗೆ ಬಾರದೇ ಹೋದರೆ ಆ ಅಧ್ಯಕ್ಷರು ಮತ್ತು ಉಪಾಧ್ಯಕ್ಷರೇ ಆ ಆಫೀಸ್ ಬೇರರ್ಸ್‌ನ್ನು ಮುಂದೂಡಿಸಿಕೊಂಡು ಹೋಗುವ ಪರಿಸ್ಥಿತಿ ಹಳೇ ಕಾನೂನಿನಲ್ಲಿ ಇದೆ. ಅದನ್ನು ಕೂಡ ತೆಗೆಯಬೇಕು ಎಂದು ಇದರಲ್ಲಿ ಮಾಡಿದೆ. ಸರ್ವ ಸದಸ್ಯರ ಸಭೆ ಆದ ಮೇಲೆ 15 ದಿನದೊಳಗೆ ಪದಾಧಿಕಾರಿಗಳ ಚುನಾವಣೆ ಮೀಟಿಂಗ್ ಕರೆಯಬೇಕು. ಮತ್ತು ರಿಜಿಸ್ಟ್ರಾರ್ ಅದರ ಒಂದು ನೋಟೀಸನ್ನೂ ಕೂಡ ಕಳುಹಿಸಿಕೊಡಬೇಕು. ಅವರು ಆ ರೀತಿ ಮೀಟಿಂಗನ್ನು ಕರೆಯದೇ ಹೋದರೆ ರಿಜಿಸ್ಟ್ರಾರ್ ಅವರಿಗೆ ಯಾವ ರೀತಿ ಡೈರೆಕ್ಷನ್ ಕೊಡಬೇಕು ಅನ್ನುವುದನ್ನೂ ಕೂಡ ಈ ತಿದ್ದುಪಡಿಯಲ್ಲಿ ಕೊಡಲಾಗಿದೆ.

ಇನ್ನು ಮತ್ತೊಂದು ತಿದ್ದುಪಡಿ ಏನೆಂದರೆ 69ಕ್ಕೆ ಒಂದು ತಿದ್ದುಪಡಿ ತಂದಿದೆ. ಹಾಲಿ ಇರತಕ್ಕಂಥ 63-64-65-68-69ರ ಕಲಂಗಳ ಪ್ರಕಾರ ಈವೊತ್ತು ಈ ಸೊಸೈಟಿಯಲ್ಲಿ ದುರುಪಯೋಗ ನಡೆದಿದ್ದರೆ ಅಥವಾ ದುರ್ವ್ಯಯ ಆಗಿದೆ ಎಂದು ಅಂತ ಕಂಡುಬಂದರೆ ಅದರ ಬಗ್ಗೆ ಎನ್‌ಕ್ವೈರಿ ಆಗಿ ವಸೂಲ್ಮಾಡಬೇಕಾದರೆ ಕಾಲ ವಿಳಂಬವಾಗುತ್ತಿತ್ತು; ಉದಾಹರಣೆಗೆ 63ರಲ್ಲಿ ಆ ಲೆಕ್ಕ ಆಡಿಟ್ ಆಗಿ ಅದರಲ್ಲಿ ದುರ್ವ್ಯಯವಾಗಿದೆ ಅಂತ ಕಂಡುಬಂದರೆ ಅದನ್ನು 66ಕ್ಕೆ ಪುನಃ ಎನ್‌ಕ್ವೈರಿ ಮಾಡಿಸಬೇಕು. ಅದು ಯಾರು ಮಾಡಿದ್ದಾರೆ ಅಂತ ತಿಳಿದು ಅವನ ಮೇಲೆ ಆ ಹೊರೆ ಹೊರಿಸಬೇಕಾದರೆ ಅದು ಮತ್ತೆ ಎನ್‌ಕ್ವೈರಿ ಆಗಬೇಕು. ಈ ರೀತಿಯಾದ ಒಂದು ಪದ್ಧತಿ ಇದ್ದುದರಿಂದ ಅವರಿಂದ ಹಣ ವಸೂಲ್ಮಾಡುವುದು ಬಹಳ ಕಾಲ ವಿಳಂಬವಾಗುತ್ತಿತ್ತು. ಇದರಿಂದ ನಾವು ಈಗ ಏನು ಮಾಡಿದ್ದೇವೆ ಎಂದರೆ ಸರ್ಕಾರಕ್ಕೆ ಬರಬೇಕಾದಂಥ ಹಣವನ್ನು ವಸೂಲ್ಮಾಡುವುದಕ್ಕೆ ಈ 69ಕ್ಕೆ ಒಂದು ತಿದ್ದುಪಡಿ ತಂದಿದ್ದೇವೆ. ಅದರ ಪ್ರಕಾರ 63ರಲ್ಲಿ ಏನಾದರೂ ಆ ಸೊಸೈಟಿಯಲ್ಲಿ ಹಣ ದುರ್ವ್ಯಯವಾಗಿದೆ ಅಂತ ಕಂಡು ಬಂದರೆ ರಿಜಿಸ್ಟ್ರಾರ್‌ಗೆ 69ರ ತಿದ್ದುಪಡಿ ಪ್ರಕಾರ ಒಂದು ಅಧಿಕಾರ ಕೊಟ್ಟಿದೆ. ಅಷ್ಟೆ

ಅಲ್ಲ, ಆ ಪದಾಧಿಕಾರಿಗಳಿಂದ ದುರ್ವ್ಯಯ ಮಾಡಿದಂಥ ಹಣವನ್ನು ಅವರಿಂದಲೇ ವಸೂಲ್ಮಾಡುವಂಥಾ ಕಾನೂನು ಹಳೇ ಕಾನೂನಿನಲ್ಲಿತ್ತು. ಮತ್ತು ಹಣಕ್ಕೆ ಅವರೇ ಹೊಣೆಗಾರರಾಗಿದ್ದರು. ಈಗ ತಂದಿರುವ ತಿದ್ದುಪಡಿ ಪ್ರಕಾರ ಅವರ ಕುಟುಂಬದವರ ಹೆಸರಿನಲ್ಲಿ ಆಸ್ತಿ ಮಾಡಿಕೊಂಡಿದ್ದರೆ ಅವರೂ ಕೂಡ ಅದಕ್ಕೆ ಹೊಣೆಗಾರರಾಗಿರುತ್ತಾರೆ. ಈ 69ರ ತಿದ್ದುಪಡಿ ಪ್ರಕಾರ ಅವರಿಗೆ ಒಂದು ಹೀರಿಂಗ್ ಕೊಟ್ಟು ಈ ಹಣವನ್ನು ಕೊಡಬೇಕು ಎಂದು ರಿಜಿಷ್ಟ್ರಾರ್‌ರರು ಆದೇಶ ಕೊಡುತ್ತಾರೆ. ಅವರೂ ಕೂಡ ಇದರಲ್ಲಿ ಬಾಧ್ಯಸ್ತರಾಗಿರುವುದರಿಂದ ಅವರಿಂದಲೂ, ಈ ಹಣವನ್ನು ವಸೂಲ್ಮಾಡುವುದಕ್ಕೆ ರಿಜಿಸ್ಟ್ರಾರ್‌ಗೆ ಅಧಿಕಾರ ಕೊಡಲಾಗಿದೆ.

ಇನ್ನು III(ಎ) ಪ್ರಕಾರ ಪ್ರತಿಯೊಂದಕ್ಕೂ ಒಬ್ಬೊಬ್ಬ ಕಾರ್ಯದರ್ಶಿ ಇರಬೇಕು ಅಂತ ಇದೆ. ಏತಕ್ಕೆಂದರೆ ಆ ಬಗ್ಗೆ ಲೆಕ್ಕಪತ್ರಗಳನ್ನು ಇಡಬೇಕು. ಇದಕ್ಕೆ ಅವನೇ ಹೊಣೆಗಾರನಾಗಬೇಕೆಂದು ಇದೆ.

ಇನ್ನು III(ಬಿ) ಪ್ರಕಾರ ಇಷ್ಟು ವರ್ಷದವರೆಗೆ ಸಂಬಂಧಪಟ್ಟ ದಾಖಲೆಗಳು ಇರಬೇಕು ಅಂತ ಇದೆ. ರಿಜಿಸ್ಟ್ರಾರ್ ಆದೇಶ ಕೊಡುವವರೆಗೂ ಅಷ್ಟು ದಿವಸಗಳವರೆಗೆ ಆ ದಾಖಲೆಗಳು ಇರಬೇಕು. ಆ ಬಗ್ಗೆ ರಿಜಿಸ್ಟ್ರಾರ್ ಆದೇಶ ಕೊಡುವವರೆಗೂ ಆ ದಾಖಲೆಗಳನ್ನು ಡಿಸ್‌ಪೋಸಲ್ ಮಾಡಕೂಡದು. ಇಂತಹ ಒಂದು ತಿದ್ದುಪಡಿಯನ್ನು ತರಲಾಗಿದೆ.

*****

## ಸಹಕಾರಿ ಸಂತ ಕೆ.ಎಚ್. ಪಾಟೀಲ್

24 ಫೆಬ್ರವರಿ 1992

ನನ್ನ ಮತ್ತು ಪಾಟೀಲರ ವೈಯಕ್ತಿಕ ಸ್ನೇಹ ಎರಡು ಮಾತನ್ನು ಆಡಬೇಕೆಂದು ಪ್ರೇರಣೆ ಕೊಟ್ಟಿದೆ. ಸುಮಾರು 1957-58ರಲ್ಲಿ ಎಂದು ಕಾಣುತ್ತದೆ. ಶ್ರೀ ಬಸವಲಿಂಗಪ್ಪನವರು ಅಂದಿನ ಶ್ರೀ ಜತ್ತಿಯವರ ಮಂತ್ರಿಮಂಡಲದಲ್ಲಿ ಡೆಪ್ಯೂಟಿ ಹೋಂ ಮಿನಿಸ್ಟರ್ ಆಗಿದ್ದರು. ಆ ಕಾಲಕ್ಕೆ ಹುಬ್ಬಳ್ಳಿಯಲ್ಲಿ ಮೊದಲ ಬಾರಿಗೆ ನನ್ನ ಮತ್ತು ಕೆ.ಹೆಚ್. ಪಾಟೀಲರ ಸಂಪರ್ಕವಾಯಿತು. ಅಂದಿನಿಂದ ಇಲ್ಲಿಯವರೆಗೆ ನಮ್ಮ ವೈಯಕ್ತಿಕ ಸ್ನೇಹಕ್ಕೆ ಯಾವ ಚ್ಯುತಿಯೂ ಬಂದಿರಲಿಲ್ಲ. ದಿವಂಗತ ಪಾಟೀಲರು ಒಬ್ಬ ಧೀಮಂತ ವ್ಯಕ್ತಿಯಾಗಿದ್ದರು ಎಂದು ತಮ್ಮ ಮಾತಿನಲ್ಲಿ ಸ್ಪಷ್ಟವಾಗಿ ತಿಳಿಸಿದ್ದೀರಿ. ಇಂದು ನಮ್ಮ ಸಭೆ ಸ್ವಲ್ಪ ಬಡವಾಗಿದೆ ಅಂದರೆ ಅಂಥ ವ್ಯಕ್ತಿಗಳು ನಮ್ಮಿಂದ ದೂರ ಹೋದುದರಿಂದ ಬಡವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದೆಂದು ನಾನು ಭಾವಿಸುತ್ತೇನೆ.

ನಾವು ಈ ಸಭೆಯಲ್ಲಿ ಶಕ್ತಿಯುತರಾದ ಸದಸ್ಯರನ್ನು ಕಳೆದುಕೊಳ್ಳುತ್ತಿದ್ದೇವೆ. 1991ರ ನವೆಂಬರ್‌ನಲ್ಲಿ ಇನ್ನೊಬ್ಬ ಸದಸ್ಯ ಶ್ರೀ ಲಕ್ಕಪ್ಪನವರನ್ನು ಕಳೆದುಕೊಂಡಿದ್ದೇವೆ. ಅವರು ಹೋರಾಟಗಾರರಾಗಿ ಸಭೆಯ ಕಾರ್ಯಕಲಾಪಗಳಲ್ಲಿ ಈ ಸಾರಿ ಅಷ್ಟು ಸಕ್ರಿಯವಾಗಿ ಭಾಗವಹಿಸಲಾಗದಿದ್ದರೂ 1962ರಿಂದ 1967ರವರೆಗೆ ನಂತರ ಲೋಕಸಭೆಯಲ್ಲಿ 1967ರಿಂದ ಹೇಗೆ ಸಕ್ರಿಯವಾಗಿ ಕೆಲಸ ಮಾಡುತ್ತಿದ್ದರು ಎಂಬುದು ಬಹುಶಃ ಎಲ್ಲರಿಗೂ ಗೊತ್ತಿದೆ. ಅದಕ್ಕೂ ಹೆಚ್ಚಾಗಿ ತಾವು ನಂಬಿರತಕ್ಕ ಸಿದ್ಧಾಂತಗಳನ್ನು ಅನುಷ್ಠಾನಕ್ಕೆ ತರುವುದಕ್ಕೆ ಯಾವ ಹಂಗೂ ಇಲ್ಲದೆ ಕಾರ್ಯ ಮಾಡುತ್ತಿದ್ದ ಪಾಟೀಲರು ಇಂದು ನಮ್ಮಿಂದ ದೂರವಾಗಿದ್ದಾರೆ. ಅದು ಸಂಸದೀಯ ವಿಷಯ ಆಗಬಹುದು ಅಥವಾ ಆಡಳಿತದ ವಿಷಯ ಆಗಬಹುದು ಅವರಿಗೆ ಏನು ನಂಬಿಕೆ ಇತ್ತು ಅದನ್ನು ಪ್ರತಿಪಾದಿಸುವುದರಲ್ಲಿ ಯಾರ ಹಂಗಿಗೂ ಒಳಗಾಗದೆ ಪ್ರತಿಪಾದನೆ ಮಾಡುತ್ತಿದ್ದರು. ಅವರ ಕ್ಷೇತ್ರ ಅಂದರೆ ಸಹಕಾರ ಕ್ಷೇತ್ರ. ಅವರು ಸಹಕಾರ ಕ್ಷೇತ್ರದಲ್ಲಿ ಹೆಚ್ಚಾಗಿ ಕೆಲಸ ಮಾಡುತ್ತಿದ್ದರು ಎಂಬುದು ಎಲ್ಲರಿಗೂ ತಿಳಿದಿರುವ ವಿಚಾರ. ತಮ್ಮ ಕಾರ್ಯ ಕ್ಷೇತ್ರಕ್ಕೆ ತಮ್ಮ ಊರನ್ನು ಆರಿಸಿಕೊಂಡು ಅದನ್ನು ಕರ್ನಾಟಕ ಭೂಪಟದಲ್ಲಿ ಒಂದು ಗಣನೀಯವಾದ ಊರನ್ನಾಗಿ ಮಾಡಿದ್ದಾರೆ. ಇವತ್ತು ಅವರು ನಮ್ಮನ್ನಗಲಿದ್ದರೂ ಅವರ ಕಾರ್ಯ ಮುಂದಿದೆ. ನಮ್ಮಿಂದ ದೂರ ಹೋದರೂ ಕೆಲವು ವಿಚಾರಗಳನ್ನು ಅವರು ಏನು ಪ್ರಸ್ತಾಪ ಮಾಡುತ್ತಿದ್ದರು ಅದನ್ನು ಮನಸ್ಸಿನಲ್ಲಿಟ್ಟುಕೊಂಡರೆ ಅದಕ್ಕೆ ಮಾನ್ಯತೆ ಕೊಟ್ಟರೆ ಅವರಿಗೆ ಹೆಚ್ಚು ಗೌರವ ಕೊಟ್ಟಂತಾಗುತ್ತದೆಂದು ಪ್ರಸ್ತಾಪ ಮಾಡುತ್ತಾ ಇವತ್ತು ಅವರು ನಮ್ಮನ್ನಗಲಿದ್ದರೂ ಕೂಡ ಅವರ ಮಗ ನಮ್ಮ ವಿಧಾನ ಪರಿಷತ್ತಿನಲ್ಲಿ ಸದಸ್ಯರಾಗಿದ್ದಾರೆ. ಆ ವ್ಯಕ್ತಿ ಕೂಡ ಅಷ್ಟೇ ವಿಚಾರವಂತ ವ್ಯಕ್ತಿ ಹಾಗೂ ಸಹಕಾರಿ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರತಕ್ಕ ವ್ಯಕ್ತಿ. ಇದು ಸಂತೋಷದ ವಿಚಾರ. ಹೆಚ್ಚು ಮಾತನಾಡದೇ ಅವರು ಆಡಳಿತದ ಬಗ್ಗೆ, ರಾಜ್ಯದ ರಾಜಕಾರಣದ ಬಗ್ಗೆ, ಹೆಚ್ಚು ಆಸಕ್ತಿ ಇದ್ದಂಥ ರಾಜಕೀಯದ ಬಗ್ಗೆ, ಅಷ್ಟೇ ಅಲ್ಲ ರಾಷ್ಟ್ರದ ರಾಜಕೀಯದ ಬಗ್ಗೆ ಕೂಡ ಒಬ್ಬ ವ್ಯಕ್ತಿ. ರಾಜ್ಯದ ರಾಜಕಾರಣ ದಾರಿ ತಪ್ಪುವಾಗ ಅಥವಾ ದಾರಿ ತಪ್ಪುತ್ತದೆ ಎಂದು ಸಂಶಯ ಬಂದಾಗ ನೇರ ಮಾತಿನಿಂದ ಅದನ್ನು ಸರಿಪಡಿಸುವುದಕ್ಕೆ ಪ್ರಯತ್ನಪಟ್ಟಂಥ ಒಬ್ಬ ವ್ಯಕ್ತಿ.

*****

ಅರಣ್ಯ ಪರಿಸರ

# ಸಕ್ಕರೆ ಕಾರ್ಖಾನೆಗಳಿಂದ ಪರಿಸರ ಮಾಲಿನ್ಯ!

13 ನವೆಂಬರ್ 2000

ಕೊರಟಗೆರೆ ಶಾಸಕರಾದ ಶ್ರೀ ಚೆನ್ನಿಗಪ್ಪ ಅವರು ಪರಿಸರ ಜೀವಿಶಾಸ್ತ್ರ ಸಚಿವರಾದ ಶ್ರೀ ರಂಗನಾಥ್ ಅವರನ್ನು ಸಕ್ಕರೆ ಕಾರ್ಖಾನೆಗಳ ಸಂಖ್ಯೆ, ಅವುಗಳಿಂದ ಹಳ್ಳಿಗಳಲ್ಲಿ ಉಂಟಾಗುತ್ತಿರುವ ಪರಿಸರ ಮಾಲಿನ್ಯ, ಅದನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳ ಬಗ್ಗೆ ಪ್ರಶ್ನಿಸುತ್ತಾರೆ. ಅದಕ್ಕೆ ರಂಗನಾಥರು ಉತ್ತರ ಕೊಟ್ಟಿದ್ದಾರೆ.

ಶ್ರೀ ಕೆ.ಎಚ್. ರಂಗನಾಥ್ (ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು).- ಅ) ರಾಜ್ಯದಲ್ಲಿ ಒಟ್ಟು 35 ಸಕ್ಕರೆ ಕಾರ್ಖಾನೆಗಳು ಇವೆ. ಅವುಗಳ ಜಿಲ್ಲಾವಾರು ವಿವರ ಈ ಕೆಳಕಂಡಂತಿದೆ.

| | | | |
|---|---|---|---|
| ಮೈಸೂರು | 02 | ಕೋಲಾರ | 01 |
| ಮಂಡ್ಯ | 04 | ಬೆಳಗಾಂ | 10 |
| ಬಿಜಾಪುರ | 01 | ಬೀದರ್ | 01 |
| ಶಿವಮೊಗ್ಗ | 02 | ಬಳ್ಳಾರಿ | 03 |
| ಹಾಸನ | 01 | ಚಿತ್ರದುರ್ಗ | 01 |
| ಗುಲ್ಬರ್ಗಾ | 01 | ಹಾವೇರಿ | 01 |
| ಉಡುಪಿ | 01 | ದಾವಣಗೆರೆ | 03 |
| ರಾಯಚೂರು | 01 | ಚಾಮರಾಜನಗರ | 01 |
| | | ಬಾಗಲಕೋಟೆ | 01 |

ಆ) ಸಕ್ಕರೆ ಕಾರ್ಖಾನೆಯ ಬಾಯ್ಲರ್‌ನಿಂದ ಬರುವ ಧೂಳಿನಿಂದ ಪರಿಸರ ಮಾಲಿನ್ಯವಾಗುತ್ತಿರುವ ಸರ್ಕಾರದ ಗಮನಕ್ಕೆ ಬಂದಿದೆ.

ಇ) ರಾಜ್ಯದಲ್ಲಿ ಒಂದು ಸಕ್ಕರೆ ಕಾರ್ಖಾನೆಯಿಂದ ಜಲ ಮಾಲಿನ್ಯವಾಗುತ್ತಿದೆ. ಹಾಗೂ ಎರಡು ಸಕ್ಕರೆ ಕಾರ್ಖಾನೆಗಳಿಂದ ವಾಯು ಮಾಲಿನ್ಯ ಉಂಟಾಗುತ್ತಿದೆ.

ಈ) ಸಕ್ಕರೆ ಕಾರ್ಖಾನೆಗಳಿಂದ ಪ್ರಮುಖವಾಗಿ ಜಲ ಮತ್ತು ಮತ್ತು ವಾಯು ಮಾಲಿನ್ಯ ಉಂಟಾಗುತ್ತಿದೆ. ಹೊಸ ಉದ್ದಿಮೆಗಳು ಸ್ಥಾಪಿಸುವ ಮೊದಲು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪರವಾನಿಗೆ ಪಡೆಯುವುದು ಕಡ್ಡಾಯವಾಗಿದೆ. ಉದ್ದಿಮೆಗಳ ಸ್ಥಳದ ಸೂಕ್ತತೆ, ಮಾಲಿನ್ಯ ನಿಯಂತ್ರಣಕ್ಕೆ ಕೈಗೊಳ್ಳುವ ಕ್ರಮಗಳನ್ನು ತಾಂತ್ರಿಕವಾಗಿ ಪರಿಶೀಲಿಸಿ

ನಂತರ ಪರವಾನಿಗೆ ನೀಡಲಾಗುತ್ತಿದೆ. ಇದಲ್ಲದೆ ಹೊಸ ಉದ್ದಿಮೆಗಳು ಪ್ರಾರಂಭಿಸುವ ಮೊದಲೇ ಎಲ್ಲಾ ಮಾಲಿನ್ಯ ನಿಯಂತ್ರಣ ವ್ಯವಸ್ಥೆಗಳನ್ನು ಅಳವಡಿಸಿದ್ದರಷ್ಟೇ ಕರ್ನಾಟಕ ರಾಜ್ಯಮಾಲಿನ್ಯ ನಿಯಂತ್ರಣ ಮಂಡಳಿಯು ಕಾರ್ಯಾಚರಣೆಗೆ ಅನುಮತಿಸಲಾಗುವುದು. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಜಲ ಮತ್ತು ವಾಯು ಕಾಯ್ದೆಗಳಲ್ಲಿ ಮಾನಕಗಳನ್ನು ನಿಗದಿಪಡಿಸಿ ಮಾಪನ ಮಾಡುತ್ತಿವೆ. ಉದ್ದಿಮೆಯ ಸ್ಥಳಕ್ಕನುಗುಣವಾಗಿ ಮಾನಕಗಳನ್ನು ಹಾಗೂ ಮಿತಿಯನ್ನು ನಿಗದಿಪಡಿಸಿ, ಮಾಲಿನ್ಯ ನಿಯಂತ್ರಣ ಉಪಕರಣಗಳ ಸಮರ್ಥತೆ ಸರಿಯಿಲ್ಲದಿದ್ದ ಪಕ್ಷದಲ್ಲಿ ಅಂತಹ ಉದ್ದಿಮೆಗಳಿಗೆ ಸೂಕ್ತ ನಿರ್ದೇಶನಗಳನ್ನು ನೀಡಿ ಅತ್ಯಾಧುನಿಕ ಉಪಕರಣಗಳನ್ನು ಅಳವಡಿಸುವಂತೆ ತಿಳಿಸಿ ಕ್ರಮ ಕೈಗೊಳ್ಳಲಾಗುತ್ತಿದೆ. ಎಲ್ಲಾ ಉದ್ದಿಮೆಗಳು ಮಾಲಿನ್ಯ ನಿಯಂತ್ರಣದ ಮೇಲ್ವಿಚಾರಣೆಗೆ ನುರಿತ ಸಿಬ್ಬಂದಿಯನ್ನು ನಿಯೋಜಿಸುವುದು ಕಡ್ಡಾಯ ಮಾಡಲಾಗಿದೆ. ತಪ್ಪಿತಸ್ಥ ಉದ್ದಿಮೆಗಳ ಮೇಲೆ ಕಾನೂನು ರೀತಿಯ ಕ್ರಮ ಕೈಗೊಳ್ಳಲಾಗುತ್ತಿದೆ.

ಶ್ರೀ ಸಿ. ಚೆನ್ನಿಗಪ್ಪ.- ಸನ್ಮಾನ್ಯ ಅಧ್ಯಕ್ಷರೇ, ರಾಜ್ಯದಲ್ಲಿರುವ ಕೆಲವು ಸಕ್ಕರೆ ಕಾರ್ಖಾನೆಗಳಿಂದ ವಾಯು ಮಾಲಿನ್ಯ ಮತ್ತು ಜಲ ಮಾಲಿನ್ಯವಾದ ನಂತರ, ಈ ಕಾರ್ಖಾನೆಗಳ ಬಗ್ಗೆ ಸರ್ಕಾರ ಏನು ಕ್ರಮ ಕೈಗೊಂಡಿದೆ ಎಂಬುದನ್ನು ದಯಮಾಡಿ ತಿಳಿಸಬೇಕೆಂದು ಕೇಳುತ್ತೇನೆ.

ಶ್ರೀ **ಕೆ.ಎಚ್. ರಂಗನಾಥ್.**- ಮಾನ್ಯ ಅಧ್ಯಕ್ಷರೇ, ಕೆಲವು ಕಾರ್ಖಾನೆಗಳು ಈ ಕಾನೂನು ಜಾರಿಗೆ ಬರುವುದಕ್ಕಿಂತ ಮುಂಚೆ ಪ್ರಾರಂಭವಾಗಿರುವಂತಹ ಕಾರ್ಖಾನೆಗಳು ಇವೆ. ಈಗಿನ ಕಾನೂನು ಪ್ರಕಾರ ಎಲ್ಲ ಕ್ರಮಗಳನ್ನು ಕಾರ್ಖಾನೆಯವರು ಅನುಸರಿಸಿದ ಮೇಲೆ ಪೊಲ್ಯೂಷನ್ ಕಂಟ್ರೋಲ್ ಬೋರ್ಡ್‌ನವರು ಕಾರ್ಖಾನೆಯನ್ನು ಸ್ಥಾಪನೆ ಮಾಡುವುದಕ್ಕೆ ಅಪ್ಪಣೆಯನ್ನು ಕೊಡುತ್ತಾರೆ. ಹಿಂದೆ ಆ ರೀತಿ ಕ್ರಮ ಪಾಲನೆ ಇಲ್ಲದ್ದರಿಂದ ನಡೆದುಕೊಂಡು ಹೋಗಿದೆ. ಕೇವಲ ಎರಡು ಕಾರ್ಖಾನೆಗಳು ಬರುವ ದೂಳಿನಿಂದ ಮಾಲಿನ್ಯವಾಗತಕ್ಕಂಥ ಎರಡು ಕಾರ್ಖಾನೆಗಳು ಇವೆ. ಬೀದರ್ ಮತ್ತು ಬ್ರಹ್ಮಾವರ್, ಬ್ರಹ್ಮಾವರ ಬಹಳ ದುಸ್ಥಿತಿಯಲ್ಲಿದೆ. ಒಂದು ವರ್ಷದಲ್ಲಿ ಕೇವಲ ಎರಡು ಮೂರು ತಿಂಗಳು ಮಾತ್ರ ನಡೆಯುತ್ತದೆ. ಅವರಿಗೆ ಬೇಕಾಗಿರುವಂತಹ ಸಾಮಗ್ರಿಯನ್ನು ಒದಗಿಸುವುದಕ್ಕೆ ಅನುಕೂಲವಾಗುತ್ತದೆಯೋ ಇಲ್ಲವೋ ನನಗೆ ಗೊತ್ತಿಲ್ಲ. ಇನ್ನು ಜಲ ಮಾಲಿನ್ಯದ ಕಾರ್ಖಾನೆ ನನ್ನ ಕ್ಷೇತ್ರದಲ್ಲಿಯೇ ಇದೆ. ವಾಣಿವಿಲಾಸ ಸಕ್ಕರೆ ಕಾರ್ಖಾನೆ. ಅದು ಸುಮಾರು 10 ವರ್ಷ ಮುಚ್ಚಿ ಹೋಗಿತ್ತು. ಈಗ ಕೆಲವು ವರ್ಷಗಳಿಂದ ಅದನ್ನು ಪ್ರಾರಂಭ ಮಾಡಿದ್ದಾರೆ. ಅದೂ ಕೂಡ ಕುಂಟುತ್ತಾ ಕುಂಟುತ್ತಾ ಮೇಲಕ್ಕೆ ಎಳುತ್ತಿದೆ. ಮತ್ತೆ ಅದರ ಮೇಲೆ ಇಲಾಖೆಯವರು ಕೇಸ್ ಹಾಕಿದ್ದಾರೆ. ಕಾರ್ಖಾನೆಯ ವಿರುದ್ಧ ಕೇಸ್ ಮುನ್ಸೀಫ್ ಕೋರ್ಟಿನಲ್ಲಿದೆ ಅಂತ ನಾನು ಉತ್ತರದಲ್ಲಿ ಹೇಳಿದ್ದೇನೆ. ಜಾಗ್ರತೆಯಾಗಿ ಅದನ್ನು ಸರಿಮಾಡುವುದಕ್ಕೆ ಪ್ರಯತ್ನ ಮಾಡುತ್ತೇನೆ.

ಶ್ರೀ ಸಿ. ಚೆನ್ನಿಗಪ್ಪ.- ಮಾನ್ಯ ಅಧ್ಯಕ್ಷರೇ, ಆ ಕಾರ್ಖಾನೆಯವರು ಮಾಲಿನ್ಯ ನೀರು ಹೊರಗೆ ಬಿಡುತ್ತಿರುವುದರಿಂದ ಜಲ ಮಾಲಿನ್ಯವಾಗಿ ಜನ ಸಾಯುತ್ತಿದ್ದಾರೆ. ದನಗಳು ಆ ನೀರು ಕುಡಿದು, ದನಗಳೂ ಸಾಯುತ್ತಿವೆ, ಈ ಬಗ್ಗೆ ಸರ್ಕಾರ ಸೂಕ್ತವಾದ ಕಾರ್ಯಕ್ರಮ ಕೈಗೊಳದೆ ಹೋದರೆ ಜನರ ಜೀವನದ ಬಗ್ಗೆ ಏನಾಗುತ್ತದೆ ಎನ್ನುವುದನ್ನು ಯೋಚನೆ ಮಾಡಿದ್ದೀರಾ?

ಶ್ರೀ ಕೆ.ಎಚ್. ರಂಗನಾಥ್.- ಮಾನ್ಯ ಅಧ್ಯಕ್ಷರೇ, ನನ್ನ ಕ್ಷೇತ್ರದಲ್ಲಿ ನಡೆಯುತ್ತಿದೆ. ಎಲ್ಲಿ ಬೋರ್‌ವೆಲ್ ಹಾಕಿದರೂ ಸಹ ಮಲಿನ ನೀರು ಬರುತ್ತಿವೆ. ನಾವು ಸಹ ತೊಂದರೆ ಪಡುತ್ತಿದ್ದೇವೆ. ನನಗೆ ಪರಿಚಯವಿದೆ. ಈ ಕಾರ್ಖಾನೆಯನ್ನು ಸ್ಥಾಪನೆ ಮಾಡುವುದಕ್ಕೆ 1972ನೇ ಇಸವಿಯಲ್ಲಿ ಅವಕಾಶ ಕೊಟ್ಟಿದ್ದಾರೆ. ಅಲ್ಲಿಂದ ಇಲ್ಲಿಯವರೆಗೂ ಆ ಕಾರ್ಖಾನೆ ನಡೆಯುತ್ತಿರುವುದರಿಂದ ಸಾಕಷ್ಟು ಮಾಲಿನ್ಯ ನೀರು ಭೂಮಿಗೆ ಹೋಗಿದೆ. ಆ ಕಾರ್ಖಾನೆಯವರು ಸಹ ಈಗ ಸ್ವಲ್ಪ ಬದಲಾವಣೆ ಮಾಡಿಕೊಂಡಿದ್ದಾರೆ. ಮತ್ತು ಹಳ್ಳಿಗಳಿಗೆ ಕುಡಿಯುವ ನೀರು ಕೊಡಲು ಪರ್ಯಾಯ ವ್ಯವಸ್ಥೆಯನ್ನು ಮಾಡಿಸುವುದಕ್ಕೆ ನಾನು ಆಸಕ್ತನಾಗಿದ್ದೇನೆ.

*****

## ಆನೆ ಹಾವಳಿ: ಅರಣ್ಯ ಸಚಿವರ ಹೇಳಿಕೆ

18 ಜುಲೈ 2002

ಶ್ರೀ ಕೆ.ಎಚ್. ರಂಗನಾಥ್ (ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು).- ಮಾನ್ಯ ಅಧ್ಯಕ್ಷರೆ ತಮ್ಮ ಅನುಮತಿ ಪಡೆದು ಈ ಕೆಳಕಂಡ ಹೇಳಿಕೆಯನ್ನು ಮಾಡುತ್ತೇನೆ. ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕು ದುಂಡಿನಶಿವರ ಹೋಬಳಿ ಮಾರುತಮ್ಮನಹಳ್ಳಿಗೆ 5 ಆನೆಗಳು ಬಂದು ಮಾರುತಮ್ಮನಹಳ್ಳಿ ಗ್ರಾಮದ ಸುಮಾರು 25 ವರ್ಷದ ನವೀನ್‌ಕುಮಾರ್ ಅವರನ್ನು ಆನೆ ಈ ದಿನ ಬೆಳಿಗ್ಗೆ 6.30ಕ್ಕೆ ಹಲ್ಲೆ ಮಾಡಿದೆ. ಆನೆಗಳ ತುಳಿತಕ್ಕೆ ಒಳಗಾಗಿ ಹತ್ಯೆ ಆಗಿದ್ದಾನೆ. ಈ ಬಗ್ಗೆ ಉಪ ಅರಣ್ಯಾಧಿಕಾರಿಗಳು ಸ್ಥಳಕ್ಕೆ ಭೇಟಿ ಕೊಟ್ಟು ಮೃತರ ಕುಟುಂಬಕ್ಕೆ ಒಂದು ಲಕ್ಷ ರೂಪಾಯಿಗಳ ಪರಿಹಾರ ಘೋಷಿಸಿದ್ದಾರೆ. ಹಾಗೂ ಉತ್ತರಾದಿ ಕ್ರಿಯೆಗಳಿಗೆಂದು ಐದು ಸಾವಿರ ರೂಪಾಯಿ ನೀಡಲಾಗಿದೆ. ಈ ಆನೆಗಳು ಕನಕಪುರ, ಚನ್ನಪಟ್ಟಣ, ಮಾಗಡಿ, ಸಾವನದುರ್ಗ ಮಾರ್ಗವಾಗಿ ದಿನಾಂಕ 14.7.2002ರಂದು ಹುಲಿಯೂರು ದುರ್ಗದ ಅರಣ್ಯಕ್ಕೆ ಬಂದಿರುತ್ತದೆ. ಆ ಆನೆಗಳು ಅಲ್ಲಿಂದ ಇಪ್ಪಾಡಿ ಮೂಲಕ ತೆರಳಿ ಸಂತೆಮಾವತ್ತೂರಿನ ನೆಡುತೋಪಿನಲ್ಲಿ ರಾತ್ರಿ ಬೀಡುಬಿಟ್ಟಿರುತ್ತವೆ. ದಿನಾಂಕ 17.7.2002 ರಂದು ಕುಣಿಗಲ್ ತಾಲ್ಲೂಕು ಕಗ್ಗೆರೆ ಮಾರ್ಗವಾಗಿ ಹೊರಟು ಯಡಿಯೂರಿನ ತುರುಗನೂರು ಹತ್ತಿರದ ಹಳ್ಳಿಯ

ಬಳಿ ಬೀಡುಬಿಟ್ಟಿದ್ದವು. ದಿನಾಂಕ 15.7.2002ರಂದು ರಾತ್ರಿ ಬೆಳಗಿನ ಜಾವ ತುರುವೇಕೆರೆ ತಾಲ್ಲೂಕು ದಿಂಡಿನಶಿವರ ಹೋಬಳಿ ಮಾರುತಮ್ಮನಹಳ್ಳಿ ಗ್ರಾಮಕ್ಕೆ ತಲುಪಿರುತ್ತವೆ.

ಈ ಮೂರು ದಿನಗಳ ಅವಧಿಯಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನೇತೃತ್ವದಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ವಲಯ ಅರಣ್ಯಾಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಆನೆಗಳನ್ನು ಅರಣ್ಯದೊಳಗೆ ಕಳುಹಿಸಲು ಪ್ರಯತ್ನ ಮಾಡಿರುತ್ತಾರೆ. ಈ ಆನೆಗಳು ಬಂದ ದಾರಿಯಲ್ಲಿಯೇ ವಾಪಸ್ಸು ಕನಕಪುರ ಅರಣ್ಯಕ್ಕೆ ಹೊರಡುವ ಸಾಧ್ಯತೆಯಿದೆ ಅಥವಾ ಆನೆಗಳ ಚಲನೆಯ ಮಾರ್ಗವಾಗಿ ಹಾಸನ ಅರಣ್ಯಕ್ಕೂ ಹೋಗುವ ಸಾಧ್ಯತೆಯಿದೆ. ಸ್ಥಳದ ಪರಿಸ್ಥಿತಿಗನುಗುಣವಾಗಿ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು. ಸ್ಥಳದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ತಂಗಿದ್ದು ಸೂಕ್ತಕ್ರಮ ತೆಗೆದುಕೊಳ್ಳುತ್ತಿದ್ದಾರೆ.

ಶ್ರೀ ಎಂ.ಡಿ. ಲಕ್ಷ್ಮೀನಾರಾಯಣ.- ಮಾನ್ಯ ಅಧ್ಯಕ್ಷರೆ, ನಾನು ರಾತ್ರಿ ಕೂಡ ಸ್ಥಳಕ್ಕೆ ಹೋಗಿದ್ದೆ, ಆನೆಗಳು ಎರಡು ಗುಂಪುಗಳಾಗಿವೆ. ಮೂರು ಆನೆ ಒಂದು ಗುಂಪು. ಎರಡು ಆನೆ ಒಂದು ಗುಂಪಾಗಿದೆ. ಅಲ್ಲಿನ ಜನಗಳಿಗೆ ಭಯಭೀತಿ ಉಂಟಾಗಿದೆ. ನಿನ್ನೆ ಸುಮಾರು 70 ವರ್ಷದ ಹೆಂಗಸಿನ ಮೇಲೆ ಗಲಾಟೆ ಮಾಡಿವೆ. ಇದು ನನ್ನ ಗಮನಕ್ಕೆ ಬಂದಿದೆ. ನಾನು ಕಣ್ಣಾರೆ ನೋಡಿ ಫೋಟೋ ಕೂಡ ತೆಗೆದುಕೊಂಡು ಬಂದಿದ್ದೇನೆ. ದಯವಿಟ್ಟು ತಕ್ಷಣ ಆನೆಗಳನ್ನು ಹಿಡಿದು ಕಾಡಿಗೆ ಬಿಡುವ ಕೆಲಸ ಮಾಡಬೇಕು. ಜನ ಭಯಭೀತರಾಗಿದ್ದಾರೆ ಅದನ್ನು ತಪ್ಪಿಸಬೇಕು. ಆನೆಗಳಿಗೆ ಏನಾದರೂ ಅಪಾಯವಾದರೆ ಗ್ರಾಮಸ್ಥರಿಗೆ ಅನಾನುಕೂಲವಾಗುತ್ತದೆ. ಆ ದೃಷ್ಟಿಯಿಂದ ದಯವಿಟ್ಟು ತಕ್ಷಣ ಆನೆಗಳನ್ನು ಕಾಡಿಗೆ ಕಳುಹಿಸತಕ್ಕ ಜವಾಬ್ದಾರಿಯನ್ನು ತಾವು ತೆಗೆದುಕೊಳ್ಳಬೇಕು.

ಶ್ರೀ ಕೆ.ಎಚ್. ರಂಗನಾಥ್.- ಮಾನ್ಯ ಅಧ್ಯಕ್ಷರೆ, ಅರಣ್ಯಾಧಿಕಾರಿಗಳು ಎಲ್ಲಾ ಕ್ರಮವನ್ನು ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ಆದರೆ ಪರಿಸ್ಥಿತಿ ಏನಾಗಿದೆಯೆಂದು ಮಾನ್ಯ ಸದಸ್ಯರಿಗೆ ಗೊತ್ತಿರಬಹುದು. ಗ್ರಾಮದ ಜನರು ಆನೆ ನೋಡುವುದಕ್ಕೆ ಹಿಂಡು ಹಿಂಡಾಗಿ ಬರುತ್ತಿದ್ದಾರೆ. ಹೇಗಾಗಿದೆ ಅಂದರೆ, ಇಲಾಖೆಯಿಂದ ಬರೀ ಅಧಿಕಾರಿಗಳು ಅಷ್ಟೇ ಅಲ್ಲ, ಅಧಿಕಾರಿಗಳ ಜೊತೆಗೆ ಕೆಲವು ಗಾರ್ಡ್ಸ್ ವಗೈರೆ ಹೀಗೆ ಬಹಳ ಜನ ಸೇರಿಕೊಂಡು ಆನೆಗಳನ್ನು ಹಿಂದಕ್ಕೆ ಕಳುಹಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ಊರಿನವರು ಆನೆಗಳನ್ನು ನೋಡುವುದಕ್ಕೆ ಗುಂಪು ಗುಂಪಾಗಿ ಬಂದಿದ್ದರಿಂದ ಆನೆಗಳು ಬೆದರಿ ಎರಡು ಗುಂಪುಗಳಾಗಿವೆ. ಇದು ಬಹಳ ಕಷ್ಟದ ಕೆಲಸ. ತಕ್ಷಣ ಆನೆಯನ್ನು ಎತ್ತಿಕೊಂಡು ಹೋಗುವುದಕ್ಕೆ ಆಗುತ್ತದೆಯೆ? ಇದು ಸ್ವಲ್ಪ ಕಷ್ಟದ ಕೆಲಸ. ಅದು ವನ್ಯಜೀವಿ, ಅದು ಮೊದಲೇ ಈ ಭಾಗದಿಂದ ಆ ಭಾಗಕ್ಕೆ ಕಾರಿಡಾರ್ ಓಡಾಡತಕ್ಕ ಸ್ಥಳ. ನಮ್ಮ ಬೆಂಗಳೂರು ಪ್ರದೇಶದಲ್ಲಿ ಕೂಡ ಸ್ವಲ್ಪ ಇಕ್ಕಟ್ಟಾಗಿದೆ. ಇಲ್ಲಿ ಏನು ಮಾಡುತ್ತಾರೆ ಎಂದರೆ ಫೈರಿಂಗ್ ಮಾಡಿ ಗಲಾಟೆ ಮಾಡಿದರೆ ಅವು ಬೆದರಿಬಿಡುತ್ತವೆ. ಹೋಗುವಾಗ ದಾರಿಯಲ್ಲಿ ಈವತ್ತು ಯಾವ ಹೊಲಕ್ಕೆ ಹೋಗಿರುತ್ತವೋ

ನಾಳೆಯೂ ಅದೇ ಹೋಲಕ್ಕೆ ಹೋಗುತ್ತದೆ. ಇವತ್ತು ಬಾಳೆ, ತೆಂಗು ಮತ್ತು ಭತ್ತ ಇವೆಲ್ಲಾ ಮಾರ್ಗದ ಮಧ್ಯದಲ್ಲಿ ಇರುವುದರಿಂದ ಅವುಗಳು ಆಹಾರದ ದೃಷ್ಟಿಯಿಂದಲೂ ಕೂಡ ಓಡಾಡುತ್ತಾ ಇರುತ್ತವೆ. ಇಂತಹ ಒಂದು ಪರಿಸ್ಥಿತಿ ಇದೆ. ಇಲಾಖೆಯವರು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುತ್ತಿದ್ದಾರೆ. ತಾವು ಬಂದಾಗ ನಾನು ತಿಳಿಸಿದ್ದೇನೆ. ಆ ದಿವಸವೇ ನಾನು ಫೋನ್‌ನಲ್ಲಿ ಮಾತನಾಡಿದಾಗ ನಮ್ಮ ಡಿ.ಸಿ.ಎಫ್. ಆ ಪ್ರದೇಶದಿಂದಲೇ ಮಾತನಾಡಿ ಫ್ಯಾಕ್ಸ್ ಕಳುಹಿಸಿದ್ದರು. ಅವರು ಅಲ್ಲಿ ಇದ್ದರು. ಎಲ್ಲಾ ಅಧಿಕಾರಿಗಳು ಕೂಡ ಅಲ್ಲಿ ಇದ್ದಾರೆ. ಆದ್ದರಿಂದ ಸ್ವಲ್ಪ ತಾವೂ ಕೂಡ ಗ್ರಾಮಸ್ಥರಿಗೆ ಈ ತರಹ ಬೆದರಿಸದ ಹಾಗೆ ಹೇಳಬೇಕು. ಗ್ರಾಮಸ್ಥರು ಕುತೂಹಲದಿಂದ ನೋಡುವುದಕ್ಕೆ ಬರುತ್ತಾರೆ. ಆನೆಗಳನ್ನು ಬೆದರಿಸಬೇಕು ಎಂದು ಗ್ರಾಮಸ್ಥರು ಬರುತ್ತಿದ್ದಾರೆ ಎಂದು ನಾನು ಹೇಳಿಲ್ಲ. ಕುತೂಹಲದಿಂದ ಅವರು ನೋಡುವುದಕ್ಕೆ ಬರುವಂಥ ಒಂದು ಪ್ರವೃತ್ತಿ ಇದೆ. ಹೀಗಾಗಿ ಈ ದಿವಸ ಸ್ವಲ್ಪ ಕಷ್ಟವಾಗಿದೆ. ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುತ್ತೇವೆ.

ಶ್ರೀ ಎಂ.ಪಿ. ಅಪ್ಪಚ್ಚುರಂಜನ್.- ಕಾಡಾನೆಗಳು ಕಾಡು ಬಿಟ್ಟು ಊರಿಗೆ ಬರುತ್ತಿವೆ. ಇದಕ್ಕೆ ಕಾರಣ ಏನೆಂಬುದರ ಬಗ್ಗೆ ಚಿಂತನೆಯಾಗಬೇಕಾಗುತ್ತದೆ.

ಶ್ರೀ ಕೆ.ಎಚ್. ರಂಗನಾಥ್.- ನಾವು ಬಹಳ ಬುದ್ಧಿವಂತರು. ಕಾಡಿನ ಹತ್ತಿರ ಹತ್ತಿರಕ್ಕೆ ಭೂಮಿ ಮಾಡಿಕೊಂಡು ಹೋಗುತ್ತಿದ್ದೇವೆ. ಹಾಗಾಗಿ ಅವಕ್ಕೆ ಭೂಮಿ ಎಲ್ಲಿದೆ? ಅವರ ಜಾಗವನ್ನು ನಾವು ತೆಗೆದುಕೊಂಡ ಮೇಲೆ....

ಶ್ರೀ ಅಪ್ಪಚ್ಚುರಂಜನ್ ಹಾಗೂ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರ ಚರ್ಚೆಯ ನಂತರ ಶ್ರೀ ರಂಗನಾಥರ ತಮ್ಮ ಹೇಳಿಕೆ ಮುಂದುವರೆಸುತ್ತಾರೆ.

ಶ್ರೀ ಕೆ.ಎಚ್. ರಂಗನಾಥ್.- ಮಾನ್ಯ ಅಧ್ಯಕ್ಷರೇ, ಈ ವಿಷಯ ಏನು ಪ್ರಸ್ತಾಪ ಮಾಡುತ್ತಿದ್ದಾರೆ, ಇದು ಬೆಂಗಳೂರಿಗೆ ಅಷ್ಟೇ ಸೀಮಿತವಾಗಿಲ್ಲ. ಕೊಡಗು ಜಿಲ್ಲೆಯಲ್ಲಿ ಈ ಪರಿಸ್ಥಿತಿ ಇದೆ. ಹಾಸನದಲ್ಲಿ ಶಿವಪ್ಪನವರು ಇರುವಲ್ಲೂ ಆನೆಗಳ ಕಾಟ ಇದೆ. ನಿಮ್ಮಲ್ಲಿ ಕಾಟ ಇದೆಯೋ ಇಲ್ಲವೋ?

ಶ್ರೀ ಬಿ.ಬಿ. ಶಿವಪ್ಪ.- ಮನೆ ಹತ್ತಿರವೇ ಇದೆ.

ಶ್ರೀ ಕೆ.ಎಚ್. ರಂಗನಾಥ್.- ಮನೆ ಹತ್ತಿರವೇ ಕಾಟ ಇದೆಯಂತೆ. ಅದಕ್ಕೇ ಅವರು ವಿಧಾನಸಭೆಗೆ ಬಂದುಬಿಟ್ಟರು. ಮಾನ್ಯ ಸದಸ್ಯರಾದ ಶ್ರೀ ಸಿಂಧ್ಯಾರವರು ಏನು ಪ್ರಸ್ತಾಪ ಮಾಡಿದ್ದಾರೆ, ಅದು ಮುಖ್ಯಮಂತ್ರಿಗಳಿಗೆ ಮನವಿಯನ್ನು ಕೊಟ್ಟಿದ್ದಾರೆ. ಮುಖ್ಯಮಂತ್ರಿಗಳು ಅದರ ಮೇಲೆ ಈ ಒಂದು ಹಾವಳಿಯನ್ನು ತಪ್ಪಿಸುವುದಕ್ಕೆ ನಾವು ಖಾಯಂ ಆಗಿ ಏನಾದರೂ ಮಾಡಬೇಕು ಇದನ್ನು ಪರಿಶೀಲನೆ ಮಾಡಿ ಎಂಬ ಮಾತನ್ನು ಹೇಳಿದ್ದಾರೆ. ಇದನ್ನು ನಾನು ಇಲಾಖೆಯ ಅಧಿಕಾರಿಗಳಿಗೆ ಕೊಟ್ಟಿದ್ದೇನೆ. ಇದನ್ನು ಪರಿಶೀಲನೆ

ಮಾಡಿ ಏನಾದರೂ ಮಾಡಲೇಬೇಕಾಗುತ್ತದೆ. ತಾವು ಹೇಳಿದ ಹಾಗೆ ನೀರು ಇರತಕ್ಕಂಥ ಪ್ರದೇಶದಲ್ಲಿ ನಾವು ಚೆಕ್‌ಡ್ಯಾಮ್‌ಗಳನ್ನು ಮಾಡುವಾಗ ಆ ಭಾಗದಲ್ಲಿ ಅವು ತಿನ್ನುವುದಕ್ಕೆ ಬೇಕಾದ ಹಲಸು ವಗೈರೆ ಇಂಥಾದ್ದು ಏನಾದರೂ ಬೆಳೆಸತಕ್ಕದ್ದು ಮಾಡಿ ಅವುಗಳು ಊರಿನ ಹೊರಗೆ ಬಾರದ ಹಾಗೆ ಮಾಡಿದರೆ ಬಹಳ ಮಟ್ಟಿಗೆ ನಾವು ಅವುಗಳ ಹಾವಳಿಯಿಂದ ಉಳಿದುಕೊಳ್ಳಬಹುದು. ಆದರೆ ಅವರು ಏನು ಪ್ರಸ್ತಾಪ ಮಾಡುತ್ತಿದ್ದಾರೆ. ಈ ಬ್ಯಾರಿಕೇಡ್ ಹಾಕತಕ್ಕದ್ದು ಏನಿದೆ, ಅದು ಬಹಳ ಹಣ ಖರ್ಚುಮಾಡಬೇಕಾಗಿರತಕ್ಕಂಥ ವಿಚಾರ. ಅದರ ಬಗ್ಗೆ ಬಹಳ ಯೋಚನೆ ಮಾಡಬೇಕಾಗುತ್ತದೆ. ಅದಕ್ಕೆ ತುಂಬಾ ಹಣ ಖರ್ಚು ಮಾಡಬೇಕಾಗುತ್ತದೆ. ಇವತ್ತಿನ ದಿವಸ ನಾವು ಟ್ರೆಂಚ್ ಹೊಡೆಯುವುದಕ್ಕೆ ಸಾಕಷ್ಟು ಹಣ ಖರ್ಚು ಮಾಡತಕ್ಕಂತ ಪರಿಸ್ಥಿತಿಯಲ್ಲಿ ಇದ್ದೇವೆ. ಅದಕ್ಕೆ ಒಂದು ಪ್ರಾಜೆಕ್ಟ್ ರಿಪೋರ್ಟ್ ಕೂಡ ಆಗಿದೆ. ಸುಮಾರು 35-40 ಕೋಟಿ ರೂಪಾಯಿ ಖರ್ಚು ಮಾಡತಕ್ಕಂಥ ಒಂದು ಪ್ರಾಜೆಕ್ಟ್ ಕೂಡ ಇದೆ. ಇಷ್ಟು ಹಣವನ್ನು ನಾವು ತಕ್ಷಣ ತರುವುದಕ್ಕೆ ಸಾಧ್ಯವಾಗದೇ ಇರತಕ್ಕಂಥ ಪರಿಸ್ಥಿತಿಯಲ್ಲಿ ಇದ್ದೇವೆ. ಆದ್ದರಿಂದ ಮಾನ್ಯ ಸದಸ್ಯರ ಅಭಿಪ್ರಾಯ ಏನಿದೆ, ಅದು ಸಾಧುವಾದಂಥ ವಿಚಾರ. ಮಾನ್ಯ ಮುಖ್ಯಮಂತ್ರಿಗಳು ಆ ಗ್ರಾಮದವರು ಕೊಟ್ಟಿರತಕ್ಕಂಥ ಮನವಿ ಮೇಲೆ ಬರೆದು ಕಲುಹಿಸಿದ್ದಾರೆ. ಇದರ ಬಗ್ಗೆ ಏನಾದರೂ ಮಾಡಬೇಕಾಗುತ್ತದೆ. ಇಡೀ ರಾಜ್ಯಕ್ಕೆ ಸಂಬಂಧಪಟ್ಟ ಹಾಗೆ ಇದನ್ನು ಕಾಂಪ್ರಹೆನ್ಸಿವ್ ಆಗಿ ಮಾಡಬೇಕು ಎಂಬ ಮಾತನ್ನು ಅವರು ಹೇಳಿದ್ದಾರೆ. ಇದರ ಬಗ್ಗೆ ಪರಿಶೀಲನೆ ಮಾಡಿಸುತ್ತೇನೆ.

ಶ್ರೀ ಪಿ.ಜಿ.ಆರ್. ಸಿಂಧ್ಯ.- ನನಗೆ ಗೊತ್ತಿರುವ ಹಾಗೆ ನ್ಯಾಷನಲ್ ಪಾರ್ಕ್ ಇಂಪ್ರೂವ್‌ಮೆಂಟ್ ದೃಷ್ಟಿಯಿಂದ ಇದರ ಸುತ್ತಮುತ್ತ ಇರುವ ಟೌನ್‌ಗಳನ್ನು ಹಾಗೂ ಹೊಳೆಗಳನ್ನು ಸಹಿತ ಶುದ್ಧೀಕರಣ ಮಾಡುವುದಕ್ಕೆ ಮತ್ತು ಕಲುಷಿತ ನೀರು ಬಂದು ಸೇರುವುದನ್ನು ನಿಲ್ಲಿಸಿ ಪರಿಸರ ರಕ್ಷಣೆ ಮಾಡಬೇಕೆಂದು ಸುಮಾರು 100-150 ಕೋಟಿಯಲ್ಲಿ ಒಂದು ಪ್ರಾಜೆಕ್ಟ್‌ನ್ನು ವರ್ಲ್ಡ್‌ಬ್ಯಾಂಕ್‌ನವರು ಮಾಡುತ್ತಿದ್ದಾರೆ. ಅದರಲ್ಲಿ ಇದನ್ನು ಸೇರಿಸಬಹುದಲ್ಲಾ? ಇದರಿಂದ ಕೊನೆಪಕ್ಷ ಬೆಂಗಳೂರಿನ ಸುತ್ತಮುತ್ತ ಇರತಕ್ಕಂಥ ನ್ಯಾಷನಲ್ ಪಾರ್ಕ್‌ಗೆ ಒಂದು ಪ್ರೊಟೆಕ್ಷನ್ ಆಗುತ್ತದೆ ಎಂಬುದು ನನ್ನ ವಾದ.

ಶ್ರೀ ಕೆ.ಎಚ್. ರಂಗನಾಥ್.- ಉತ್ತಮವಾದ ಸೂಚನೆ. ಇದನ್ನು ಪರಿಶೀಲನೆ ಮಾಡುತ್ತೇನೆ.

ಶ್ರೀ ಆರ್. ಅಶೋಕ್ (ಉತ್ತರಹಳ್ಳಿ).- ನಮ್ಮ ಜೆ.ಪಿ. ನಗರದವರೆಗೂ ಆನೆಗಳು ಬಂದಿವೆ. ಮಾನ್ಯ ಅಧ್ಯಕ್ಷರ ಮುಖಾಂತರ ನಾನು ಕೇಳುವುದೇನೆಂದರೆ ಸರ್ಕಾರ ರೈತರಿಗೆ ಕೊಡುವ ಪರಿಹಾರ ಸಾಲದು. ಈಗ ಕೊಡುತ್ತಿರುವುದು ಇನ್ನೂರು, ಐದುನೂರು ರೂಪಾಯಿಗಳು ಮಾತ್ರ. ನೊಂದವರಿಗೆ ಸರಿಯಾದಂಥ ಪರಿಹಾರ ಕೊಡಬೇಕು. ಏಕೆಂದರೆ, ಪ್ರಿವೆಂಟ್ ಮಾಡುರುದಕ್ಕೆ ಆಗುವುದಿಲ್ಲ ಎಂಬ ಮಾತನ್ನು ಮಂತ್ರಿಗಳು ಹೇಳಿದ್ದಾರೆ. ಇಷ್ಟು ದೊಡ್ಡ ಬ್ಯಾರಿಕೇಡ್ ಮಾಡುವುದಕ್ಕೆ ಆಗುವುದಿಲ್ಲ ಎಂಬ ಮಾತನ್ನು ಅವರು ಹೇಳುತ್ತಿದ್ದಾರೆ. ಮಾಡುವುದಕ್ಕೆ ಆಗುವುದಿಲ್ಲ ಎಂದರೆ ಕೊನೆಪಕ್ಷ ರೈತರಿಗಾದರೂ ಉಪಯೋಗವಾಗುವಷ್ಟು

ಅವರ ಬೆಳಿಗೆ ಏನು ಹಾನಿಯಾಗುತ್ತದೆ ಅಷ್ಟು ಪರಿಹಾರವನ್ನು ಕೊಡುವಂಥ ಕೆಲಸ ಆದರೂ ಮಾಡಬೇಕು. ಇದುವರೆಗೆ ನನ್ನ ಕ್ಷೇತ್ರದಲ್ಲಿ ಹತ್ತು ಜನರು ಸತ್ತಿದ್ದಾರೆ. ಮೊನ್ನೆ ನನಗೆ ರಸ್ತೆ ತಡೆಮಾಡಿ ಊರಿನೊಳಗೆ ಹೋಗಲಿಕ್ಕೆ ಬಿಡಲಿಲ್ಲ. ರಾತ್ರಿ ಹೊತ್ತು ಮೂತ್ರ ವಿಸರ್ಜನೆ ಮಾಡುವುದಕ್ಕೆ ಬಂದವನಿಗೆ ಆನೆ ಸಾಯಿಸಿದೆ. ರಾತ್ರಿ ಬಸ್ಸಿನಿಂದ ಇಳಿದು ಮನೆಗೆ ಹೋಗುತ್ತಿದ್ದಾಗ ಪಾಪ, ಅವನನ್ನು ಹುಡುಕಿಕೊಂಡು ಬಂದು ಸಾಯಿಸಿದೆ. ಕೆಣಕಿದ್ದಾರೆ ಅಂತ ಅಲ್ಲ, ಆನೆಯೇ ಹುಡುಕಿಕೊಂಡು ಬಂದು ಸಾಯಿಸುತ್ತಿದೆ. ಆದ್ದರಿಂದ ಅಧ್ಯಕ್ಷರೇ, ನಾನು ತಮ್ಮ ಮೂಲಕ ಸರ್ಕಾರವನ್ನು ಕೇಳುತ್ತಿದ್ದೇನೆ. ಪರಿಹಾರ ಕೊಡುವುದಾದರೆ ಸರಿಯಾಗಿ ಮಾನವೀಯತೆ ದೃಷ್ಟಿಯಿಂದ ಆದರೂ ಕೊಡುವಂಥ ವ್ಯವಸ್ಥೆ ಆಗಬೇಕೆಂದು ನಾನು ಹೇಳುತ್ತೇನೆ.

ಶ್ರೀ ಕೆ.ಎಚ್. ರಂಗನಾಥ್.- ತಮಗೆ ಗೊತ್ತು. ಲಕ್ಷ್ಮಣರಾವ್ ರಿಪೋರ್ಟ್ ಬರುವುದಕ್ಕೆ ಮುಂಚೆ ಬೆಂಗಳೂರನ್ನು ಇಷ್ಟು ದೊಡ್ಡದಾಗಿ ಬೆಳೆಯುವುದಕ್ಕೆ ಬಿಡಬಾರದು ಎಂದು ಇತ್ತು. ಈಗ ಅದು ಬೆಳೆದು ಕನಕಪುರ ಹತ್ತಿರ ಹತ್ತಿರ ಹೋಗಿದ್ದೀರಿ.

ಶ್ರೀ ಆರ್. ಅಶೋಕ್.- ಆಗ ಕಾರ್ಪೋರೇಷನ್ ಹತ್ತಿರ ಕಾಡು ಆಗಿರಲಿಲ್ಲ. ಕಾಡು ಇದ್ದದ್ದು ಬನ್ನೇರುಘಟ್ಟ ಹತ್ತಿರ. ಕಾರ್ಪೋರೇಷನ್ ಹತ್ತಿರ ಕಾಡು ಇರಲಿಲ್ಲ. ಅದು ಇಲ್ಲಿಂದ ನಲ್ವತ್ತು ಕಿಲೋಮೀಟರ್ ದೂರ ಇದೆ.

ಶ್ರೀ ಕೆ.ಎಚ್. ರಂಗನಾಥ್.- ಕಾರ್ಪೋರೇಷನ್ ಹತ್ತಿರ ಕಾಡು ಇರಲಿಲ್ಲ ಎಂಬುದು ನನಗೆ ಗೊತ್ತು. ಈಗ ಬೆಂಗಳೂರು ಕಾರ್ಪೋರೇಷನ್ ಲಿಮಿಟ್ ಅಲ್ಲಿಯವರೆಗೆ ಹೋಗಿದೆ, ಕನಕಪುರದವರೆಗೂ.

*****

## ಬಾಗೇಶಪುರ ಗಣಿ: ಒಂದು ಚರ್ಚೆ

21 ಮಾರ್ಚ್ 1979

ಶ್ರೀ ಹಾರ್ನಳ್ಳಿ ರಾಮಸ್ವಾಮಿ.- ಸ್ವಾಮಿ, ಈ ಬಾಗೇಶಪುರದ ಗಣಿಯನ್ನು ವಿಸ್ತರಿಸುವ ಸಂಬಂಧದಲ್ಲಿ ಬದಲಾವಣೆಗಳು ಮತ್ತು ರೂಪುರೇಖೆಗಳು ಏನು ಎಂಬುದನ್ನು ಹೇಳುವುದಕ್ಕೆ ಸಾಧ್ಯವೇ? ಈ ಬಗ್ಗೆ ಒಂದು ಫ್ಯಾಕ್ಟರಿಯನ್ನು ಹೊಸದಾಗಿ ಹಾಕುತ್ತೇವೆಂದು ತಾವು ಉತ್ತರ ಕೊಟ್ಟಿದ್ದೀರಿ. ಇದನ್ನು ಯಾವಾಗ ಹಾಕುತ್ತೀರಿ? ಇದರಿಂದ ಎಷ್ಟು ಜನರಿಗೆ ಉದ್ಯೋಗಾವಕಾಶ ಸಿಕ್ಕುತ್ತದೆ ಎನ್ನುವ ಬಗ್ಗೆ ತಾವು ವಿವರಗಳನ್ನು ಕೊಡುವುದಕ್ಕೆ ಸಾಧ್ಯವೇ?

ಶ್ರೀಕೆ.ಎಚ್. ರಂಗನಾಥ್.- ಈ ವಿಚಾರದಲ್ಲಿ ಎಂ.ಎಂ.ಆರ್. ಸಂಸ್ಥೆಯವರು ಈ ಒಂದು ಕಂಪನಿಯನ್ನು ಮಾಡಬೇಕೆಂದು ಉದ್ದೇಶ ಹೊಂದಿದ್ದಾರೆ. ಇದಕ್ಕೆ ಬಹಳ ಮಟ್ಟಿಗೆ ಸುಮಾರು 35-50 ಲಕ್ಷ ರೂಪಾಯಿಗಳಷ್ಟು ಕ್ಯಾಪಿಟಲ್ ಅಮೌಂಟ್ ಬೇಕಾಗುತ್ತದೆಂದು ಒಂದು ಅಂದಾಜು ಇದೆ, ಇದರಿಂದ ಶೇಕಡ 22 ರಷ್ಟು ರಿಟರ್ನ್ ಬರಬಹುದೆಂದು ಅಂದಾಜು ಕೂಡ ಇದೆ. ಆದರೆ ಇದರಿಂದ ಎಷ್ಟು ಜನಕ್ಕೆ ಉದ್ಯೋಗಾನುಕೂಲ ಆಗುತ್ತದೆ. ಎನ್ನತಕ್ಕಂಥ ಮಾಹಿತಿಯನ್ನು ಸದ್ಯಕ್ಕೆ ನಾನು ಹೇಳುವುದಕ್ಕಾಗುವುದಿಲ್ಲ.

ಶ್ರೀ ಹಾರ್ನಳ್ಳಿ ರಾಮಸ್ವಾಮಿ.- ಈ ಕಂಪನಿಯ ಮೂಲಕ ತಾವು ಯಾವ ಯಾವ ವಸ್ತುಗಳನ್ನು ತಯಾರು ಮಾಡಬೇಕೆಂದು ಯೋಚನೆ ಮಾಡಿದ್ದೀರಿ?

ಶ್ರೀ ಕೆ.ಎಚ್. ರಂಗನಾಥ್.- ಸ್ವಾಮಿ, ಬಾಗೇಶಪುರದ ಏರಿಯಾದಲ್ಲಿ ಕ್ಯಾವಲಿನ್ ಎನ್ನತಕ್ಕಂಥ ವಸ್ತು ಏನಿದೆ ಅದು ಸುಮಾರು 200 ಎಕರೆಗಳಷ್ಟು ಪ್ರದೇಶದಲ್ಲಿ ಸಿಕ್ಕುತಾ ಇದೆಯೆಂದು ಮಾಹಿತಿ ಇದೆ. ಆ ಏರಿಯಾದ ಮೇಲ್ಭಾಗದಲ್ಲಿ ಸುಮಾರು 10 ಮೀಟರ್ ಒಳಗೆ ಸಿಕ್ಕತಕ್ಕಂಥ ಫೆರೋಜಿನಸ್ ಕ್ಲೇ ಏನಿದೆ ಅದು ವೇಸ್ಟ್ ಆಗುತ್ತದೆ. ಅದನ್ನು ಉಪಯೋಗ ಮಾಡಿಕೊಂಡು ಪೈಪುಗಳನ್ನು ತಯಾರು ಮಾಡುವುದಕ್ಕಾಗಿ ಈ ಒಂದು ಕಂಪನಿಯನ್ನು ಮಾಡಬೇಕೆಂಬ ಉದ್ದೇಶ ಇದೆ. ಅದನ್ನು ನಾವು ಈಗ ಮಾಡುತ್ತಿದ್ದೇವೆ. ಈಗ ಸದ್ಯಕ್ಕೆ ಚೈನ ಕ್ಲೇ ಮತ್ತು ಅಲ್ಯುಮಿನಿಯಂ ಕ್ಲೇಯನ್ನು ಅಲ್ಲಿಂದ ತೆಗೆದು ಭದ್ರಾವತಿಯ ಕಬ್ಬಿಣದ ಕಾರ್ಖಾನೆಗೆ ನಾವು ಸಪ್ಲೈ ಮಾಡುತ್ತಿದ್ದೇವೆ. ಈಗ 3ನೇ ಹಂತದಲ್ಲಿ ಆ ಏರಿಯಾದ ಮೇಲ್ಭಾಗದಲ್ಲಿರತಕ್ಕಂಥ ಫೆರೋಜಿನಸ್ ಕ್ಲೇಯನ್ನು ತೆಗೆದನಂತರ ಮತ್ತು ಅಲ್ಯೂಮಿನಿಯಂ ಕ್ಲೇ, ಚೈನಾಕ್ಲೇಯನ್ನು ತೆಗೆದನಂತರ ಗ್ಲೇಸ್ ಟೈಲ್ಸ್‌ಗೆ ಅದನ್ನು ನಾವು ಹಾಕತಕ್ಕಂಥ ಕಾರ್ಖಾನೆಯಲ್ಲಿ ಡೈವರ್ಸಿಫೈ ಮಾಡಬಹುದೆಂದು ಹೇಳಿ ಅದನ್ನು ನಾವು ಮಾಡುತ್ತಿದ್ದೇವೆ.

ಶ್ರೀ ಹಾರ್ನಳ್ಳಿ ರಾಮಸ್ವಾಮಿ.- ಸ್ವಾಮಿ, ಬೆಂಗಳೂರು ಪಿಂಗಾಣಿ ಕಾರ್ಖಾನೆಯಲ್ಲಿ ಪಿಂಗಾಣಿ ವಸ್ತುಗಳನ್ನು ತಯಾರು ಮಾಡತಕ್ಕಂಥ ರೀತಿಯಲ್ಲಿ ತಾವು ಹಾಕತಕ್ಕಂಥ ಕಂಪನಿಯಲ್ಲಿ ಈ ಪಿಂಗಾಣಿ ಸಾಮಾನುಗಳನ್ನು ತಯಾರು ಮಾಡಿದರೆ ಗ್ರಾಮಾಂತರ ಪ್ರದೇಶಗಳಿಗೆ ಈ ಒಂದು ಕೈಗಾರಿಕೆಯನ್ನು ವಿಸ್ತರಿಸುವುದಕ್ಕೆ ಅವಕಾಶ ಮಾಡಿದಂತಾಗುತ್ತದೆ ಹಾಗೂ ಅನೇಕ ನಿರುದ್ಯೋಗಿ ಜನಗಳಿಗೆ ನೌಕರಿಯನ್ನು ಒದಗಿಸಿದ ಹಾಗೆ ಆಗುತ್ತದೆ ಮತ್ತು ಅಲ್ಲಿ ತಯಾರಾಗತಕ್ಕಂಥ ವಿವಿಧ ಸಾಮಾನುಗಳನ್ನು ಉಪಯೋಗಿಸಿದ ಹಾಗೆ ಆಗುತ್ತದೆ. ಈ ಬಗ್ಗೆ ಒಂದು ಸಮಗ್ರವಾದ ಯೋಜನೆಯನ್ನು ರೂಪಿಸಿ, ಕೋಟ್ಯಾಂತರ ರೂಪಾಯಿಗಳನ್ನು ಹಣವನ್ನು ಖರ್ಚು ಮಾಡಿ ಸಹಸ್ರಾರು ಮಂದಿಗೆ ಉದ್ಯೋಗವನ್ನು ಕೊಡುವುದಕ್ಕೆ ಸಾಧ್ಯವಿದೆ. ಈ ಬಗ್ಗೆ ಒಂದು ಯೋಜನೆಯನ್ನು ರೂಪಿಸಿ ಸರ್ಕಾರದವರು ಮುಂದೆ ಪರಿಶೀಲನೆಗಾಗಿ ಇಡುತ್ತೀರಾ?

ಶ್ರೀ ಕೆ.ಎಚ್. ರಂಗನಾಥ್.- ನಾನು ಈಗಾಗಲೇ ಹೇಳಿದ ಹಾಗೆ ಒಂದು ಹಂತದಲ್ಲಿ ಇದನ್ನು ಉಪಯೋಗ ಮಾಡಿಕೊಳ್ಳುತ್ತಾ ಇದ್ದೇವೆ. ಮಾನ್ಯ ಸದಸ್ಯರು ಹೇಳತಕ್ಕಂಥ ಅಭಿಪ್ರಾಯ ಏನಿದೆ ಅದು ನಾವು ಮುಂದೆ ಯೋಚನೆ ಮಾಡತಕ್ಕಂಥ ವಿಚಾರವಾಗಿದೆ. ಅದಕ್ಕೆ ಪೂರ್ವಭಾವಿಯಾಗಿ ಈಗ ಒಂದು ಕಂಪನಿಯನ್ನು ಪ್ರಾರಂಭ ಮಾಡುತ್ತಿದ್ದೇವೆ. ಕಂಪನಿಯಿಂದ

ಸುಮಾರು 10 ಮೀಟರ್‌ಗಳ ವಿಸ್ತಾರದಲ್ಲಿ ಫೆರೋಜಿನಸ್ ಕ್ಲೇ ಸಿಕ್ಕುತ್ತಿದೆ ಎಂದು ನಾನು ಏನು ಹೇಳಿದೆ ಅದನ್ನು ಪ್ರತಿವರ್ಷ 3500 ಟನ್‌ಗಳಷ್ಟು ಬಳಸುವುದರಿಂದ ಅಲ್ಲಿ 75 ವರ್ಷಗಳ ಕಾಲ ನಾವು ಅಲ್ಲಿ ಕಾರ್ಖಾನೆಯನ್ನು ನಡೆಸುವುದಕ್ಕೆ ಸಾಧ್ಯ ಎನ್ನತಕ್ಕಂಥ ಅಂಶವೂ ಗೊತ್ತಾಗುತ್ತದೆ. ಅದನ್ನು ಡೈವರ್ಸಿಫೈ ಮಾಡಿ ಗ್ಲೇಸ್ ಟೈಲ್ಸ್ ಮಾಡತಕ್ಕಂಥ ಸಾಧ್ಯತೆ ಇದೆಯೆಂದು ಸಹ ಗೊತ್ತಾಗಿದೆ. ಈ ಕಂಪನಿ ಪ್ರಾರಂಭವಾದ ಮೇಲೆ ಹಂತಹಂತದಲ್ಲಿ ಮಾನ್ಯ ಸದಸ್ಯರು ಹೇಳತಕ್ಕಂಥ ವಿಚಾರವನ್ನು ಯೋಚನೆ ಮಾಡಬಹುದು.

*****

## ಕೊಲ್ಲಿ ದೇಶಗಳಿಗೆ ನೀರು ರಫ್ತು

21 ಮಾರ್ಚ್ 1979

ಶ್ರೀ ಬಿ.ವಿ. ಕಕ್ಕಿಲಾಯ.- ಮಾನ್ಯ ಅಧ್ಯಕ್ಷರೆ, ಗಲ್ಫ್ ಕಂಟ್ರೀಸ್‌ಗೆ ದಕ್ಷಿಣ ಕನ್ನಡ ಜಿಲ್ಲೆಯಿಂದ ನೀರನ್ನು ರಫ್ತು ಮಾಡಲಿಕ್ಕೆ ಕೇಂದ್ರ ಸರ್ಕಾರದವರು ಯೋಜನೆಯನ್ನು ಮಾಡಿದ್ದಾರೆಯೇ? ನೀರನ್ನು ರಫ್ತು ಮಾಡುವ ವಿಚಾರದ ಬಗ್ಗೆ ಒಂದು ತೀರ್ಮಾನಕ್ಕೆ ಬಂದಿರುತ್ತಾರೆಂಬ ಸುದ್ದಿ ಪತ್ರಿಕೆಯಲ್ಲಿ ಬಂದಿರುತ್ತದೆ. ಈ ವಿಚಾರ ರಾಜ್ಯ ಸರ್ಕಾರದ ಗಮನಕ್ಕೆ ಬಂದಿರುತ್ತದೆಯೇ? ಮಳೆಗಾಲದಲ್ಲಿ ನೀರು ಇರುತ್ತದೆ, ಬೇಸಿಗೆ ಕಾಲದಲ್ಲಿ ಕುಡಿಯಲಿಕ್ಕೂ ನೀರು ಸಿಗುವುದಿಲ್ಲ. ಆದ್ದರಿಂದ ನೀರನ್ನು ರಫ್ತು ಮಾಡಿಬಿಟ್ಟರೆ ಬಹಳ ತೊಂದರೆಯಾಗುತ್ತದೆ. ಇದು ಸೂಕ್ತವೂ ಅಲ್ಲ. ಆದ್ದರಿಂದ ಕೇಂದ್ರ ಸರ್ಕಾರಕ್ಕೆ ಈ ವಿಷಯವನ್ನು ತಿಳಿಸುತ್ತೀರಾ ಎಂದು ಕೇಳುತ್ತೇನೆ.

ಶ್ರೀ ಕೆ.ಎಚ್. ರಂಗನಾಥ್.- ಸರ್ಕಾರದವರು ಅಂಥ ಯಾವುದೇ ತೀರ್ಮಾನವನ್ನು ತೆಗೆದುಕೊಂಡಿಲ್ಲ. ಆದರೆ ರೊಬೆಲೋ ಎನ್ನತಕ್ಕಂಥವರು ಕೇಂದ್ರ ಸರ್ಕಾರದ ಮಂತ್ರಿಗಳಾದ ಶ್ರೀ ಜಾರ್ಜ್ ಫರ್ನಾಂಡಿಸ್ ಅವರನ್ನು ಕುರಿತು ನೀರನ್ನು ಒದಗಿಸಿಕೊಡಬೇಕೆಂದು ಕೇಳಿರುತ್ತಾರೆ. ಆ ವಿಚಾರವನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಟ್ಟಿದ್ದಾರೆ. ಅದರ ಮೇಲೆ ವಿಚಾರ ಮಾಡುತ್ತಿದ್ದೇವೆಯೇ ಹೊರತು ನೀರನ್ನು ರಫ್ತು ಮಾಡತಕ್ಕಂಥ ವಿಚಾರವನ್ನು ಸರ್ಕಾರದವರು ತೆಗೆದುಕೊಂಡಿಲ್ಲ. ಪತ್ರಿಕೆಗಳಲ್ಲಿ ಏನಾದರೂ ಸುದ್ದಿ ಇದ್ದರೆ ಅದು ಪತ್ರಿಕಾ ಸುದ್ದಿಯಾಗಿಯೇ ಉಳಿಯಬೇಕಾಗುತ್ತದೆ.

ಶ್ರೀ ಬಿ.ವಿ. ಕಕ್ಕಿಲಾಯ.- ಬೆಂಗಳೂರಿನಲ್ಲಿಯೇ ನೀರಿನ ಅಭಾವ ಎಷ್ಟರ ಮಟ್ಟಿಗೆ ಇರುತ್ತದೆಂಬುದು ತಮಗೆ ತಿಳಿದಿರುವ ವಿಚಾರವಾಗಿರುತ್ತದೆ. ಉದಾಹರಣೆಗೆ ಜನರಲ್ ಹಾಸ್ಟೆಲ್, ಮತ್ತು ಲೆಜಿಸ್ಲೇಚರ್ ಹೋಮ್ ತೆಗೆದುಕೊಂಡರೆ ಎಷ್ಟೋ ಸಂದರ್ಭಗಳಲ್ಲಿ ಕುಡಿಯಲಿಕ್ಕೆ, ಸ್ನಾನಕ್ಕೆ ನೀರು ಇರುವುದಿಲ್ಲ. ಆದ್ದರಿಂದ ನಮ್ಮಲ್ಲೇ ನೀರಿಗೆ ಅಭಾವ ಇರುವಾಗ ಬೇರೆ ರಾಜ್ಯಗಳಿಗೆ ನೀರನ್ನು ಒದಗಿಸುವ ಯೋಚನೆಯನ್ನು ಏತಕ್ಕೆ ಮಾಡಬೇಕು.

ಶ್ರೀ ಕೆ.ಎಚ್. ರಂಗನಾಥ್.- ಶ್ರೀ ರೊಬೆಲೋ ಎನ್ನತಕ್ಕಂಥವರು ಕೇಂದ್ರ ಸಚಿವರಾದ ಶ್ರೀ ಜಾರ್ಜ್ ಫರ್ನಾಂಡೀಸ್‌ರವರಿಗೆ ಕುಂದಾಪುರದ ಬೇಡ್‌ಕಣಿ ಕಣಿವೆ ನದಿಗೆ ಒಂದು ಬ್ಯಾರೇಜ್ ಕಟ್ಟಿ ನೀರನ್ನು ಸ್ಟೋರ್ ಮಾಡಿ ಕಳುಹಿಸಿಕೊಡುವ ಒಂದು ವ್ಯವಸ್ಥೆಯನ್ನು ಮಾಡಿ ಎಂದು ಪತ್ರವನ್ನು ಬರೆದಿರುತ್ತಾರೆ. ಕೇಂದ್ರದ ಮಂತ್ರಿಗಳು ರಾಜ್ಯ ಸರ್ಕಾರಕ್ಕೆ ಪತ್ರವನ್ನು ಕಳುಹಿಸಿಕೊಟ್ಟಿದ್ದಾರೆ. ಅದು ಅದೇ ಸ್ಟೇಜ್‌ನಲ್ಲಿ ಇರುತ್ತದೆಯೇ ಹೊರತು ನಾವು ಏನು ಒಪ್ಪಿಕೊಂಡಿಲ್ಲ. ಮತ್ತೆ ನಾವು ನೀರನ್ನು ಮಾರಾಟ ಮಾಡಲಿಕ್ಕೂ ಹೊರಟಿಲ್ಲ. ಮಾನ್ಯ ಸದಸ್ಯರ ಅಭಿಪ್ರಾಯವೇನು ಇರುತ್ತವೆ ಮಳೆಗಾಲದಲ್ಲಿ ನೀರು ಚೆನ್ನಾಗಿದ್ದು, ಬೇಸಿಗೆಯಲ್ಲಿ ನೀರು ಇರುವುದಿಲ್ಲ ಎನ್ನುವ ವಿಷಯವನ್ನು ಸರ್ಕಾರದವರು ಗಮನಕ್ಕೆ ತೆಗೆದುಕೊಂಡು ಕೇಂದ್ರ ಸರ್ಕಾರದೊಡನೆ ವ್ಯವಹಾರ ಮಾಡತಕ್ಕಂಥ ಸಂದರ್ಭ ಬಂದರೆ ವಿಚಾರ ಮಾಡುತ್ತೇವೆ ಎನ್ನುವ ವಿಷಯವನ್ನು ಈ ಸಂದರ್ಭದಲ್ಲಿ ಹೇಳುತ್ತೇನೆ.

*****

## ಆನೆಗಳಿಂದ ರೈತರಿಗೆ ತೊಂದರೆ

30 ಅಕ್ಟೋಬರ್ 2000

ಶ್ರೀ ಕೆ.ಎಚ್. ರಂಗನಾಥ್:- ಮಾನ್ಯ ಅಧ್ಯಕ್ಷರೇ, ಮಾನ್ಯ ಸಿಂಧ್ಯರವರು ಹೇಳತಕ್ಕಂಥಾದ್ದು ಬಹಳ ಸೂಕ್ತವಾದ ಸಲಹೆ. ಇದರಲ್ಲಿ ಮೂರು ವಿಚಾರ ಏನಿದೆ ಅದರಂತೆ ಕಂದಕ, ಕಲ್ಲುಗೋಡೆ, ತಂತಿಬೇಲಿ ಹಾಕುವುದರಿಂದಲೇ ಇದಕ್ಕೆ ಪರಿಹಾರ ದೊರೆಯುತ್ತದೆಂದು ನಾನು ನಂಬಿಲ್ಲ. ಮತ್ತೆ ನಾನು ಅಧಿಕಾರಿಗಳನ್ನು ಸಂಪರ್ಕ ಮಾಡಿ ತಿಳಿದುಕೊಂಡಹಾಗೆ, ಆನೆ ಈ ವರ್ಷ ಒಂದುಸಾರಿ ಎಲ್ಲಿ ಹೋಗಿ ತೆಂಗಿನಕಾಯಿ, ಭತ್ತ ಅಥವಾ ಬಾಳೆಕಾಯಿ ತಿನ್ನುತ್ತದೋ ಮುಂದಿನಸಾರಿಯೂ ಕೂಡ ಅಲ್ಲಿಗೆ ಹೋಗುತ್ತದೆ. ಅದೇ ರೈತ ಮತ್ತೆ ತೊಂದರೆಗೆ ಒಳಗಾಗುತ್ತಾನೆ ಎನ್ನುವ ವಿಚಾರ ಕೂಡ ಸರ್ಕಾರದ ಗಮನಕ್ಕೆ ಬಂದಿದೆ. ಆದ್ದರಿಂದ, ಈ ಮೂರು ಕಾರ್ಯಕ್ರಮಗಳನ್ನು ನಾವು ಏನು ಹಾಕಿಕೊಂಡಿದ್ದೇವೆ. ಇದರ ಜೊತೆಗೆ ವನ್ಯಜೀವಿ ಕ್ಷೇತ್ರದಲ್ಲಿ ಕೆಲಸಮಾಡಿದಂಥ ತಜ್ಞರು ನಮ್ಮ ಇಲಾಖೆಯಲ್ಲಿದ್ದಾರೆ. ಅವರನ್ನು, ರೈತರನ್ನು ಮತ್ತು ಮಾನ್ಯ ಸಿಂಧ್ಯರವರು ಹೇಳಿದಹಾಗೆ ಬೇರೆಯವರನ್ನೂ ಕರೆದು ಸಭೆ ಮಾಡಿ, ಅವರೆಲ್ಲ ಏನು ಸಲಹೆ ಕೊಡುತ್ತಾರೆಂಬುದನ್ನು ತಿಳಿದುಕೊಳ್ಳುತ್ತೇನೆ. ಈ ಬಗ್ಗೆ ದೂರು ಇರುವ ರೀತಿಯಲ್ಲಿ ಅದಕ್ಕೆ ಬೇಕಾಗಿರತಕ್ಕ ಆಹಾರ ಅಲ್ಲಿಯೇ ಸಿಗುವ ರೀತಿಯಲ್ಲಿ ವ್ಯವಸ್ಥೆಯಾದರೆ ಬಹಳಮಟ್ಟಿಗೆ ಇಂತಹ ತೊಂದರೆಗಳು ಕಡಿಮೆಯಾಗುತ್ತದೆ. ಅದನ್ನು ಫಾರೆಸ್ಟ್‌ನಲ್ಲಿ ಮಾಡುವುದಕ್ಕೆ ಸಾಧ್ಯವಾಗುತ್ತದೆ. ಆದರೆ, ಬೆಂಗಳೂರಿನ ನ್ಯಾಷನಲ್ ಪಾರ್ಕಿನ ಹತ್ತಿರದಲ್ಲಿ ಮಾಡುವಂಥಾದ್ದು ಕಷ್ಟ ಎಂಬುದಾಗಿ ನನ್ನ ವಿಚಾರವಿದೆ.

*****

# ಆನೆಗಳಿಗೆ ಬುದ್ಧಿ ಹೇಳುವುದು ಹೇಗೆ?

30 ಅಕ್ಟೋಬರ್ 2000

ಶ್ರೀ ಕೆ.ಎಚ್. ರಂಗನಾಥ್:- ಮಾನ್ಯ ಅಧ್ಯಕ್ಷರೇ, ಇದು ಬಹಳ ಕಷ್ಟದ ಪ್ರಶ್ನೆ, ಆನೆಗೆ ಬುದ್ಧಿ ಹೇಳುವುದಕ್ಕೆ ಎಲ್ಲಿ ಆಗುತ್ತದೆ?

ಶ್ರೀ ಎಸ್. ಸುರೇಶ್‌ಕುಮಾರ್:- ಮಾನ್ಯ ಅಧ್ಯಕ್ಷರೇ, ಆನೆಗಲ್ಲ ಬುದ್ಧಿ ಹೇಳಬೇಕಾಗಿರುವುದು! ನಾವು ನಮ್ಮ ಜನಕ್ಕೆ ಬುದ್ಧಿ ಹೇಳಬೇಕು. ಅಲ್ಲಿ ಯಾರು ಅಕ್ರಮ ಗಣಿಗಾರಿಕೆ ಮಾಡುತ್ತಿದ್ದಾರೆ, ಅವರಿಗೆ ಆದೇಶ ಕೊಟ್ಟು, ಬುದ್ಧಿ ಹೇಳಬೇಕು.

ಶ್ರೀ ಕೆ.ಎಚ್. ರಂಗನಾಥ್:- ಮಾನ್ಯ ಅಧ್ಯಕ್ಷರೇ, ಮಾನ್ಯ ಸದಸ್ಯರ ಅಭಿಪ್ರಾಯ ಏನಿದೆ, ಹಾಗೆ ಅಲ್ಲಿ ಅದು ನಡೆಯುತ್ತಾ ಇದೆ. ಅಕ್ರಮ ಗಣಿಗಾರಿಕೆ, ಗ್ರಾನೈಟ್ ಸ್ಫೋಟ ಮಾಡತಕ್ಕಂಥಾದ್ದು ಅಲ್ಲಿ ಬಹಳ ದಿವಸಗಳಿಂದ ಆಗುತ್ತಾ ಇದೆ. ಡೈನಾಮಿಟ್ ಇಟ್ಟು ಗಲಾಟೆ ಮಾಡುವುದರಿಂದ, ಆನೆಗಳು ಓಡಿ ಬಂದುಬಿಡುತ್ತವೆ. ಅದರ ಜೊತೆಗೆ ಸೆಪ್ಟೆಂಬರ್ ಮತ್ತು ಫೆಬ್ರವರಿಯಲ್ಲಿ ಹಾರ್ವೆಸ್ಟಿಂಗ್ ಸೀಸನ್ ಮತ್ತೆ ಆನೆ ಓಡಾಡತಕ್ಕ ಜಾಗವನ್ನು ನಾವೆಲ್ಲಾ ಸ್ವಲ್ಪ ಚಿಕ್ಕದಾಗಿ ಮಾಡಿದ್ದೇವೆ, ಅದನ್ನು ಒತ್ತುವರಿ ಮಾಡಿಕೊಂಡಿದ್ದೇವೆ. ವ್ಯವಸಾಯ ಮಾಡುತ್ತಿದ್ದೇವೆ. ಆ ಜಾಗ ಹತ್ತಿರ, ಹತ್ತಿರ ಹೋಗುತ್ತಾ ಇದೆ. ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನ ಬಂದಮೇಲೆ ಅಲ್ಲಿ ಪ್ರಾಜೆಕ್ಟ್ ಬರುತ್ತಾ ಇವೆ. ಇದರಿಂದಾಗಿ ಅಲ್ಲಿಯ ಜಾಗ ಸ್ವಲ್ಪ ಸಂಕುಚಿತವಾಗಿದೆ.

ಹೀಗಾಗಿ, ಅವುಗಳು ಓಡಾಡತಕ್ಕ ಜಾಗ ಕಡಿಮೆಯಾದ್ದರಿಂದ, ಬೇರೆ ಕಡೆಗಳಿಗೆ ಬರುತ್ತಾ ಇವೆ. ಇದನ್ನು ತಡೆಹಿಡಿಯುವುದಕ್ಕೆ ನಾವು ಸೂಕ್ತಕ್ರಮಗಳನ್ನು ತೆಗೆದುಕೊಂಡಿದ್ದೇವೆ. ಅಲ್ಲಿ ಕಂದಕ ತೋಡುತ್ತಾ ಇದ್ದೇವೆ, ಸೋಲಾರ್ ಫೆನ್ಸಿಂಗ್ ಹಾಕುತ್ತಿದ್ದೇವೆ, ಮತ್ತೆ ದೊಡ್ಡದಾಗಿ ಕಲ್ಲುಗೋಡೆ ಕಟ್ಟುತ್ತಾ ಇದ್ದೇವೆ.

ಆದರೆ, ತಾವೇನು ಅವರಿಗೆ ಬುದ್ಧಿ ಹೇಳಬೇಕೆಂದು ಹೇಳಿದ್ದೀರಿ, ಅದು ದೊಡ್ಡ ಪ್ರಶ್ನೆ. ಅವರೆಲ್ಲಾ ಕೋರ್ಟಿಗೆ ಹೋಗುತ್ತಾರೆ. ನಮ್ಮಿಂದ ಅವರಿಗೆ ನೋಟೀಸ್ ಸಿಕ್ಕಿದರೆ ಸಾಕು, ಕೋರ್ಟಿಗೆ ಹೋಗಿ ಸ್ಟೇ ತರುತ್ತಾರೆ. ಇಲ್ಲಿ ಇದೇ ತೊಂದರೆಯಾಗಿರುವುದು.

*****

# ರಾಜ್ ಅಪಹರಣ: ಹೌದಪ್ಪ ಅಲ್ಲಪ್ಪಗಳ ಚಾವಡಿ!

20 ಆಕ್ಟೋಬರ್ 2000

ಶ್ರೀ ಕೆ.ಎಚ್. ರಂಗನಾಥ್:- ಮಾನ್ಯ ಅಧ್ಯಕ್ಷರೇ, ನಾನು ಅವರ ಪ್ರಸ್ತಾವವನ್ನು ತಂದಿದ್ದೇನೆ. ಇದು ಸಬ್‌ಜ್ಯುಡೀಸ್‌ನ ವ್ಯಾಪ್ತಿಗೆ ಬರುವುದಿಲ್ಲವೆಂದು ಯಾರಿಗೂ ಕೂಡ ಹೇಳುವುದುಕ್ಕೆ ಆಗುವುದಿಲ್ಲ. ನಾನು ಬೇಕಾದರೆ ಮತ್ತೊಮ್ಮೆ ಓದುತ್ತೇನೆ. ನರಹಂತಕ, ದಂತಚೋರ ಈ ರಾಜ್ಯದ ಐದು ಕೋಟಿ ಜನರ ಕಣ್ಮಣಿಯಾಗಿರತಕ್ಕಂಥ ಡಾ|| ರಾಜ್‌ಕುಮಾರ್‌ರವರನ್ನು ಅಪಹರಿಸಿ....... ಎಂಬುದು ವಿಷಯ. ಇದಕ್ಕೆ ಸಂಬಂಧಪಟ್ಟಂತೆ ಮುಂದೆ ವಿಷಯವಿದೆ. ಇಲ್ಲಿ ಅಪಹರಿಸಿದ್ದು ಆಯಿತು. ಅಪಹರಣವಾಗಿ ಹೋದಮೇಲೆ ಅವರಿಂದ ಒಂದು ಕ್ಯಾಸೆಟ್ ಬಂದಿತ್ತು. ಅದರಲ್ಲಿ ಅವರ ಕಂಡೀಶನ್ಸ್ ಮುಂತಾಗಿ ಎಲ್ಲವೂ ಪ್ರಚಾರವಾಗಿ ಪತ್ರಿಕೆಗಳೆಲ್ಲದರಲ್ಲಿಯೂ ಬಂದಿದೆ. ಅದರಲ್ಲಿ ಟಾಡಾ ಕಾಯಿದೆಯಡಿಯಲ್ಲಿರತಕ್ಕಂಥವರನ್ನು ಬಿಡುಗಡೆ ಮಾಡಬೇಕೆಂದು ಮುಂತಾಗಿ ಕೆಲವು ಕಂಡೀಶನ್‌ಗಳನ್ನು ಹೇಳಿದ್ದಾರೆ. ಸರ್ಕಾರವು ಡಾ|| ರಾಜ್‌ಕುಮಾರ್‌ರವನ್ನು ಅತ್ಯಂತ ಸುರಕ್ಷಿತವಾಗಿ ಬಿಡುಗಡೆ ಮಾಡಬೇಕೆಂಬ ದೃಷ್ಟಿಯಿಂದ ಕೆಲವು ತೀರ್ಮಾನಗಳನ್ನು ತೆಗೆದುಕೊಂಡಿತು. ಅದರ ಪ್ರಕಾರ ಟಾಡಾ ಕೈದಿಗಳ ಬಿಡುಗಡೆಯಾಯಿತು. ಈಗ ಆ ವಿಚಾರವೇ ಕೋರ್ಟಿನ ಮುಂದೆ ಇದೆ. ಹೀಗೆ ಇರುವಾಗ ಡಾ|| ರಾಜ್‌ಕುಮಾರ್ ವಿಚಾರವನ್ನು ಎಲ್ಲಿ ಮುಟ್ಟದೆ ಭಾಷಣ ಮಾಡಲು ಸಾಧ್ಯವಾಗುತ್ತದೆ?

ಶ್ರೀ ಡಿ.ವಿ. ಸದಾನಂದಗೌಡ:- ಹಾಗಾದರೆ ಹೈಕೋರ್ಟ್‌ನಲ್ಲಿ ಯಾವುದೇ ಲ್ಯಾಂಡ್ ರಿಫಾರ್ಮ್ಸ್ ಆಕ್ಟ್ಸ್ ಕೇಸ್‌ಗಳು ಇರುವಾಗ ನಾವು ಇಲ್ಲಿ ಮಾತನಾಡುವ ಹಾಗಿಲ್ಲವಲ್ಲ? ಕಾನೂನು ವ್ಯಾಪ್ತಿಯಲ್ಲಿ ಬರುವ ಯಾವುದೇ ವಿಚಾರವನ್ನು ನಾವು ಈ ಸಭೆಯಲ್ಲಿ ಪ್ರಸ್ತಾಪ ಮಾಡುವ ಹಾಗಿಲ್ಲ?

ಶ್ರೀ ಕೆ.ಎಚ್. ರಂಗನಾಥ್:- ನಾವು ಇಲ್ಲಿ ರೆಗ್ಯುಲರ್ ಆಗಿರತಕ್ಕಂಥ ವಿಚಾರಗಳಲ್ಲಿ ಮಾತನಾಡೋಣ. ಈ ಚಾಪ್ಟರ್ ಏನಿದೆ ಪ್ರತ್ಯೇಕವಾಗಿರತಕ್ಕಂಥ ಚಾಪ್ಟರ್ ಆಗಿದೆ. ತಾವುಗಳು ಕಾಲ್ ಅಂಡ್ ಶಕ್‌ಧರ್ ತೆಗೆದು ಓದಿ ನೋಡಬಹುದು. ಇದೊಂದು ಪ್ರತ್ಯೇಕವಾದ ಚಾಪ್ಟರ್. ಇದು ಅಡ್‌ಜರ್ನ್‌ಮೆಂಟ್ ಮೋಷನ್‌ಗೆ ಸಂಬಂಧಪಟ್ಟ ಚಾಪ್ಟರ್. ತಮ್ಮ ಇನ್‌ಹರೆಂಟ್ ಪವರ್ಸ್‌ನ್ನು ತೆಗೆದುಕೊಂಡು ಈ ಚಾಪ್ಟರ್‌ನ್ನು ನಾನು ತೆಗೆದುಕೊಳ್ಳುತ್ತೇನೆ ಎಂದು ಸಭೆಯ ಮುಂದಿಟ್ಟು ಇದರ ಅಭಿಪ್ರಾಯವನ್ನು ತೆಗೆದುಕೊಂಡು ಬಹುಮತ ಬಂದರೆ ಆಗಬಹುದು. ರೂಲ್ಸ್‌ನ್ನು ನಾವು ಜಾರಿ ಮಾಡದೇ ಇರತಕ್ಕಂಥ ಸಂದರ್ಭ ಬಂದಾಗ ರೂಲ್ಸ್‌ನ್ನು ಅಪ್ಲೈ ಮಾಡಬಾರದು ಎಂಬ ಅಭಿಪ್ರಾಯ ಬಂದಾಗ ಸಭೆಯ ಅಪ್ಪಣೆಯನ್ನು ತೆಗೆದುಕೊಳ್ಳಬೇಕು. ಈಗ ನಾವು ಆರು ಗಂಟೆಯವರೆಗೆ ಕುಳಿತುಕೊಳ್ಳಬೇಕಾಗಿರುವುದನ್ನು

ಆರೂವರೆ ಗಂಟೆಯವರೆಗೆ ಎಂದು ಬದಲಾವಣೆ ಮಾಡಬೇಕಾದರೆ ಸಭೆಯ ಒಪ್ಪಿಗೆಯನ್ನು ಪಡೆದುಕೊಳ್ಳಬೇಕಾಗುತ್ತದೆ. ಆಗ ಮಾತ್ರ ನಾವು ಮಾತನಾಡಿದ್ದು ಪ್ರೊಸೀಡಿಂಗ್ಸ್‌ಗೆ ಹೋಗುತ್ತದೆ. ಇಲ್ಲವಾದಲ್ಲಿ ಇಲ್ಲ. ಇದು ಸ್ಟ್ರಿಕ್ಟ್ ಆಗಿ ರೂಲ್ಸ್ ಫಾಲೋ ಮಾಡುವ ವಿಚಾರಕ್ಕೆ ಸಂಬಂಧಪಟ್ಟದ್ದು. ಇಲ್ಲವಾದರೆ ಹೌದಪ್ಪನ ಚಾವಡಿಯಲ್ಲಿ ಹೌದಪ್ಪ, ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪ ಎನ್ನುವ ರೀತಿಯಲ್ಲಿ ಮಾತನಾಡುವುದಾದರೆ ಆಗಬಹುದು.

*****

## ರಾಜ್ಯದಲ್ಲಿ ಅರಣ್ಯ ಸಂರಕ್ಷಣೆ

ಶ್ರೀ **ಗುರುಸ್ವಾಮಿ** ಎ.ಎಸ್.(ಚಾಮುಂಡೇಶ್ವರಿ) ಅವರ ಪ್ರಶ್ನೆಗಳಿಗೆ ಉತ್ತರ.

ಶ್ರೀ **ಕೆ.ಎಚ್. ರಂಗನಾಥ್** (ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಸಚಿವರು) :

ಅ) ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಅರಣ್ಯ ಸಂರಕ್ಷಣಾ ಕಾಯ್ದೆ 1980ರ ಪ್ರಕಾರ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಿ ನಿಯಮಗಳಳತೆ ಕೇಂದ್ರ ಸರ್ಕಾರದ ಪೂರ್ವಾನುಮತಿಯನ್ನು ಪಡೆದು ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡಲಾಗುತ್ತಿದೆ. ಹೀಗೆ ಬಿಡುಗಡೆ ಮಾಡಲಾದ ಅರಣ್ಯ ಭೂಮಿಯ ಬದಲು ಪರ್ಯಾಯ ಅರಣ್ಯೀಕರಣವನ್ನು ಅರಣ್ಯೇತರ ಜಮೀನು ಮತ್ತು ಕೆಲವು ಸಂದರ್ಭಗಳಲ್ಲಿ ಎರಡು ಪಟ್ಟು ಅರಣ್ಯೀಕರಣವನ್ನು ಅರಣ್ಯ ಜಮೀನಿನಲ್ಲಿ ಕೈಗೊಳ್ಳಲಾಗುತ್ತಿದೆ. ಅಲ್ಲದೆ ಕೇಂದ್ರ ಸರ್ಕಾರವು ಅಂತಹ ಪ್ರಕರಣಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪಾಲಿಸಲಾಗುತ್ತಿದೆ.

ಆ) ಬಳ್ಳಾರಿ ಜಿಲ್ಲೆಯಲ್ಲಿ 4 ಪ್ರಕರಣಗಳಲ್ಲಿ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ 1 ಪ್ರಕರಣದಲ್ಲಿ ಅರಣ್ಯ ಸಂರಕ್ಷಣಾ ನಿಯಮದ ಉಲ್ಲಂಘನೆಯಾಗಿದೆ. (ಸರ್ವೋಚ್ಚನ್ಯಾಯಾಲಯದಲ್ಲರುವ ಅತಿಕ್ರಮಣಗಳನ್ನು ಹೊರತುಪಡಿಸಿ)

ಇ) ಬಹಳ ಕಾಲದಿಂದ ವಿಲೇವಾರಿಯಾಗದೇ ಇರುವ ಪ್ರಕರಣಗಳು ಯಾವುದೂ ಇರುವುದಿಲ್ಲ.

ಈ) ಕೆಂದ್ರ 1980ರ ಅರಣ್ಯ ಸಂರಕ್ಷಣಾ ಕಾಯ್ದೆಯಡಿಯಲ್ಲಿ ಕೇಂದ್ರ ಸರ್ಕಾರದ ಪೂರ್ವಾನುಮತಿಪಡೆದ ಒಟ್ಟು 33 ಪ್ರಕರಣಗಳಲ್ಲಿ ಸರ್ಕಾರದ ಆದೇಶದ ಪ್ರಕಾರ ಅರಣ್ಯ ಪ್ರದೇಶವನ್ನು ಗುತ್ತಿಗೆ ನೀಡಲಾಗಿರುವ ಗುತ್ತಿಗೆದಾರರಿಂದ ನಿಗಧಿತ ವರ್ಷಿಕ ಗೇಣಿ ಬಾಡಿಗೆಯನ್ನು ವಸೂಲಿ ಮಾಡಲಾಗುತ್ತದೆ. ಇ ರೀತಿ 2 ವರ್ಷಗಳಿಂದ ಸರ್ಕಾರಕ್ಕೆ ಬಂದ ಆದಾಯದ ವಿವರ ಈ ಕೆಳಗಿನಂತಿದೆ.

| | | |
|---|---|---|
| 1998-99 | 10 | ರೂ. 2,08.000.00 |
| 1999-2000 | 23 | ರೂ 11,14,000.00 |

# ಬೆಂಗಳೂರು ಸಾರಿಗೆ ದಟ್ಟಣೆ

24 ಆಗಸ್ಟ್ 1974

ಶ್ರೀ ಕೆ.ಎಚ್. ರಂಗನಾಥ್ (ಸಾರಿಗೆ ಹಾಗೂ ವಸತಿ ಶಾಲೆಗಳ ಮಂತ್ರಿಗಳು).- ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಸದಸ್ಯರಾದ ಶ್ರೀಮಾನ್ ಟಿ.ಆರ್. ಶಾಮಣ್ಣನವರು ಈ ಸಭೆಯ ಮುಂದೆ ಏನೊಂದು ನಿರ್ಣಯವನ್ನು ತಂದಿದ್ದಾರೆ. ಅದರಲ್ಲಿ ಅವರು ತಮ್ಮ ಮನಸ್ಸಿನಲ್ಲಿ ಬೆಂಗಳೂರಿನ ನಾಗರೀಕರು ಬಸ್ಸುಗಳಲ್ಲಿ ಪ್ರಯಾಣ ಮಾಡತಕ್ಕವರು, ಬಸ್ಸುಗಳು ನಂಬಿಕೊಂಡಿರತಕ್ಕ ಪ್ರಯಾಣಿಕರಿಗೆ ಏನು ಸ್ಥಿತಿ ಇದೆ ಅವರ ಅನುಕೂಲ ದೃಷ್ಟಿಯಿಂದ ಈ ವಿಚಾರವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅವರು ಈ ನಿರ್ಣಯವನ್ನು ಈ ಸಭೆಯ ಮುಂದೆ ಇಟ್ಟಿದ್ದಾರೆ. ಅದರಲ್ಲೂ ಕೂಡ ಅವರು ತಮ್ಮ ನಿರ್ಣಯದಲ್ಲಿ ಸ್ಪೆಸಿಫಿಕ್ ಆಗಿ ಬೆಂಗಳೂರಿನಲ್ಲಿ ಜನದಟ್ಟಣೆಯ ವೇಳೆಯಲ್ಲಿ ಪ್ರಯಾಣಿಕರಿಗೆ ಹೆಚ್ಚಿನ ಸಂಖ್ಯೆಯ ಬಸ್ಸುಗಳನ್ನು ಒದಗಿಸಿ ಬಡ ಹಾಗೂ ಮಧ್ಯಮವರ್ಗ ಜನರು ಬೇಗನೇ ಸಂಚರಿಸುವ ಉತ್ತಮ ಸೌಕರ್ಯಗಳನ್ನು ಒದಗಿಸಬೇಕೆಂದು ಹೆಚ್ಚು ಪ್ರಸ್ತಾಪ ಮಾಡುವುದಕ್ಕೆ ಪ್ರಯತ್ನ ಪಟ್ಟಿದ್ದಾರೆ. ಅವರ ಉದ್ದೇಶದ ಬಗ್ಗೆ ಅವರು ಏನು ಕೆಲವು ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. ಅದರ ಬಗ್ಗೆ ನನ್ನ ಭಿನ್ನಾಭಿಪ್ರಾಯವಿಲ್ಲ.

ಇವೊತ್ತಿನ ದಿವಸ ಸರ್ಕಾರದ ಅಭಿಪ್ರಾಯ ಕೂಡ, ಸಾರಿಗೆ ಸಂಸ್ಥೆಯ ಅಭಿಪ್ರಾಯ ಕೂಡ ಅದೇ ಆಗಿದೆ. ಸಂಚಾರ ಮಾಡತಕ್ಕ ಜನಗಳು ಏನಿದ್ದಾರೆ. ಅವರೆಲ್ಲರಿಗೂ ಕೂಡ ಜನದಟ್ಟಣೆಯಾಗಿರತಕ್ಕ ಕಾಲದಲ್ಲಿ ಹೆಚ್ಚು ವ್ಯವಸ್ಥಿತವಾದ ಅನುಕೂಲ ಮಾಡಬೇಕು. ಜನಗಳು ಕಾಯುವುದನ್ನು ತಪ್ಪಿಸಬೇಕು. ಅವರು ಅವರ ಕೆಲಸಕಾರ್ಯಗಳಿಗೆ ಶೀಘ್ರವಾಗಿ ಹೋಗಿ; ಅವರು ಕೆಲಸಕಾರ್ಯಗಳನ್ನು ಶೀಘ್ರವಾಗಿ ಮಾಡುವುದಕ್ಕೆ ಅನುಕೂಲವಾಗತಕ್ಕಂಥಾ ರೀತಿಯಲ್ಲಿ ವ್ಯವಸ್ಥೆಯನ್ನು ಮಾಡಿಕೊಡಬೇಕು ಎನ್ನುವುದು ಸಾರಿಗೆ ಸಂಸ್ಥೆಯ ಮತ್ತು ಸರ್ಕಾರದ ಅಭಿಪ್ರಾಯ. ಇದರಲ್ಲಿ ಏನೂ ಭಿನ್ನಾಭಿಪ್ರಾಯ ಇಲ್ಲ. ಅಷ್ಟೇ ಅಲ್ಲ, ಇನ್ನೂ ಕೆಲವು ವಿಚಾರಗಳನ್ನು ಪ್ರಸ್ತಾಪ ಮಾಡುತ್ತಾ ಕೆಲವಾರು ವಿಚಾರಗಳನ್ನು ಅವರು ಹೇಳಿದ್ದಾರೆ. ಮತ್ತು ಕೆಲವಾರು ಸಲಹೆಗಳನ್ನು ಕೂಡ ಕೊಟ್ಟಿದ್ದಾರೆ. ಅವರು ತಮ್ಮ ನಿರ್ಣಯವನ್ನು ಪ್ರಸ್ತಾಪ ಮಾಡುತ್ತಾ ಕೆಲವು ವಿಚಾರಗಳನ್ನು ಒಪ್ಪಿಕೊಂಡಿದ್ದಾರೆ. ಅವರ ಮಾತಿನಲ್ಲೇ ಹೇಳುವುದಾದರೆ ಬೆಂಗಳೂರು ನಗರ 20 ಚದುರ ಮೈಲಿಯಲ್ಲಿ ಹರಡಿದಂಥಾದ್ದು. ಈಗ 60 ಚದುರಮೈಲಿ ಪ್ರದೇಶದಲ್ಲಿ ಹರಡಿದೆ. ಜನಸಂಖ್ಯೆ ಜಾಸ್ತಿಯಾಗಿದೆ ಎನ್ನುವ ಮಾತನ್ನು ಹೇಳಿದ್ದಾರೆ. ಅವರು ವಿಚಾರಗಳನ್ನು ಪ್ರಸ್ತಾಪ ಮಾಡುತ್ತಾ ನನ್ನ ಕೆಲಸವನ್ನು ಹಗುರ ಮಾಡಿದ್ದಾರೆ.

ಅವರು ತಮ್ಮ ನಿರ್ಣಯವನ್ನು ಪ್ರಾಸಂಗಿಕವಾಗಿ ಸಮರ್ಥನೆ ಮಾಡುತ್ತಾ ಕಂಡಕ್ಟರುಗಳು, ಡ್ರೈವರುಗಳು ವಗೈರೆ ಕೆಲವು ಜನಗಳು ಸರಿಯಾಗಿ ನಡೆದುಕೊಳ್ಳುತ್ತಾ ಇಲ್ಲ, ಬಸ್ಸುಗಳು ಕಾಲಕ್ಕೆ ಸರಿಯಾಗಿ ಬರುತ್ತಿಲ್ಲ ಎನ್ನತಕ್ಕಂಥಾದ್ದನ್ನು, ಮತ್ತು ಕೆಲವು ಲಾಂಗ್ ರೂಟುಗಳಲ್ಲಿ ಎಂದರೆ ಬಸವನಗುಡಿಯಿಂದ ರಾಜಾಜಿನಗರ, ಯಶವಂತಪುರ ಇಂಥಾ ಲಾಂಗ್ ರೂಟುಗಳಲ್ಲಿ ಪ್ರಯಾಣ ಮಾಡುವಾಗ ಹೆಚ್ಚು ಸಮಯವಾಗುತ್ತದೆ, ಆದ್ದರಿಂದ ನಾನ್‌ಸ್ಟಾಪ್ ಬಸ್ಸುಗಳನ್ನು ಪ್ರಾರಂಭ ಮಾಡಬೇಕು ಎಂದು ಪ್ರಸ್ತಾಪ ಮಾಡಿದ್ದಾರೆ. ಸಾರ್ವಜನಿಕ ದೃಷ್ಟಿಯಿಂದ ಸಾರಿಗೆ ಸಂಸ್ಥೆ ವ್ಯವಸ್ಥಿತವಾಗಿ ಕೆಲಸ ಮಾಡತಕ್ಕ ದೃಷ್ಟಿಯಿಂದ ಹಲವಾರು ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ.

ಸ್ವಾಮಿ ಒಂದು ಮಾತನ್ನು ಮಾನ್ಯ ಸದಸ್ಯರು ಹೇಳಿದರು. ಅದೇನೆಂದರೆ ಬಡವರ ಹೆಸರಿನಲ್ಲಿ ಬಂದಂಥ ಈ ಸರ್ಕಾರ ಬಡವರಿಗಾಗಿ ಏನೂ ಕೆಲಸ ಮಾಡುತ್ತಾ ಇಲ್ಲ ಎಂದು ಮಾನ್ಯ ಸದಸ್ಯರು ಕೇಳಿದರು. ಶ್ರೀ ಶಾಮಣ್ಣನವರು ಬಹಳ ರೀಸನಬಲ್ ಆಗಿರತಕ್ಕಂಥಾವರು, ಈ ಅನ್‌ರಿಸಲೇಬರ್ ಆಗಿರತಕ್ಕಂಥ ಮಾತನ್ನು ಏತಕ್ಕೆ ಆಡಿದರೋ, ನನಗಂತೂ ಸ್ವಲ್ಪ ಬೇಸರವಾಗಿದೆ. ನಾನು ಈ ಬಗ್ಗೆ ಅಂಕಿಸಂಖ್ಯೆಗಳನ್ನು ಈ ಸಭೆಯ ಗಮನಕ್ಕೆ ತಂದರೆ ಸದಸ್ಯರು ಅದನ್ನು ಒಪ್ಪುತ್ತಾರೆ ಎಂದು ನನ್ನ ಭಾವನೆಯಾಗಿದೆ.

ಮೊದಲನೆಯದಾಗಿ ಹೇಳುವುದಾದರೆ, ಮಾನ್ಯ ಸದಸ್ಯರು ಹೇಳುವ ರೀತಿಯಲ್ಲಿ ಬೆಂಗಳೂರು ನಗರ 26 ಚದುರ ಮೈಲಿ ಇದ್ದಂಥಾದ್ದು ಈವೊತ್ತು 60 ಚದುರ ಮೈಲಿಯವರೆಗೆ ಹೋಗಿದೆ. ಹಾಗೆಯೇ ಜನಸಂಖ್ಯೆಯು ಜಾಸ್ತಿಯಾಗಿದೆ. ಅವರ ಮಾತಿನಲ್ಲೇ ಹೇಳುವುದಾದರೆ ಈವೊತ್ತು ಪ್ರಯಾಣಿಕರ ಓಡಾಟ ಜಾಸ್ತಿಯಾಗಿರುವುದರಿಂದ ಆ ಬಸ್ಸಿಗಾಗಿ ಎಲ್ಲರೂ ಕಾದುಕೊಂಡಿರುತ್ತಾರೆ. ಅಲ್ಲದೆ ನಗರದ ಜನಕ್ಕೆ ನಡೆಯುವ ಅಭ್ಯಾಸ ತಪ್ಪಿಹೋಗಿರುವುದರಿಂದ ಹತ್ತಿರ ಹತ್ತಿರ ಇರುವ ಜಾಗಕ್ಕೆಲ್ಲಾ ಬಸ್ಸಿನಲ್ಲಿ ಹೋಗುತ್ತಿದ್ದಾರೆ. ಅದನ್ನು ಬಿಡುವುದು ಒಳ್ಳೆಯದು ಎಂದು ಹೇಳಿ ಕೆಲವು ಅಂಕಿಸಂಖ್ಯೆಗಳನ್ನು ಈ ಸಭೆಯ ಗಮನಕ್ಕೆ ತರುತ್ತೇನೆ.

ಈ ಸಾರಿಗೆ ಸಂಸ್ಥೆ ಅಸ್ತಿತ್ವಕ್ಕೆ ಬಂದಮೇಲೆ 1957ರಿಂದ ಇಲ್ಲಿಯವರೆಗೂ ಅದರ ಅಂಕಿ ಅಂಶ ನೋಡುವುದಾದರೆ 1957ರಲ್ಲಿ 59 ರೂಟ್‌ಗಳನ್ನು ಅಪರೇಟ್ ಮಾಡುತ್ತಾ ಇದ್ದುದು ಈವೊತ್ತು -3 ರೂಟ್‌ಗಳಲ್ಲಿ ಅಪರೇಟ್ ಮಾಡುತ್ತಾ ಇದ್ದಾರೆ. ಹಾಗೆಯೇ ಈವೊತ್ತಿನ ದಿವಸ ರಾಜ್ಯದಲ್ಲಿ ಒಟ್ಟು ಬಸ್ಸುಗಳನ್ನು ಓಡಾಡಿಸುತ್ತಾ ಇರುವ ಬಗ್ಗೆ ಎರಡು ವರ್ಷ ಅಂದರೆ 1972-73 ಮತ್ತು 1973-74ರ ಅಂಕಿ ಸಂಖ್ಯೆಗಳನ್ನು ಈ ಸಭೆಯ ಗಮನಕ್ಕೆ ತರಬಯಸುತ್ತೇನೆ. 1972-73ರಲ್ಲಿ 454 ರೂಟುಗಳಲ್ಲಿ ಅಪರೇಟ್ ಮಾಡುತ್ತಾ ಇದ್ದುದು 1973-74 ರಲ್ಲಿ 473 ರೂಟುಗಳಲ್ಲಿ ಅಪರೇಟ್ ಮಾಡುತ್ತಿದ್ದಾರೆ.

ಇನ್ನು ಕಿಲೋಮೀಟರ್‌ನ ಅಂಕಿಸಂಖ್ಯೆಗಳನ್ನು ತೆಗೆದುಕೊಂಡರೆ 1957ರಲ್ಲಿ 454 ಕಿಲೋ ಮೀಟರ್ಸ್ ಅಷ್ಟು ಓಡಾಡಿಸುತ್ತಾ ಇದ್ದುದು ಈವೊತ್ತು 4416 ಕಿಲೋಮೀಟರ್ ಅಷ್ಟು ಬಸ್ಸುಗಳು ಓಡಾಡುತ್ತಾ ಇದೆ. ನಿಮಗೆ ಎರಡು ವರ್ಷದ ಅಂಕಿಸಂಖ್ಯೆಗಳನ್ನು ಹೇಳಬೇಕಾದರೆ 1972 ರಲ್ಲಿ 4044 ಕಿಲೋಮೀಟರ್ ಅಷ್ಟು ಓಡಾಡುತ್ತಾ ಇದ್ದುದು ಈವೊತ್ತು 4416 ಕಿಲೋ ಮೀಟರ್ಸ್ ಅಷ್ಟು ಓಡಾಡಿಸುತ್ತಾ ಇದ್ದಾರೆ.

ಇನ್ನು ಷೆಡ್ಯೂಲ್ಸ್‌ನಲ್ಲಿ ಬಸ್ಸುಗಳನ್ನು ಓಡಾಡಿಸುತ್ತಾ ಇದ್ದುದನ್ನು ತೆಗೆದುಕೊಂಡರೆ 1957ರಲ್ಲಿ 110 ಷೆಡ್ಯೂಲ್ಸ್‌ನಲ್ಲಿ ಓಡಾಡಿಸುತ್ತಾ ಇದ್ದುದು ಈವೊತ್ತು 376 ಷೆಡ್ಯೂಲ್ಸ್‌ನಲ್ಲಿ ಓಡಾಡಿಸುತ್ತಾ ಇದ್ದಾರೆ. 1972ರಲ್ಲಿ 343 ಷೆಡ್ಯೂಲ್ಸ್ ಇದ್ದರೆ ಈವೊತ್ತು 376 ಷೆಡ್ಯೂಲ್ಸ್‌ನಲ್ಲಿ ಬಸ್ಸುಗಳು ಓಡಾಡುತ್ತಾ ಇವೆ. ಇನ್ನು ಷೆಡ್ಯೂಲ್ ಕಿಲೋ ಮೀಟರ್ಸ್ ಲೆಕ್ಕ ತೆಗೆದುಕೊಂಡರೆ 1972ರಲ್ಲಿ 67,237 ಕಿಲೋಮೀಟರ್ಸ್ ಅಷ್ಟು ಓಡಾಡಿಸುತ್ತಾ ಇದ್ದರೆ, ಈವೊತ್ತು 70,415 ಕಿಲೋಮೀಟರ್ಸ್ ಅಷ್ಟು ಬಸ್ಸುಗಳು ಓಡಾಡುತ್ತಾ ಇವೆ.

ಇನ್ನು ಬಸ್ಸಿನಲ್ಲಿ ಓಡಾಡತಕ್ಕಂಥ ಪ್ರಯಾಣಿಕರ ಸಂಖ್ಯೆ ಹೇಳಬಯಸುತ್ತೇನೆ. 1957ರಲ್ಲಿ 1 ಲಕ್ಷ 10 ಸಾವಿರ ಜನ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಾ ಇದ್ದರೆ ಈವೊತ್ತು 4 ಲಕ್ಷ 83 ಸಾವಿರ ಜನ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿದ್ದಾರೆ. 1972 ರಿಂದ ಈಚೆಗೆ ಅಂಕಿ ಅಂಶ ಹೇಳುವುದಾದರೆ 1972 ರಲ್ಲಿ 3 ಲಕ್ಷ 17ಸಾವಿರ ಜನರು ಬಸ್ಸಿನಲ್ಲಿ ಪ್ರಯಾಣ ಮಾಡುತ್ತಾ ಇದ್ದರೆ ಈವೊತ್ತು 4 ಲಕ್ಷ 83 ಸಾವಿರ ಜನ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿದ್ದಾರೆ. ಅಂದರೆ ಈವತ್ತಿನ ದಿವಸ ಸುಮಾರು 1 ಲಕ್ಷ 66 ಸಾವಿರ ಜನ ಬಸ್ಸಿನಲ್ಲಿ ಓಡಾಡುವ ಸಂಖ್ಯೆ ಜಾಸ್ತಿಯಾಗಿದೆ. ಹಾಗೆಯೇ ಬಸ್ಸಿನ ಸಂಖ್ಯೆ ನಗರದಲ್ಲಿ ಓಡಾಡುತ್ತಾ ಇರುವುದನ್ನು ಗಮನಿಸಿದರೆ 1972 ರಲ್ಲಿ 426 ಬಸ್ಸುಗಳು ಇದ್ದರೆ ಈವೊತ್ತು 447 ಬಸ್ಸುಗಳನ್ನು ನಗರದಲ್ಲಿ ಓಡಾಡಲಿಕ್ಕೆ ಸಾರಿಗೆ ಸಂಸ್ಥೆಯವರು ಬಿಟ್ಟಿದ್ದಾರೆ. ಇದಲ್ಲದೆ ಇನ್ನು ಪೀಕ್ ಅವರ್ಸ್‌ನಲ್ಲಿ ಹೊಸದಾಗಿ

*****

## ನೌಕರರು ಮನೆಯಾಳುಗಳೆ?

7 ಏಪ್ರಿಲ್ 1979

ಶ್ರೀ ಬಿ.ವಿ. ಕಕ್ಕಿಲಾಯ.– ಸ್ವಾಮಿ, ನಮ್ಮ "ಆ" ಪ್ರಶ್ನೆಗೆ ಉತ್ತರವಾಗಿ

> "ಗೃಹದಲ್ಲಿ ಕೆಲಸ ಮಾಡುವ ನೌಕರರು ಮುಖ್ಯವಾಗಿ ಸರ್ಕಾರಿ ನೌಕರರ ಮನೆಯಲ್ಲಿ ಸರ್ಕಾರಿ ಕೆಲಸವನ್ನು ನೋಡಿಕೊಳ್ಳುವುದು ಅಭ್ಯಾಗತವನ್ನು ಸರಿಯಾಗಿ ನೋಡಿಕೊಳ್ಳುವುದು. ಪ್ರೇಕ್ಷಕರ ಕೊಠಡಿಗಳನ್ನು ಚೊಕ್ಕಟವಾಗಿಡುವುದು, ಕಾಗದ ಪತ್ರಗಳನ್ನು ಕಛೇರಿಯಿಂದ ಹಾಗೂ ಮನೆಯಿಂದ ಸಾಗಿಸುವುದು ಮತ್ತು ಸರ್ಕಾರಿ ನೌಕರರು ಪ್ರವಾಸದಲ್ಲಿದ್ದಾಗ ಅವರನ್ನು ನೋಡಿಕೊಳ್ಳುವುದು. ಸೂಕ್ತ ಸಂಭಾವನೆಯನ್ನು ಪಾವತಿ ಮಾಡುವ ಮೂಲಕ ಸರ್ಕಾರಿ ನೌಕರರ ಹಾಗೂ ಗೃಹದಲ್ಲಿ ಕೆಲಸಮಾಡುವ 4ನೇ ದರ್ಜೆ ನೌಕರರ ಪರಸ್ಪರ ಹೊಂದಾಣಿಕೆಯ ಮೂಲಕ ಮೇಲೆ ತಿಳಿಸಿದ ರೀತಿಯಲ್ಲಿ ಅವರ ಕರ್ತವ್ಯಗಳಲ್ಲಿ ವಿವಾದವಿಲ್ಲದಂತೆ ಮನೆ ಕೆಲಸವನ್ನು ನಿರ್ವಹಿಸಲು ಹೆಚ್ಚಿನ ಸಹಾಯವಾಗುವಂತಾಗಲು ಮನೆಯಲ್ಲಿ ಕೆಲಸ ಮಾಡುವುದಕ್ಕೆ ನೌಕರರನ್ನು ಬಳಸಿಕೊಳ್ಳುವುದಕ್ಕ ಯಾವ ಆಕ್ಷೇಪಣೆಯಿಲ್ಲ."

ಎಂದು ಹೇಳಿದ್ದೀರಿ. ಆದರೆ ಅದರಲ್ಲಿ ಬಟ್ಟೆ ಒಗೆಯುವುದಕ್ಕೆ ಅಡಿಗೆ ಮಾಡುವುದಕ್ಕೆ ಇವರನ್ನು ನೇಮಿಸಕೂಡದೆಂದು ಒಂದು ನಿರ್ಣಯವನ್ನು ಹಾಕಬೇಕಾಗಿತ್ತು. ತಾವು ಅದನ್ನು ತಿಳಿಸದೇ ಇರುವುದರಿಂದ ಈ ನಾಲ್ಕನೇ ದರ್ಜೆ ನೌಕರರನ್ನು ಅಡಿಗೆ ಮಾಡಲು, ಬಟ್ಟೆ

ಒಗೆಯಲು ಉಪಯೋಗಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಂತೆ ಆಗುವುದಿಲ್ಲವೇ? ಕೆಲವು ಅಧಿಕಾರಿಗಳು ಈ 4ನೇ ದರ್ಜೆ ನೌಕರರಿಂದ ತಮ್ಮ ಮನೆಗಳಲ್ಲಿ ಇಂಥ ಕೆಲಸಗಳನ್ನು ಮಾಡಿಸುತ್ತಿರುವುದು ತಮ್ಮ ಗಮನಕ್ಕೆ ಬಂದಿಲ್ಲವೆ?

ಶ್ರೀ **ಕೆ.ಎಚ್. ರಂಗನಾಥ್.**– ತಾವು ಹೇಳುತ್ತಿರುವಂಥ ಪ್ರಕರಣಗಳು ಇದುವರೆಗೆ ಯಾವುವೂ ಸರ್ಕಾರದ ಗಮನಕ್ಕೆ ಬಂದಿಲ್ಲ. ಬಟ್ಟೆ ಒಗೆಸುವುದು, ಅಡಿಗೆ ಮಾಡಿಸುವುದರ ಬಗ್ಗೆ ನಿಷೇಧವನ್ನು ಹಾಕಬೇಕೆಂಬುದರ ಏನು ಹೇಳುತ್ತಿದ್ದೀರಿ; ಅದನ್ನು ಆದಷ್ಟು ತೀವ್ರವಾಗಿ ಯೋಚನೆ ಮಾಡುತ್ತೇವೆ.

ಶ್ರೀ **ಬಿ.ವಿ. ಕಕ್ಕಿಲಾಯ.**– ಇದರಲ್ಲಿ ಇಂಥಿಂಥ ಕೆಲಸಗಳನ್ನು ಮಾಡಿಸಬೇಕು, ಇಂಥಿಂಥ ಕೆಲಸಗಳನ್ನು ಮಾಡಿಸಬಾರದೆಂದು ಹೇಳುವುದಲ್ಲದೆ ಅವರಿಗೆ ಯಾವ ರೀತಿ ಸಂಭಾವನೆ ಕೊಡಬೇಕೆಂಬ ಬಗ್ಗೆ ಕೂಡ ಆದೇಶವನ್ನು ತಾವು ಕೊಡುತ್ತೀರಾ?

ಶ್ರೀ **ಕೆ.ಎಚ್. ರಂಗನಾಥ್.**– ಇಂಥಿಂಥಾ ಕೆಲಸಗಳನ್ನೇ ಮಾಡಿಸಬೇಕೆಂದು ನಾವು ನಿರ್ದಿಷ್ಟವಾಗಿ ಹೇಳುವುದಕ್ಕಾಗುವುದಿಲ್ಲ. ಉದಾಹರಣೆಗೆ ಹೇಳುವುದಾದರೆ, ತರಕಾರಿ ತೆಗೆದುಕೊಂಡು ಬರುವುದು. ಕುಡಿಯುವುದಕ್ಕೆ ನೀರು ತೆಗೆದುಕೊಂಡು ಬರುವುದು ಇಂಥಾದ್ದನ್ನು ಹೇಳಬಹುದು. ಆದರೆ ಅಡಿಗೆ ಮಾಡಿಸುವುದು, ಬಟ್ಟೆ ಒಗೆಸುವುದರ ಬಗ್ಗೆ ನಿಷೇಧವನ್ನು ಹಾಕುವ ಬಗ್ಗೆ ನಾವು ತೀವ್ರ ಯೋಚನೆ ಮಾಡುತ್ತೇವೆ.

ಶ್ರೀ **ಬಿ.ವಿ. ಕಕ್ಕಿಲಾಯ.**– ಮಂಗಳೂರು ಮುನಿಸಿಪಲ್ ಕಮಿಷನ್‌ರವರು ಅವರ ಖಾಸಗಿ ಬಂಗಲೆಯಲ್ಲಿ ಒಂದು ಪ್ರತ್ಯೇಕವಾದ ಆಫೀಸನ್ನು ನಡೆಸುತ್ತಿದ್ದಾರೆ. ಅಲ್ಲಿ ಈ 4ನೇ ದರ್ಜೆ ಸರ್ಕಾರಿ ನೌಕರರನ್ನು ಉಪಯೋಗಿಸಿಕೊಂಡು ಕೆಲಸ ಮಾಡಿಸುತ್ತಿದ್ದಾರೆ. ಇದು ಸರ್ಕಾರದ ಗಮನಕ್ಕೆ ಬಂದಿದೆಯೆ? ಒಂದು ವೇಳೆ ಇದುವರೆಗೂ ಆ ವಿಷಯ ಸರ್ಕಾರದ ಗಮನಕ್ಕೆ ಬಂದಿಲ್ಲದಿದ್ದರೆ ಈಗ ನಾನು ಅದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಇದರ ಬಗ್ಗೆ ತಾವು ಏನು ಕ್ರಮ ತೆಗೆದುಕೊಳ್ಳುತ್ತೀರಿ ಎಂಬುದನ್ನು ತಿಳಿಸಬೇಕು?

ಶ್ರೀ **ಕೆ.ಎಚ್. ರಂಗನಾಥ್.**– ಯಾವ ಯಾವ ಅಧಿಕಾರಿಗಳಿಗೆ ನಾವು 4ನೇ ದರ್ಜೆ ನೌಕರರನ್ನು ಕೊಟ್ಟಿದ್ದೇವೆಂದು ನಮ್ಮ ಉತ್ತರದಲ್ಲೇ ಸ್ಪಷ್ಟವಾಗಿ ಹೇಳಿದ್ದೇವೆ. ಮನೆಯಲ್ಲಿ ಇರುವ ಕಛೇರಿಗೆ ಆಫೀಸಿನ ಪೇಪರ್‌ಗಳನ್ನು ತೆಗೆದುಕೊಂಡು ಬರುವುದು ಟೆಲಿಫೋನ್ ಸ್ವಚ್ಛಮಾಡುವುದು. ಇತ್ಯಾದಿಗಳು ಮನೆ ಕೆಲಸವೆಂದು ಅನ್ನಿಸಿಕೊಳ್ಳುವುದಿಲ್ಲ. ಆದರೂ ತಾವು ಹೇಳಿದಂತೆ ಮನೆಕೆಲಸಗಳು ಎಂದು ಅನ್ನಿಸಿಕೊಳ್ಳುವಂಥಾದ್ದಕ್ಕೆ ಈ ನೌಕರರನ್ನು ಉಪಯೋಗಿಸಿಕೊಂಡ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದರೆ ಮೊದಲೇ ಅದರ ಬಗ್ಗೆ ಕ್ರಮ ತೆಗೆದುಕೊಳ್ಳುತ್ತೇವೆ.

*****

# ಜಯಪ್ರಕಾಶರಿಗೆ ಶೀಘ್ರ ಆರೋಗ್ಯ ಹಾರೈಕೆ

21 ಮಾರ್ಚ್ 1979

**SRI K.H. RANGANATH.-** Sir, with your kind permission I would like to move the following motion. "Praying Speedy recovery to Sri Jayprakash Narayan who is un well".

Sri Jayaprakash Narayan is one of our great leaders who is in the hospital to day.

ಸನ್ಮಾನ್ಯ ಅಧ್ಯಕ್ಷರೇ, ಭಾರತದ ಇತಿಹಾಸದಲ್ಲಿ ರಾಜಕೀಯದ ಇತಿಹಾಸದಲ್ಲಿ ಗಣ್ಯ ವ್ಯಕ್ತಿಗಳ ಶ್ರೇಣಿಯಲ್ಲಿ ಸೇರಿರುವ ಶ್ರೀ ಜಯಪ್ರಕಾಶ್ ನಾರಾಯಣ್ ಅವರ ಆರೋಗ್ಯ ಆಕಸ್ಮಿಕವಾಗಿ ಹದಗೆಟ್ಟು ಅವರು ಬೊಂಬಾಯಿಯಲ್ಲಿ ಚಿಕಿತ್ಸೆ ಹೊಂದುತ್ತಿರುವ ಸಂದರ್ಭದಲ್ಲಿ ಅವರು ಕ್ಷಿಪ್ರವಾಗಿ ಸರಿಯಾದ ರೀತಿಯಲ್ಲಿ ಆರೋಗ್ಯವನ್ನು ಹೊಂದಲಿ ಎಂದು ನಾನು ಹಾರೈಸುತ್ತೇನೆ. ಅವರ ಅಮೂಲ್ಯವಾದ ಸೇವೆ ದೇಶಕ್ಕೆ ಇನ್ನೂ ಹಲವು ಕಾಲ ಲಭಿಸಲಿ ಎಂದು ನಾನು ಪ್ರಾರ್ಥಿಸುತ್ತೇನೆ. ಇದರ ಬಗ್ಗೆ ನಾನು ಇನ್ನು ಹೆಚ್ಚು ಮಾತನಾಡುವುದಕ್ಕೆ ಇಷ್ಟಪಡುವುದಿಲ್ಲ. ಮಾನ್ಯ ಮುಖ್ಯಮಂತ್ರಿಗಳು ಈ ಒಂದು ಮಂಡನೆಯನ್ನು ಮಂಡಿಸಬೇಕು ಎಂದು ಇದ್ದರು, ಅವರು ಬರುವುದಕ್ಕೆ ಸ್ವಲ್ಪ ತಡವಾಗಿದ್ದರಿಂದ ಈ ಹೊಣೆಯನ್ನು ನಾನು ಹೊರುವ ಸೌಭಾಗ್ಯ ದೊರೆತಿದೆ.

ನನ್ನ ರಾಜಕೀಯ ಕಾಲದಲ್ಲಿ ಅವರ ಜೊತೆ ಇದ್ದು ಕೆಲಸ ಮಾಡತಕ್ಕ ಒಂದು ಅವಕಾಶ ನನಗೆ ದೊರೆತ್ತಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿ ಸೇವೆ ಮಾಡಿ ಉಳಿದಿರತಕ್ಕ ಹಲವು ರಾಜಕಾರಣಿಗಳಲ್ಲಿ ಇವರೂ ಒಬ್ಬರು. ಇವರು ಎಲ್ಲರ ಪ್ರೀತಿ, ವಾತ್ಸಲ್ಯಕ್ಕೆ ಪಾತ್ರರಾಗಿರತಕ್ಕ ಒಬ್ಬ ರಾಜಕಾರಣಿ. ಅಷ್ಟೇ ಅಲ್ಲ, ಕಾಂಗ್ರೆಸ್ ಒಂದಾಗಿದ್ದಂಥ ಸಮಯದಲ್ಲಿಯೂ ಕೂಡ, ಕಾಂಗ್ರೆಸ್ ಸಮಾಜವಾದಿ ಪಕ್ಷ ಒಂದು ಅದನ್ನು ವ್ಯವಸ್ಥೆಗೊಳಿಸುವುದರಲ್ಲಿ ಅದನ್ನು ಒಂದುಗೂಡಿಸುವುದರಲ್ಲಿ ಹೆಚ್ಚಿನ ಪಾತ್ರವನ್ನು ಅವರು ವಹಿಸಿದ್ದರು. ಸ್ವಾತಂತ್ರ್ಯ ನಂತರ ರಾಷ್ಟ್ರದಲ್ಲಿ ವ್ಯವಸ್ಥಿತವಾಗಿ ಎರಡು ಪಕ್ಷಗಳು ಇರಬೇಕು. ಎನ್ನುವ ಅಭಿಪ್ರಾಯವನ್ನು ಮುಂದಿಟ್ಟು ಅವರ ಜೊತೆಯಲ್ಲಿ ಮಾನ್ಯ ರಾಮಮನೋಹರ್ ಲೋಹಿಯಾ, ಅಶೋಕ ಮೆಹ್ತಾ, ಹಾಗೆ ಹಲವಾರು ಸಮಾಜವಾದಿಗಳನ್ನೊಳಗೊಂಡು ಹೊರಗೆ ಬಂದು ವ್ಯವಸ್ಥಿತವಾದಂಥ ವಿರೋಧಪಕ್ಷವನ್ನು 48ರ ನಂತರ ಕಟ್ಟುವುದಕ್ಕೆ ಪ್ರಯತ್ನಪಟ್ಟರು. ಈ ದಿಸೆಯಲ್ಲಿ ಮಾನ್ಯ ಜಯಪ್ರಕಾಶ್‌ನಾರಾಯಣ್ ಅವರು ಹೆಚ್ಚು ಶ್ರಮ ವಹಿಸಿದ್ದರು. ಅಷ್ಟೇ ಅಲ್ಲ, ಅವರು ಅಧಿಕಾರಕ್ಕೆ ಆಸೆ ಬೀಳದೆ ಈ ದಿಸೆಯಲ್ಲಿ ಯೋಚನೆ ಮಾಡುತ್ತಿದ್ದರು. ಇದನ್ನು ನಾನು ಹೆಚ್ಚಾಗಿ ಹೇಳಬೇಕಾದದ್ದು ಒತ್ತಿಹೇಳಬೇಕಾದುದು ಅನಾವಶ್ಯಕ.

ಕಾರಣಾಂತರಗಳಿಂದ ಅವರ ಆರೋಗ್ಯ ಕೆಲವು ದಿವಸಗಳಿಂದ ದಿನೇ ದಿನೇ ಹದಗೆಡುತ್ತಿದೆ. ಅವರ ಪತ್ನಿಯ ಮರಣಾನಂತರ ಅವರ ಆರೋಗ್ಯ ತೀವ್ರಗತಿಯಿಂದ ಹದಗೆಡುತ್ತಿದೆ ಎಂದರೆ ತಪ್ಪಾಗಲಾರದು. ಏಕೆಂದರೆ ಅವರ ಪತ್ನಿ ಅವರ ಆರೋಗ್ಯದ ಕಡೆಗೆ ಹೆಚ್ಚು ನಿಗಾ ವಹಿಸುತ್ತಿದ್ದರು ಮತ್ತು ಹೆಚ್ಚಿನ ಒಂದು ಸೇವೆಯನ್ನು ಮಾಡುತ್ತಿದ್ದರು. ಆ ಕಾರಣದಿಂದ ಅವರ ಅಗಲುವಿಕೆಯಿಂದ ಈಗಿನ ಅವರ ಅನಾರೋಗ್ಯಕ್ಕೆ ಹೆಚ್ಚು ಕಾರಣವಾಗಿರಬಹುದೆಂದು ನಾನು ಭಾವಿಸುತ್ತೇನೆ. ಅವರು ಈ ಮೊದಲು ತಮ್ಮ ಆರೋಗ್ಯವನ್ನು ಸುಧಾರಿಸಿಕೊಳ್ಳಲು ತಮ್ಮ ಪತ್ನಿಯ ಜೊತೆಯಲ್ಲಿ ಬೆಂಗಳೂರಿಗೆ ಬಂದು ಕೆಲವು ದಿವಸಗಳ ಕಾಲ ತಿಪ್ಪಗೊಂಡನಹಳ್ಳಿಯಲ್ಲಿ ವಾಸ ಮಾಡುತ್ತಿದ್ದರು. ಆ ಸಮಯದಲ್ಲಿ ನಾನು ಕಾಂಗ್ರೆಸ್ ಪಕ್ಷದ ಅಧ್ಯಕ್ಷನಾಗಿದ್ದೆ. ಆದ್ದರಿಂದ ನಾನು ಪಕ್ಷದ ವತಿಯಿಂದ ಅವರನ್ನು ಆಹ್ವಾನ ಮಾಡಿ ಅವರ ಸೇವೆ ಮಾಡಲು ಅವಕಾಶ ಕಲ್ಪಿಸಿಕೊಡಿ ಎಂದು ನಾನು ಅವರನ್ನು ವೈಯಕ್ತಿಕವಾಗಿ ಕೇಳಿಕೊಂಡೆ. ಅದು ತಮಗೂ ಗೊತ್ತಿದೆ. ಆದರೆ ಅವರು ಒಂದು ರಾಜಕೀಯ ಪಕ್ಷದ ವತಿಯಿಂದ ಸೇವೆ ಪಡೆಯಲು ಸಾಧ್ಯವಿಲ್ಲವೆಂದು ತಿಳಿಸಿದಾಗ, ನಾನು ನನ್ನ ಮನೆಗೆ ಬರಬೇಕೆಂದು ಆಹ್ವಾನ ಮಾಡಿದೆ, ಆಗ ನಾನು ಒಂದು ಸಣ್ಣ ಮನೆಯಲ್ಲಿ ವಾಸಮಾಡುತ್ತಿದ್ದೆ. ಅವರು ನನ್ನ ಆಹ್ವಾನವನ್ನು ಮನ್ನಿಸಿ ಒಂದು ದಿವಸ ಮುಂಜಾನೆ ಗಂಡ ಮತ್ತು ಹೆಂಡತಿ ಬಂದು ಬ್ರೇಕ್‌ಫಾಸ್ಟ್ ತೆಗೆದುಕೊಂಡರು. ಈ ರೀತಿಯಲ್ಲಿ ಅವರ ಸೇವೆಯನ್ನು ಮಾಡಲು ನನಗೆ ಅವರು ಅನುವು ಮಾಡಿಕೊಟ್ಟರು. ಆ ಸಂದರ್ಭದಲ್ಲಿ ಈ ಒಂದು ಸೇವೆಯನ್ನು ಮಾಡುವ ಸೌಭಾಗ್ಯ ನನಗೆ ದೊರೆಯಿತು.

ಇದಾದ ಕೆಲವು ತಿಂಗಳುಗಳ ನಂತರ ಅವರ ಪತ್ನಿ ಅವರನ್ನು ಅಗಲಿ ಹೋದರು. ಆ ಸಮಯದಿಂದಲೂ ಅವರ ಆರೋಗ್ಯ ಬಹಳಮಟ್ಟಿಗೆ ಕ್ಷೀಣಿಸುತ್ತಿದೆ ಎಂಬುದಾಗಿ ನಾನು ಭಾವನೆ ಮಾಡುತ್ತೇನೆ. ಅವರನ್ನು ಹತ್ತಿರದಿಂದ ನೋಡಿದವರಲ್ಲಿ ನಾನೂ ಒಬ್ಬನಾಗಿದ್ದೆ. ಅದು ಏನೇ ಇರಲಿ. ಇವೊತ್ತು ನಮ್ಮ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ತ್ಯಾಗ ಮಾಡಿದವರ ಪೈಕಿ ಇವರೂ ಒಬ್ಬರು. ಈ ರಾಷ್ಟ್ರದ ಅಭಿವೃದ್ಧಿಗಾಗಿ ಹಲವಾರು ಸಿದ್ಧಾಂತವನ್ನು ಜಾರಿಗೆ ತರಬೇಕೆಂಬ ಅಭಿಪ್ರಾಯ ಇಟ್ಟುಕೊಂಡಿರುವ ಜೀವಂತ ರಾಜಕಾರಣಿಗಳ ಪೈಕಿ ಇವರೂ ಒಬ್ಬರಾಗಿದ್ದಾರೆ. ಬರೀ ಮಾತನಾಡುವುದು ಇವರ ಸ್ವಭಾವವಲ್ಲ. ಹೇಳಿದ್ದನ್ನು ಜಾರಿಗೆ ತರುವುದು ಇವರ ಸ್ವಭಾವವಾಗಿತ್ತು.

ನೆನ್ನೆ ರಾತ್ರಿ 12 ಗಂಟೆಯಲ್ಲಿ ಇವರ ಸ್ಥಿತಿ ಚೆನ್ನಾಗಿಲ್ಲ ಎಂಬುದನ್ನು ಕೇಳಿದಾಗ ನನ್ನ ಮನಸ್ಸಿಗೆ ಬಹಳ ಬೇಸರವಾಯಿತು. ಕಳೆದ ಎರಡು ವರ್ಷಗಳಿಂದಲೂ ಅವರು ಈ ಒಂದು ವೇದನೆಯನ್ನು ಅನುಭವಿಸುತ್ತಿದ್ದಾರೆ. ಅವರ ಆರೋಗ್ಯ ಚೆನ್ನಾಗಿಲ್ಲವೆಂದು ಪತ್ರಿಕೆಗಳಲ್ಲಿ ಓದಿದವರಿಗೆ ಹೆಚ್ಚು ನೋವಾಗುವಾಗ ಅದನ್ನು ಅನುಭವಿಸುತ್ತಿರುವವರಿಗೆ ಎಷ್ಟು ವೇದನೆಯಾಗುತ್ತಿರಬಹುದೆಂಬುದನ್ನು ಕೇವಲ ಮಾತುಗಳಲ್ಲಿ, ಇಲ್ಲವೆ ಶಬ್ದಗಳಲ್ಲಿ ಹೇಳುವುದಕ್ಕೆ ಸಾಧ್ಯವಿಲ್ಲ. ಇನ್ನು ಎಷ್ಟು ದಿವಸಗಳ ಕಾಲ ಈ ಒಂದು ವೇದನೆಯನ್ನು ಅನುಭವಿಸಬೇಕೋ

ಎಂಬತಕ್ಕಂತಹ ಮಾತುಗಳನ್ನು ಅವರೇ ಸ್ವತಃ ಹೇಳಿದ್ದು ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಇಂತಹ ಹಲವಾರು ರಾಜಕಾರಣಿಗಳು ನಮ್ಮ ಜೊತೆಯಲ್ಲಿ ಇನ್ನೂ ಹಲವಾರು ಕಾಲ ಇರಬೇಕಾಗುತ್ತದೆ. ಏಕೆಂದರೆ, ಒಳ್ಳೆಯ ಸತ್‌ಸಂಪ್ರದಾಯಗಳನ್ನು ಹಾಕಿಕೊಡುವುದು. ವ್ಯವಸ್ಥಿತ ರಾಜಕೀಯ ಸಿದ್ಧಾಂತವನ್ನು ಈ ರಾಷ್ಟ್ರದ ಮುಂದಿಟ್ಟು ಅದನ್ನು ಪ್ರತಿಪಾದನೆ ಮಾಡುವುದರ ಮೂಲಕ ಮುಂದಿನ ಪೀಳಿಗೆಯನ್ನು ತಯಾರು ಮಾಡುವಂತಹ ಒಂದು ಕೆಲಸ ವಿಚಾರವಂತ ಜನರ ಮೇಲಿದೆ. ಇಂತಹ ಸಂದರ್ಭದಲ್ಲಿ ಇವರ ಒಂದು ಮಾರ್ಗದರ್ಶನ ನಮಗೆ ಅವಶ್ಯಕವೆಂದು ನಾನಾದರೂ ಭಾವಿಸಿಕೊಂಡಿದ್ದೇನೆ. ಈ ದೃಷ್ಟಿಯಿಂದ ವಿಚಾರ ಮಾಡುವಾಗ ಅವರು ಜಾಗ್ರತೆ ಗುಣಮುಖರಾಗಲಿ. ಹೆಚ್ಚು ಕಾಲ ನಮ್ಮ ಜೊತೆಯಲ್ಲಿರಲಿ, ಅವರ ಸೇವೆ ನಮ್ಮ ದೇಶಕ್ಕೆ ದೊರೆಯುವಂತಾಗಲಿ, ಅವರ ಒಂದು ಅನುಭವ ಮುಂದಿನ ಪೀಳಿಗೆಗೆ ದೊರೆಯುವಂತಾಗಲು ಅವರು ಜಾಗ್ರತೆ ಗುಣಮುಖರಾಗಲಿ ಎಂದು ಈ ಮಾನ್ಯ ಸಭೆ ಒಮ್ಮತ್ರದಿಂದ ಪ್ರಾರ್ಥನೆ ಮಾಡಬೇಕಾಗಿ ನಾನು ಈ ಒಂದು ಸಣ್ಣ ನಿರ್ಣಯವನ್ನು ಮಂಡಿಸಿದ್ದೇನೆ. ಇದಕ್ಕೆ ಮಾನ್ಯ ಸಭೆ ಅನುಮೋದನೆ ಕೊಡಬೇಕೆಂದು, ನನ್ನ ಒಂದು ಪ್ರಾರ್ಥನೆಯನ್ನು ವೈಯಕ್ತಿಕವಾಗಿ ಸಲ್ಲಿಸುತ್ತಾ ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ. ಮತ್ತೆ ನನಗೆ ಈ ಒಂದು ಅವಕಾಶ ದೊರೆತಿದ್ದಕ್ಕೆ ನನಗೆ ಬಹಳ ಆನಂದ ಕೂಡ ಆಗಿದೆ. ಏಕೆಂದರೆ ಅವರ ನನ್ನ ವೈಯಕ್ತಿಕ ಸಂಬಂಧ ಬಹಳ ದಿವಸಗಳದ್ದು ಎಂದು ಮತ್ತೆ ಜ್ಞಾಪಕ ಮಾಡಿಕೊಂಡು, ಈ ಒಂದು ಅವಕಾಶ ನನಗೆ ದೊರೆತಿದಕ್ಕೆ ನನಗೆ ಹೆಚ್ಚು ಆನಂದ ಉಂಟಾಗಿದೆಯೆಂದು ಹೇಳುತ್ತಾ, ಈ ಸಭೆ ಇದಕ್ಕೆ ಒಮ್ಮತ್ರದಿಂದ ಅನುಮೋದನೆ ಕೊಡಬೇಕೆಂದು ಪ್ರಾರ್ಥಿಸಿಕೊಂಡು ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

*****

## ಬಾಯಿ ಚಪಲಕ್ಕೆ ಮಾತಾಡುವುದಾದರೆ!

21 ಮಾರ್ಚ್ 2001

**ಶ್ರೀ ಕೆ.ಎಚ್. ರಂಗನಾಥ್** (ಅರಣ್ಯ ಸಚಿವರು).- ಮಾನ್ಯ ಉಪಾಧ್ಯಕ್ಷರೆ, ಮಾನ್ಯ ಸದಸ್ಯರು ಸುದ್ದಿ ಪ್ರಚಾರಕ್ಕಾಗಿ ಮಾತನಾಡುವುದಾದರೆ ಆಗಬಹುದು. ಅದಕ್ಕೆ ನಮ್ಮದೇನೂ ಅಡ್ಡಿ ಇಲ್ಲ. ಆದರೆ ಅಂಥಾದ್ದು ಏನಾದರೂ ಆಪಾದನೆ ಇದ್ದರೆ ಸಂಬಂಧಪಟ್ಟವರಿಗೆ ನೋಟೀಸ್ ಕೊಟ್ಟು ಸಭೆಗೆ ಬಂದು ತಮ್ಮ ಗಮನಕ್ಕೂ ಕೊಡಬೇಕು.

ಇದು ಸೀರಿಯಸ್ ಅಲಿಗೇಷನ್. ರೂಲ್ಸ್ ಆಫ್ ಪ್ರೊಸಿಜರ್ ಪ್ರಕಾರ ಆ ರೀತಿ ಇದೆ. ಏಕೆಂದರೆ ಯಾರಿಗೆ ಇಲ್ಲಿ ಡಿಫೆಂಡ್ ಮಾಡುವುದಕ್ಕೆ ಆಗುವುದಿಲ್ಲ ಅವರ ಬಗ್ಗೆ ಮಾತನಾಡುವುದು ತಪ್ಪಾಗುತ್ತದೆ. ಅವರು, ಯಾರೋ ಚೇರ್‌ಮನ್ ಎಂದು ಹೇಳಿದರು. ಹಾಗೂ ವರ್ಗ ಮಾಡಿದರು ಎಂದು ಹೇಳಿದರು. ಇದು ನಾವು ಸಭೆಯನ್ನು ಬೇರೆ ರೀತಿಯಲ್ಲಿ ಬಳಸಿಕೊಂಡರೆ ತಪ್ಪಾಗುತ್ತದೆ. ಬಾಯಿ ಚಪಲಕ್ಕೆ ಮಾತನಾಡುವುದಾದರೆ ಮಾತನಾಡಲಿ.

ಪತ್ರಿಕೆ ಓದಿದವರು ಏನಪ್ಪ ಸುಮ್ಮನೆ ಏನು ಬೇಕಾದರೂ ಮಾತನಾಡುತ್ತಾರೆ ಎಂದು ತಿಳಿದುಕೊಳ್ಳುತ್ತಾರೆ. ಇದು ಬಹಳ ದೊಡ್ಡ ಸಭೆ. ಇಲ್ಲಿ ಆಪಾದನೆ ಮಾಡಬಾರದು ಎಂದು ಅಲ್ಲ. ಆಪಾದನೆ ಮಾಡುವುದಕ್ಕೆ ಎಲ್ಲಾ ಅವಕಾಶ ಇದೆ. ಹಿಂದೆಯೂ ಮಾಡಿದ್ದಾರೆ.

ಪಾರ್ಲಿಮೆಂಟ್‌ನಲ್ಲಿ ಕೂಡ ಆಡಳಿತ ಪಕ್ಷದ ಮೇಲೆ, ಉದಾಹರಣೆಗೆ ನೆಹರು ಅವರ ಅಳಿಯ, ಫಿರೋಜ್ ಗಾಂಧಿ ಕೂಡ ಆಪಾದನೆ ಮಾಡಿದ್ದರು. ಮಾನ್ಯ ಸದಸ್ಯರು ಕಲಿತುಕೊಳ್ಳುವುದು ಬಹಳ ಇದೆ. ತಾವು ಸುದ್ದಿ ಪ್ರಚಾರಕ್ಕಾಗಿ ಮಾತನಾಡುವುದಾದರೆ ಮಾತನಾಡಬಹುದು. ನಮ್ಮದೇನೂ ಅಭ್ಯಂತರ ಇಲ್ಲ. ನಾಲ್ಕಾರು ಸಲ ಇದೇ ರೀತಿ ಮಾತನಾಡಿದ ಮೇಲೆ ಜನರೇ ಹೇಳುತ್ತಾರೆ, ಸುಮ್ಮನೆ ಮಾಡನಾಡುತ್ತಾರೆ ಬಿಡು ಎಂದು. ತಮ್ಮಲ್ಲಿ ಅಂಕಿ ಅಂಶಗಳು ಇದ್ದರೆ, You pin him down. ಈ ಸಭೆ ಅವನನ್ನು ಶಿಕ್ಷೆ ಮಾಡುವ ರೀತಿಯಲ್ಲಿ pin him down. ಸುಮ್ಮನೆ ಸುದ್ದಿ ಪ್ರಚಾರಕ್ಕಾಗಿ ಮಾತನಾಡುವುದಾದರೆ ಹೇಗೆ?

*****

## ಕಳ್ಳಭಟ್ಟಿ ತಯಾರಿಕೆಗೆ ತಡೆಯೊಡ್ಡಿ

10 ಜುಲೈ 1967

ಶ್ರೀ ಕೆ.ಎಚ್. ರಂಗನಾಥ್ (ಮೂಡಿಗೆರೆ).- ಮಾನ್ಯ ಅಧ್ಯಕ್ಷರೇ, ಸಭೆಯ ಮುಂದಿರುವ ಪ್ರತಿಯೊಂದು ಬೇಡಿಕೆಯನ್ನೂ ವಿರೋಧಿಸುತ್ತಾ ಕೆಲವಾರು ಮಾತುಗಳನ್ನಾಡಲು ಇಚ್ಛಿಪಡುತ್ತೇನೆ. ಮೊದಲನೆಯದಾಗಿ ಎಕ್ಸೈಜು ಬಾಬಿನಲ್ಲಿ ಈ ವರ್ಷದ ಆದಾಯವನ್ನು ನೋಡುವುದಾದರೆ ಹೋದ ವರ್ಷಕ್ಕಿಂತ ಈ ವರ್ಷ ಸುಮಾರು 20 ಲಕ್ಷ ರೂಪಾಯಿಗಳಷ್ಟು ಕಡಿಮೆ ಅಂದಾಜು ಮಾಡಲಾಗಿದೆ. ಇದಕ್ಕೇನು ಕಾರಣವೆಂಬುದನ್ನು ಸರಕಾರದವರು ತಿಳಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಅಲ್ಲದೆ ಎಕ್ಸೈಜು ಡ್ಯೂಟಿಯಲ್ಲಿ ಕಂಟ್ರಿ ಫರ್ಮೆಂಟೆಡ್ ಲಿಕ್ಕರ್‌ನಿಂದ ಬರುವ ಆದಾಯ 65-66 ರಲ್ಲಿ 2 ಕೋಟಿ 32 ಲಕ್ಷವಿತ್ತು, 66-67ರಲ್ಲಿ 1 ಕೋಟಿ 63 ಲಕ್ಷಕ್ಕೆ ಇಳಿಯಿತು, 66-67ರಲ್ಲಿ ಆದ ರಿವೈಜ್ಡ್ ಎಸ್ಟಿಮೇಟಿನಂತೆ ಅದು 1 ಕೋಟಿ 40 ಲಕ್ಷವಾಯ್ತು. ಹೀಗೆ ಕಡಿಮೆಯಾಗಿ 67-68ರಲ್ಲಿ 1 ಕೋಟಿ 27 ಲಕ್ಷವಾಗಿದೆ. ಇದನ್ನು ನೋಡಿದರೆ ದಕ್ಷತೆಯಿಂದ ಕೆಲಸ ಮಾಡುತ್ತಿಲ್ಲವೆಂದು ಹೇಳಬಹುದು. ಕಾರಣವೇನೆಂದರೆ ಅಂಗಡಿಗಳನ್ನು ಹರಾಜುಮಾಡುವ ವಿಷಯದಲ್ಲಿ ಸರಕಾರದ ಕಂಟ್ರಾಕ್ಟರ್ ಕೈಗೊಂಬೆಯಾಗಿ ವರ್ಷೇವರ್ಷೆ ಬೇರೆ ಬೇರೆ ಕ್ರಮ ಅನುಸರಿಸುತ್ತಿದೆ. ಹಿಂದೆ ತಾಲ್ಲೂಕು ಯೂನಿಟ್ ಮಾಡಿ ಹರಾಜುಮಾಡುತ್ತಿದ್ದರು, ಜಿಲ್ಲೆ ಯೂನಿಟ್ ಮಾಡುವುದಕ್ಕೆ ಪ್ರಾರಂಭ ಮಾಡಿದರು. ಮುಂದೆ

ಡಿವಿಜನ್ ಒಂದು ಯೂನಿಟ್ ಮಾಡಿ ಹರಾಜು ಮಾಡಿದ್ದಾರೆ. ಇದರಿಂದ ಹಣವಿರುವವರಿಗೆ ಮಾತ್ರ ಅರ್ನೆಸ್ಟ್ ಡಿಪಾಜಿಟ್ಟು ಕಟ್ಟಲು ಸಾಧ್ಯ, ಅವರು ಮಾತ್ರ ಹರಾಜಿನಲ್ಲಿ ಭಾಗವಹಿಸುತ್ತಾರೆ, ಸಣ್ಣ ಕಂಟ್ರಾಕ್ಟರುಗಳಿಗೆ ಹೆಚ್ಚು ಹಣ ಕಟ್ಟಲು ಸಾಧ್ಯವಿಲ್ಲ. ಹೀಗಾಗಿ ಕೆಲವರ ಮನಾಪಲಿಯನ್ನು ಸರಕಾರ ನಿರ್ಮಾಣ ಮಾಡುತ್ತಿದೆ. ಇದನ್ನು ಮಾಡದೆ ಸರಕಾರ ಪ್ರತಿ ಅಂಗಡಿಯನ್ನೂ ಹರಾಜು ಮಾಡಿದರೆ ಸರಕಾರಕ್ಕೆ ಜಾಸ್ತಿ ಹಣ ಬರುತ್ತದೆ.

ಈಗಿರುವ ಪಾನ ನಿರೋಧವನ್ನು ಹೆಚ್ಚು ಪರಿಣಾಮಕಾರಿಯಾಗಿ ಜಾರಿಗೆ ಕೊಡಬೇಕು, ಇದರಿಂದ ಹೆಚ್ಚು ಅನುಕೂಲವಾಗುತ್ತದೆ. ಕಾರಣ ಅಂಕಿ ಅಂಶಗಳಿಂದ ವ್ಯಕ್ತವಾಗುವುದು. ನಮ್ಮ ಕರ್ನಾಟಕದಲ್ಲಿರುವ 2 ಕೋಟಿ 32 ಲಕ್ಷ ಪ್ರಜೆಯಲ್ಲಿ ಅರ್ಧ ಹೆಣ್ಣುಮಕ್ಕಳಿದ್ದಾರೆ. ಅವರು ಕುಡಿಯುವುದಿಲ್ಲ, ಕುಡಿಯುವವರ ಸಂಖ್ಯೆ ಸುಮಾರು ಸೇಕಡ 5-6 ಇರಬಹುದು. ಪೋಲೀಸರೂ ಕಳ್ಳಭಟ್ಟಿ ತಯಾರಿಸುವವರ ಜೊತೆಗೆ ಸೇರಿ ಷರೀಕಾಗಿರುವುದರಿಂದ ಪಾನನಿರೋಧ ಸರಿಯಾಗಿ ಜಾರಿಗೆ ಬಂದಿಲ್ಲ, ಕಳ್ಳಭಟ್ಟಿ ಹೆಚ್ಚಾಗಿದೆ, ನಿರೋಧವನ್ನು ರದ್ದುಮಾಡಿದರೆ ಸರಕಾರಕ್ಕೆ ಆದಾಯವಾದರೂ ಬರುತ್ತದೆ ಎಂದು ಹೇಳುತ್ತಾರೆ. ನಾಳೆ ಇದಕ್ಕೆ ಸಂಬಂಧಪಟ್ಟ ಬಿಲ್ಲು ಬರುತ್ತದೆ. ಇಂದು ನೋಡುವುದಾದರೆ 1967-68ರ ರಿವೈಜ್ಡ್ ಅಂದಾಜು 4 ಕೋಟಿ 38 ಲಕ್ಷಕ್ಕೆ ಆಗಿದೆ, ಹೋದ ಸಲ 4 ಕೋಟಿ 5 ಲಕ್ಷವಿತ್ತು. ಈ ಅಂದಾಜಿನ ಪ್ರಕಾರ 30 ಲಕ್ಷ ಜಾಸ್ತಿಯಾಗಿದೆ, ಹೆಚ್ಚು ನಿರೀಕ್ಷೆಯಿಲ್ಲ. ಆದರೆ ಕಂಟ್ರಾಕ್ಟರುಗಳನ್ನು ಐಶ್ವರ್ಯವಂತರನ್ನಾಗಿ ಮಾಡುವುದಕ್ಕೆ ದಾರಿ ಮಾಡಿಕೊಡಲಾಗುತ್ತಿದೆ ಎಂಬ ಭಾವನೆಯಿದೆ. ಇದಕ್ಕೆ ಸಂಬಂಧಪಟ್ಟ ಇಲಾಖೆ ಸರಿಯಾಗಿ ಕೆಲಸಮಾಡುತ್ತಿಲ್ಲ, ಸರಕಾರ ಕಂಟ್ರಾಕ್ಟರ್ ಕೈಗೊಂಬೆಯಾಗಿದೆ. ಎಕ್ಸೈಜು ಡ್ಯೂಟಿ ಕಂಟ್ರಿ ಫರ್ಮೆಂಟೆಡ್ ಲಿಕ್ಕರ್‌ನಿಂದ 66-67 ರಲ್ಲಿ 86 ಲಕ್ಷ ರೂಪಾಯಿ ಬರುತ್ತಿತ್ತು. 67-68ಕ್ಕೆ 81 ಲಕ್ಷ ರೂಪಾಯಿ ಬರಬಹುದೆಂದು ಅಂದಾಜಿದೆ. ಕಂಟ್ರಿ ಪರ್ಮೆಂಟ್ ಲಿಕ್ಕರ್ ಷಾಪ್‌ರೆಂಟ್ 66-67ರಲ್ಲಿ 1 ಕೋಟಿ 42 ಲಕ್ಷ ಇತ್ತು, 67-68ರಲ್ಲಿ 1 ಕೋಟಿ 7 ಲಕ್ಷಕ್ಕೆ ಅಂದಾಜಾಗಿದೆ. ಇದನ್ನು ನೋಡಿದರೆ ಇಲಾಖೆಯವರು ದಕ್ಷತೆಯಿಂದ ಕೆಲಸಮಾಡುತ್ತಿಲ್ಲವೆಂದು ಕಂಡುಬರುತ್ತದೆ. ಇದನ್ನು ಗಮನಿಸಿ ಸರಕಾರ ದಕ್ಷತೆಯಿಂದ ಕೆಲಸಮಾಡಬೇಕೆಂದು ಅದಕ್ಕೆ ಸರಿಯಾದ ಪ್ರಯತ್ನ ಮಾಡಬೇಕೆಂದು ಹೇಳುತ್ತೇನೆ.

ಇನ್ನು ಸೇಲ್ಸ್ ಟ್ಯಾಕ್ಸ್ ಡಿಪಾರ್ಟ್‌ಮೆಂಟನ್ನು ತೆಗೆದುಕೊಳ್ಳುವುದಾದರೆ ಸೇಲ್ಸ್ ಟ್ಯಾಕ್ಸ್ ಬಾಬಿನಿಂದ ಇವೊತ್ತು ನಮ್ಮ ರಾಜ್ಯದಲ್ಲಿ ಹೆಚ್ಚು ಉತ್ಪತ್ತಿ ಬರುತ್ತಿದೆ. ಹೋದ ಸಾರಿ 24 ಕೋಟಿ ಇದ್ದದ್ದು ಈ ಸಾರಿ ರಿವೈಜು ಮಾಡಿದುದರಿಂದ 26-27 ಕೋಟಿಯಷ್ಟು ಹೆಚ್ಚು ಬಂದಿದೆ. 67-68ರಲ್ಲಿ ಸುಮಾರು 29 ಕೋಟಿಯಷ್ಟು ಬರುತ್ತದೆ ಎಂದು ನಿರೀಕ್ಷೆಗಿಂತ ಹೆಚ್ಚು ಅಶಿಸುತ್ತಿದ್ದಾರೆ. ಇನ್ನು ಕೆಲವು ಬಾಬುಗಳ ಮೇಲೆ ಸೇಲ್ಸ್ ಟ್ಯಾಕ್ಸ್ ಹಾಕುವುದು ತಪ್ಪು ಎಂದು ನನ್ನ ಅಭಿಪ್ರಾಯ, ಇದರಲ್ಲಿ ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ಹೇಳುತ್ತೇನೆ. ಫುಡ್‌ಗ್ರೇನ್ಸ್ ಮೇಲೆ ಸೇಲ್ಸ್ ಟ್ಯಾಕ್ಸ್ ಹಾಕುವುದನ್ನು ತೆಗೆಯಬೇಕು, ಏಕೆಂದರೆ ದಿನೇ

ದಿನೇ ಆಹಾರದ ಬೆಲೆಗಳು ಹೆಚ್ಚುತ್ತಾ ಹೋಗುತ್ತಿರುವುದರಿಂದ ಜನಗಳಿಗೆ ಬಹಳ ತೊಂದರೆಯಾಗುತ್ತಿದೆ. ಆಹಾರದ ಬೆಲೆ ಏರುತ್ತಿರುವ ಈ ಕಾಲದಲ್ಲಿ ಇಂತಹ ಪದಾರ್ಥಗಳ ಮೇಲೆ ಸೇಲ್ಸ್ ಟ್ಯಾಕ್ಸ್ ಹಾಕಿದರೆ ಸರಕಾರದವರೇ ಜನಗಳಿಗೆ ತೊಂದರೆ ಕೊಟ್ಟಂತಾಗುತ್ತದೆ. ಅಲ್ಲದೆ ಫರ್ಟಿಲೈಸರ್ಸ್‌ಗಳ ಮೇಲೆ ಹಾಗೂ ಎಸೆನ್‌ಷಿಯಲ್ ಕಮಾಡಿಟೀಸ್‌ಗಳ ಮೇಲೆ ಇರತಕ್ಕ ಟ್ಯಾಕ್ಸ್‌ಗಳನ್ನು ತೆಗೆಯಬೇಕು, ಇನ್ನು ಬೇರೆ ರೀತಿಯಲ್ಲಿ ಸರಕಾರ ಇಲ್ಲಿ ಆಗತಕ್ಕ ಕೊರತೆಯನ್ನು ತುಂಬಲು ಪ್ರಯತ್ನ ಮಾಡಬೇಕು. ಇನ್ನು ಅದರ್ ಟ್ಯಾಕ್ಸ್‌ಗಳೆಂಬ ಬಾಬಿನಲ್ಲಿ ಬೆಟ್ಟಿಂಗ್ ಟ್ಯಾಕ್ಸ್ ಇದರಿಂದ ಸುಮಾರು 42 ಲಕ್ಷ ಬರುತ್ತದೆ. ಎಂದು ಅಂದಾಜು ಮಾಡಿದ್ದಾರೆ. ಇದು ಸಾಹುಕಾರರು ಹಾಗೂ ಶ್ರೀಮಂತರು ಶನಿವಾರ ಭಾನುವಾರ ಕುದುರೆಯ ಮೇಲೆ ಯಥೇಚ್ಛವಾಗಿ ಹಣ ಸುರಿದು ಸಂಪಾದನೆ ಮಾಡುವ ಬಾಬು. ಇಂತಹವರ ಮೇಲೆ ಇನ್ನೂ ಹೆಚ್ಚು ಟ್ಯಾಕ್ಸ್ ಹೇರಿ ಅವರಿಂದ ಕೊರತೆಯಿಂದ ತುಂಬಿಕೊಳ್ಳಬಹುದು, ಎಂದು ನನ್ನ ಸಲಹೆ.

ಇನ್ನು ಸೇಲ್ಸ್ ಟ್ಯಾಕ್ಸ್‌ನ್ನು ಫುಡ್‌ಗ್ರೇನ್ಸ್ ಹಾಗೂ ಫರ್ಟಿಲೈಸರ್ಸ್‌ಗಳ ಮೇಲಿರುವುದನ್ನು ತೆಗೆಯಬೇಕು, ಲಗ್ಜುರಿ ಆರ್ಟಿಕಲ್ಸ್‌ಗಳ ಮೇಲೆ ಹೆಚ್ಚು ತೆರಿಗೆ ಹಾಕಬೇಕು ಎಂದು ನಾನು ಹೇಳುತ್ತೇನೆ. ಅಲ್ಲದೆ ಮಲ್ಟಿಪಾಯಿಂಟು ಸೇಲ್ಸ್ ಟ್ಯಾಕ್ಸ್‌ನ್ನು ತೆಗೆಯಬೇಕು, ಸಿಂಗಲ್ ಪಾಯಿಂಟು ಟ್ಯಾಕ್ಸ್ ಸರಕಾರ ಹಾಕಬೇಕು. ಬೇರೆ ಟ್ಯಾಕ್ಸ್‌ಗಳನ್ನು ಹಾಕಬಾರದು, ಹೊಸದಾಗಿ ಟ್ಯಾಕ್ಸ್‌ಗಳನ್ನು ಹಾಕುವುದಾದರೆ ಬಳಕೆದಾರರಿಗೆ ಬಹಳ ತೊಂದರೆಯಾಗುತ್ತದೆ.

ಇನ್ನು ಸೇಲ್ಸ್‌ಟ್ಯಾಕ್ಸ್ ಡಿಪಾರ್ಟ್‌ಮೆಂಟಿನಲ್ಲಿ ನಾವು ನಿರೀಕ್ಷಿಸಿದಷ್ಟು ಕೆಲಸ ನಡೆಯುತ್ತಿಲ್ಲ. ಇಲ್ಲಿ ಅಂಡರ್ ಅಸೆಸ್‌ಮೆಂಟು ಹಾಗೂ ಅಂಡರ್ ಎಸ್ಟಿಮೇಟುಗಳನ್ನು ಮಾಡುವುದು ಹೆಚ್ಚಾಗಿದೆ. ಇಲ್ಲಿರತಕ್ಕ ಅನೇಕ ನೌಕರರು ಯಥೇಚ್ಛವಾಗಿ ಸಂಪಾದನೆ ಮಾಡಿಕೊಂಡು ಐಶ್ವರ್ಯವಂತರಾಗಿದ್ದಾರೆ. ಕೇವಲ ಇನ್ನೂರು ಹಾಗೂ ಮುನ್ನೂರು ಸಂಬಳ ಬರುವ ಜನ ಬೇಕಾದಷ್ಟು ಸಂಪಾದನೆ ಮಾಡಿ ಆಸ್ತಿಗಳನ್ನು ಮಾಡಿಕೊಂಡಿದ್ದಾರೆ. ಇದನ್ನು ನೋಡಿದರೆ ನಿಮಗೇ ಆಶ್ಚರ್ಯವಾಗಬಹುದು. ಈ ಇಲಾಖೆಯಲ್ಲಿ ಕೆಲವರಿಗೆ ಸರಿಯಾದ ಪ್ರಮೋಷನ್ ವಗೈರೆ ಕೊಡದೆ ಇಂದು ಬಹಳ ಜನರಿಗೆ ತಾರತ್ಯ ಮಾಡುತ್ತಿದ್ದಾರೆ. ಇದರಿಂದಾಗಿ ಇವೊತ್ತು ಬೇಕಾದಷ್ಟು ರಿಟ್‌ಪಿಟಿಷನ್‌ಗಳು ಹೈಕೋರ್ಟಿನಲ್ಲಿವೆ. ಅಲ್ಲದೆ ಸರಕಾರದವರು ಹೈಕೋರ್ಟಿನವರು ಕೊಟ್ಟ ತೀರ್ಮಾನಕ್ಕೆ ಕೂಡ ಇಲಾಖೆಯವರು ತಲೆಬಾಗುವುದಿಲ್ಲ. ಇದರಿಂದ ಅನೇಕರಲ್ಲಿ ಅಶ್ರದ್ಧೆ ಹಾಗೂ ನಿರುತ್ಸಾಹಗಳು ಹೆಚ್ಚಾಗಿ ಅನೇಕರಿಗೆ ಬಹಳ ತೊಂದರೆಗಳಾಗಿವೆ ಎಂದು ಈ ಸಭೆಯ ಗಮನಕ್ಕೆ ತರಬೇಕಾಗಿದೆ.

ಒಂದು ನಿದರ್ಶನ ನನಗೆ ಚೆನ್ನಾಗಿ ಗೊತ್ತಿದೆ. ಎಕ್ಸೈಜ್ ಡಿಪಾರ್ಟ್‌ಮೆಂಟ್‌ನಲ್ಲಿದ್ದ ಒಬ್ಬರನ್ನು ಸೇಲ್ಸ್ ಟ್ಯಾಕ್ಸ್ ಡಿಪಾರ್ಟಿಮೆಂಟಿಗೆ ತಂದು ಇವರನ್ನು ಎಲ್ಲರ ಮೇಲೆ ಕೂರಿಸಿ

ಅವರಿಗೆ ಬಡ್ತಿ ಕೊಟ್ಟು ಇದ್ದ ಅಸಿಸ್ಟೆಂಟ್ ಕಮೀಷನರನ್ನು ಕೆಳಗೆ ಮಾಡಿ, ಅವರಿಗೆ ಈಗ ಡೆಪ್ಯುಟಿ ಕಮೀಷನರ್ ಕೆಲಸ ಕೊಡಬೇಕೆಂದು ಸರಕಾರ ಪ್ರಯತ್ನ ಮಾಡುತ್ತಿದೆ, ಬೇಕಾದರೆ ಅವರ ಹೆಸರನ್ನು ಹೇಳಬಹುದು. ಆದರೆ ಇಲ್ಲಿ ಹೇಳುವುದಿಲ್ಲ. ಹೀಗೆ ಇತರರಿಗೆ ಅನ್ಯಾಯಮಾಡಿ ಇನ್ನೊಬ್ಬರಿಗೆ ತೊಂದರೆಯಾಗುವಂತೆ ಸರಕಾರ ಮಾಡಿದರೆ ಅಲ್ಲಿ ಕೆಲಸ ಮಾಡತಕ್ಕ ನೌಕರರಲ್ಲಿ ಉತ್ಸಾಹ ಹೇಗತಾನೇ ಬರಬೇಕು? ಬೇರೆ ಇಲಾಖೆಯವರನ್ನು ಇಲ್ಲಿ ತಂದು ಎಲ್ಲರ ಮೇಲೆ ಇಡತಕ್ಕದ್ದು ನ್ಯಾಯವಾಗಿಲ್ಲ ಎಂದು ಸರಕಾರಕ್ಕೆ ಗೊತ್ತಿದ್ದರೂ ಮಾಡುತ್ತಿದ್ದಾರೆ. ಇದು ಸರಕಾರಕ್ಕೆ ಗೊತ್ತಿಲ್ಲದೆ ನಡೆಯುತ್ತಿಲ್ಲ. ಸರಕಾರಕ್ಕೆ ಗೊತ್ತಿದ್ದೇ ಇಂತಹ ಕೆಲಸಗಳು ನಡೆಯುತ್ತಿವೆ. ಇದರಿಂದಾಗಿ ಈ ಇಲಾಖೆಯಲ್ಲಿ ಕೆಲಸಗಳು ಚೆನ್ನಾಗಿ ನಡೆಯುವುದಿಲ್ಲ. ಇನ್ನು ಟ್ಯಾಕ್ಸ್‌ನ ಲೀಕೇಜುಗಳು ನಮ್ಮ ಕಣ್ಣಿಗೆ ಕಾಣುವಂತೆಯೇ ನಡೆಯುತ್ತಿವೆ. ಇದನ್ನು ಕಡೆಗಟ್ಟಲು ಸರಕಾರ ಇನ್ನೂ ಹೆಚ್ಚು ನಿಗಾ ವಹಿಸಬೇಕು. ಹಾಗೆ ಮಾಡಿದರೆ ಇನ್ನೂ ಹೆಚ್ಚು ಉತ್ಪತ್ತಿ ಪಡೆಯಲು ಸಾಧ್ಯವಾಗುತ್ತದೆ. ಸರಕಾರದವರು ಇದರ ಕಡೆಗೆ ನಿಗಾ ವಹಿಸಬೇಕು. ಫುಡ್‌ಗ್ರೇನ್ಸ್ ಮೇಲೆ ಇರುವ ಸೇಲ್ಸ್ ಟ್ಯಾಕ್ಸ್‌ನ್ನು ತೆಗೆಯಬೇಕು. ಇಲ್ಲದೇ ಇದ್ದರೆ ಆಹಾರ ದವಸಗಳನ್ನು ಕೊಳ್ಳುವವರ ಮೇಲೆ ಹಾಗೂ ಇತರ ಬಡ ಜನರ ಮೇಲೆ ವಿಪರೀತವಾಗಿ ಹೊರೆಬೀಳುತ್ತದೆ. ಇದನ್ನು ತಪ್ಪಿಸಬೇಕು.

*****

## ಹೆಂಡ : ಗಾಜಿನ ಮನೆಯಲ್ಲಿ ಕುಳಿತು ಕಲ್ಲೆಸೆದಂತೆ!

3 ಆಗಸ್ಟ್ 2001

ಶ್ರೀ ಕೆ.ಎಚ್. ರಂಗನಾಥ್ (ಅರಣ್ಯ ಸಚಿವರು).- ಮಾನ್ಯ ಉಪಾಧ್ಯಕ್ಷರೆ, ಹೆಂಡ ಕುರಿತ ಚರ್ಚೆ ನಿನ್ನೆ ಮೊನ್ನೆಯದಲ್ಲ. ನಿಮಗಿಂತಲೂ (ಬೈರೇಗೌಡ) ಮೊದಲೇ ಇದರ ವಿರುದ್ಧವಾಗಿ ಮಹಾತ್ಮಗಾಂಧಿಯವರು ಧ್ವನಿ ಎತ್ತಿದ್ದಾರೆ. 1947ನೇ ಇಸವಿಯಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ತರುವಾಯದ ಒಂದೇ ದಿವಸದಲ್ಲಿ ದಿವಂಗತ ಮೊರಾರ್ಜಿ ದೇಸಾಯಿಯವರು ಅಂದಿನ ಬೊಂಬಾಯಿ ಪ್ರಾಂತ್ಯದಲ್ಲಿ ಇದನ್ನು ನಿಷೇಧಿಸಿ ಟೆನೆನ್ಸಿಯನ್ನು ಜಾರಿಗೆ ಕೊಡುವ ಮೂಲಕ ಗೇಣಿದಾರರಿಗೆ ಮಾಲೀಕತ್ವವನ್ನು ಖಾಯಂಗೊಳಿಸಲಾಯಿತು. ಮದ್ಯಪಾನ ನಿಷೇಧ ಕುರಿತಂತೆ ಧ್ವನಿ ಎತ್ತಿದವರಲ್ಲಿ ನಾನೇ ಮೊದಲಿಗ ಎಂದು ಮಾನ್ಯ ಬೈರೇಗೌಡರು ಹೇಳಿದರೆ ಹೇಗೆ? 1948ರಿಂದ 1968ರವರೆವಿಗೂ ಮೈಸೂರು ಹಾಗೂ ಹೈದರಾಬಾದ್-ಕರ್ನಾಟಕ ಪ್ರಾಂತ್ಯದಲ್ಲಿ ಇದು ಇರಲಿಲ್ಲವೆಂದು ಕಾಣುತ್ತದೆ.

ಈ ಹಿನ್ನೆಲೆಯಲ್ಲಿಯೇ 1968ರಲ್ಲಿ ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಸಚಿವರಾಗಿದ್ದ ಶ್ರೀಮತಿ ಯಶೋಧರಮ್ಮನವರು ತಮ್ಮ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಆಗ ಮಾನ್ಯ ರಾಮಕೃಷ್ಣ ಹೆಗಡೆಯವರು ಅಬ್ಕಾರಿ ಮಂತ್ರಿಗಳಾಗಿದ್ದರು. ನಾನು ಅತ್ತ ಕಡೆ

ಕುಳಿತಿದ್ದೆ ಮದ್ಯಪಾನದ ಮೇಲಿನ ನಿಷೇಧವನ್ನು ತೆಗೆದುಹಾಕಿದಾಗ ಬೆಂಗಳೂರು ನಮ್ಮ ಮೈಸೂರು ನಗರಗಳಲ್ಲಿ ಹೆಂಡ ಮತ್ತು ಸಾರಾಯಿ ಲಭ್ಯವಿತ್ತು. ಇದರಿಂದಾಗಿ ಬೇಸರಪಟ್ಟು ಶ್ರೀಮತಿ ಯಶೋಧರಮ್ಮನವರು ತಮ್ಮ ಸ್ಥಾನಕ್ಕೆ ರಾಜೀನಾಮೆಯಿತ್ತಿರುವುದು ಸದನದ ನಡವಳಿಕೆಯಲ್ಲಿದೆ. ಅವರ ಭಾಷಣವನ್ನು ತಾವು ಓದಬೇಕು. ಮದ್ಯಪಾನ ನಿಷೇಧಕ್ಕೆ ಮಾನ್ಯ ನಿಜಲಿಂಗಪ್ಪನವರು ಒಪ್ಪಿದರೂ, ಪುನಃ 1968ರಿಂದ ಜಾರಿಗೆ ಬಂದಾಗ ಹೆಂಡವನ್ನು ನಿಷೇಧಿಸಬೇಕೆಂದು ಹೇಳಿದರು. ಸಾರಾಯಿ ಲಾಬಿ ಜಾಸ್ತಿಯಿರಬಹುದು. ಹೆಂಡದ ಲಾಬಿ ಕಡಿಮೆ ಇರಬಹುದು. ಆದುದರಿಂದ ನಿಮಗಿಂತಲೂ ಮುಂಚಿತವಾಗಿ ಇದರ ವಿಚಾರದಲ್ಲಿ ಧ್ವನಿಯೆತ್ತಿರುವವರು ಇರುವುದರಿಂದ ಇದರ ಸೂತ್ರಧಾರಿಗಳು ನೀವಲ್ಲ. ದಿವಂಗತ ಶ್ರೀಮತಿ ಯಶೋಧರಮ್ಮನವರು ಇದಕ್ಕಾಗಿ ದೊಡ್ಡ ತ್ಯಾಗ ಮಾಡಿರುವುದು ನನಗೆ ಗೊತ್ತಿದೆ. ಯಾವ್ಯಾವ ಹೆಂಡದ ಗುತ್ತಿಗೆದಾರರು ಇಲ್ಲಿಗೆ ಬರುವಾಗ ಎಷ್ಟೆಷ್ಟು ಬಾಕಿ ಕೊಡಬೇಕಾಗಿತ್ತು? ಯಾರ್ಯಾರಿಗೆ ಅದನ್ನು ಬಿಡುಗಡೆ ಮಾಡಿದರು ಎಂಬುದೆಲ್ಲಾ ನನಗೆ ಗೊತ್ತಿದೆ. ಈ ಕುರಿತಂತೆ ಅಂದು ಸದನದಲ್ಲಿ ಜರುಗಿದ ಕಲಾಪಗಳೆಲ್ಲವೂ ನಡವಳಿಕೆಯಲ್ಲಿರುವುದರಿಂದ ತಾವು ದಯಮಾಡಿ ಓದಬೇಕು.

ಅಬ್ಕಾರಿ ಲಾಬಿ ಹಿಂದೆ ಇರಲಿಲ್ಲ. ಅಬ್ಕಾರಿ ಗುತ್ತಿಗೆದಾರರು ಸರ್ಕಾರದಿಂದ ಬಹಳ ದೂರ ಇರುತ್ತಿದ್ದರು. ದಿವಂಗತ ವೆಂಕಟಸ್ವಾಮಿಯವರಾಗಲಿ, ಗುರುಸ್ವಾಮಿಯವರಾಗಲಿ ಅವರುಗಳು ಅಬ್ಕಾರಿ ವಲಯದಲ್ಲಿ ದೊಡ್ಡ ಗುತ್ತಿಗೆದಾರರಾಗಿದ್ದರು. ಸರ್ಕಾರದಿಂದ ದೂರ ಇದ್ದಂಥವರು. ಇವೊತ್ತು ಯಾವುದೋ ಕಾರಣದಿಂದ ಅವರೆಲ್ಲರೂ ಹತ್ತಿರ ಬಂದಿದ್ದಾರೆ. ಅದರ ಗುತ್ತಿಗೆ ಮಾಡುವವರಿಗೂ ಕಾಂಗ್ರೆಸ್ ಸದಸ್ಯತ್ವದಲ್ಲಿ ಅವಕಾಶ ಕೊಡುತ್ತಿರಲಿಲ್ಲ. ಬರ್ರಾಬರ್ರಾ ಅದರಲ್ಲಿ ಸಡಿಲವಾಗಿ ಅವರು ಅಭ್ಯರ್ಥಿಗಳೂ ಆಗಿದ್ದಾರೆ. ಮಂತ್ರಿಗಳೂ ಆಗಿದ್ದಾರೆ.

ಶ್ರೀ ಕೆ. ಶ್ರೀನಿವಾಸಗೌಡ.– ಮೊದಲು ಅಬ್ಕಾರಿಯಿಂದ ರಾಜಕೀಯ ದೂರವಿತ್ತು ಆದರೆ ಈಗ ಅಬ್ಕಾರಿ ಇಲ್ಲದೆಯೇ ರಾಜಕೀಯವನ್ನೇ ಮಾಡಲು ಆಗುವುದಿಲ್ಲ.

ಶ್ರೀ ಕೆ.ಎಚ್. ರಂಗನಾಥ್.– ಅದು ತಮಗೆ ಹೊರತಾಗಿತ್ತೆ? ತಮಗೂ ಇಲ್ಲ.

ಶ್ರೀ ಕೆ. ಶ್ರೀನಿವಾಸಗೌಡ.– ನಾನೂ ಅದರಲ್ಲಿ ಸೇರಿಕೊಂಡು ಮಾತನಾಡುತ್ತಿದ್ದೇನೆ. ಇದರಲ್ಲಿ ಮುಚ್ಚಿಡುವುದೇನ ೨ ಇಲ್ಲ.

ಶ್ರೀ ಕೆ.ಎಚ್. ರಂಗನಾಥ್.– ಗಾಜಿನ ಮನೆಯಲ್ಲಿ ವಾಸ ಮಾಡುವವರು ಇನ್ನೊಬ್ಬರ ಮನೆಗೆ ಕಲ್ಲನ್ನು ಎಸೆಯಲೇಬಾರದು.

ಶ್ರೀ ಕೆ. ಶ್ರೀನಿವಾಸಗೌಡ.– ನಾನು ಹೇಳುತ್ತಿರುವುದೂ ಅದನ್ನೇ!

ಶ್ರೀ ಎಸ್.ಎಸ್. ಪಾಟೀಲ್.- ಮಾನ್ಯ ರಂಗನಾಥ್‌ರವರು ಹೇಳಿದ ಮಾತಿಗೆ ನಮ್ಮದು ಬೇರೆ ಮಾತು ಇಲ್ಲ. ಸ್ವಾತಂತ್ರ್ಯ ಹೋರಾಟದಲ್ಲಿ ಇದನ್ನು ಮಾಡಿದರೆ ಬಡವರಿಗೆ ಅನ್ಯಾಯವಾಗುತ್ತದೆಂದು ಹೋರಾಟ ಮಾಡಿದ್ದಾರೆ, ಇಲ್ಲವೆಂದು ಹೇಳವುದಿಲ್ಲ. ಇವತ್ತು ತಾವು ರಾಜ್ಯದಲ್ಲಿ ಪಾನ ನಿರೋಧವನ್ನು ಜಾರಿಗೆ ತಂದರೆ ನಾವು ಇದರ ಬಗ್ಗೆ ಏನನ್ನೂ ಹೇಳುವುದಿಲ್ಲ. ಆದರೆ ತಾವು ಅದನ್ನು ಮಾಡುತ್ತಿಲ್ಲ. ಒಂದು ಕಡೆ ಪಾನ ಮಾಡಲು ಅವಕಾಶ ಕೊಟ್ಟಿದ್ದೀರಿ. ಈ ದೃಷ್ಟಿಯಿಂದ ರೈತರಿಗೇಕೆ ಅನ್ಯಾಯ ಮಾಡುತ್ತೀರಿ ಎಂಬುದು ನಿಮ್ಮ ಪ್ರಶ್ನೆ.

ಶ್ರೀ ಕೆ.ಎಚ್. ರಂಗನಾಥ್.- ಇವತ್ತು ರಾಜಕೀಯವಾಗಿ ಮಾತನಾಡಲು ಇದನ್ನು ಬಳಸಬೇಡಿ. ಮಾನ್ಯ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದ ಸಮಯದಲ್ಲಿ ಇದನ್ನು ಸಮರ್ಥನೆ ಮಾಡಿದವರು ಅಂದಿನ ಹಣಕಾಸು ಮತ್ತು ಅಬ್ಕಾರಿ ಸಚಿವರಾಗಿದಂಥ ಮಾನ್ಯ ರಾಮಕೃಷ್ಣ ಹೆಗಡೆಯವರು.

ಶ್ರೀ ಎಸ್.ಎಸ್. ಪಾಟೀಲ್.- ಆ ಕಾಲಕ್ಕೆ ಮಾಡಿದ್ದರು. ನಾನು ಇಲ್ಲವೆಂದು ಹೇಳುವುದಿಲ್ಲ. ಮಾನ್ಯ ನಿಜಲಿಂಗಪ್ಪನವರೂ ಸಹ ತಪ್ಪು ಮಾಡಿದೆವು ಎಂದರು. ಆದರೆ ಇವತ್ತು ಮದ್ಯಪಾನ ಜಾರಿಯಲ್ಲಿದೆ. ಆದರೆ ನೀರಾವನ್ನು ಇಳಿಸಲು ಸರ್ಕಾರ ವಿರೋಧ ಮಾಡಲು ಬರುವುದೇ ಇಲ್ಲ ಮತ್ತು ಬರುವುದೇನಿದೆ ಅದನ್ನು ಮಾತ್ರ ಜಾರಿ ಮಾಡಬಾರದೆಂದಿದೆ. ನೀರಾವನ್ನು ಇಳಿಸಿದರೆ ಏಕೆ 'ಅಡ್ಡಿ ಮಾಡಲು ಹೋಗುವಿರಿ? ಅದು ಹೆಂಡವಾಗಿದ್ದರೆ ಕೇಸನ್ನು ಹಾಕಿ, ನೀರಾವನ್ನು ಇಳಿಸಲು ಏಕೆ ಅಡ್ಡಿ ಮಾಡುತ್ತೀರಿ? ಅದು ತಪ್ಪು.

ಶ್ರೀ ಕೆ.ಎಚ್. ರಂಗನಾಥ್.- ತಾವು ಆಕ್ರೋಶದಿಂದೇಕೆ ಮಾತನಾಡುತ್ತೀರಿ? ಸದಸ್ಯರೊಬ್ಬರು ಮಾತನಾಡುತ್ತಿರುವಾಗ ಬಾಟಲಿಯಲ್ಲಿ ನೀರಾ ತಂದೆಯೆಂದು ಹೇಳಿದರು. ಆರು ಗಂಟೆಯಾದ ನಂತರ ಈಸ್ಟ್ ಫಾರಂ ಆಗುತ್ತದೆ. ಫರ್ಮೆಂಟೇಷನ್ ಜಾರಿಯಾಗುತ್ತಿದೆ. ಅದು ಬರುವಾಗ ಹೆಂಡವಾಗುತ್ತದೆ. ದೋಸೆ ಹಿಟ್ಟು 'ಹೇಗೆ ಹುಳಿಯಾಗುತ್ತ ಬರುತ್ತದೋ ಹಾಗೆ ಇದೂ ಸಹ ಸಿಹಿ ಇದ್ದಾಗ ನೀರಾ, ಹುಳಿಯಾಗುತ್ತಾ ಬಂದಾಗ ಹೆಂಡ, ಹತ್ತು ಗಂಟೆಗೆ ನೀರಾ ಬಾಟೆಲ್ ತಂದೆ ಎಂದಾಗ ಅದು ನೀರಾ ಅಲ್ಲವೆಂದು ಮಾನ್ಯ ಗೃಹ ಸಚಿವರು ಹೇಳಿದರು.

ಶ್ರೀ ಎಸ್.ಎಸ್. ಪಾಟೀಲ್.- ರೈತರು ನೀರಾವನ್ನು ಇಳಿಸಿ ಕೊಡುತ್ತಾರೆ. ಮುಂದೆ ಏನಾಗುತ್ತದೋ ಅದು ಬೇರೆ ಮಾತು. ರೈತರು ಇಳಿಸುವ ನೀರಾವನ್ನು ತಡೆಗಟ್ಟಲು ಸರ್ಕಾರಕ್ಕೆ ಅಧಿಕಾರವಿಲ್ಲ. ಯಾವ ಕಾಯ್ದೆಯಲ್ಲೂ ಅವಕಾಶವಿಲ್ಲ.

ಶ್ರೀ ಸಿ. ಬೈರೇಗೌಡ.- ಹಿರಿಯರಾದಂಥ ಮಾನ್ಯ ರಂಗನಾಥ್‌ರವರು ಪಾನ ನಿರೋಧದ ಬಗೆಗಿನ ಚರಿತ್ರೆಯನ್ನು ನೆನಪಿಸಿದ್ದಾರೆ. ಅದಕ್ಕೆ ಧನ್ಯವಾದಗಳು. ಯಾವ್ಯಾವ ಘಟ್ಟದಲ್ಲಿ ಏನೇನು ಆಯಿತು ಎಂಬುದನ್ನು ತಿಳಿಸಿದ್ದಾರೆ. ಮೊದಲು ಸಾರಾಯಿ ಹೆಂಡ ವಿಸ್ಕಿ ಮತ್ತೊಂದು ಇತ್ತು. ಹೆಂಡ, ಸಾರಾಯಿ ಎರಡೂ ಇದ್ದಂಥ ಕಾಲದಲ್ಲಿ ಹೆಂಡವನ್ನು ಕೊಡುವುದಕ್ಕೆ ಬದಲಾಗಿ ಕ್ಲೊರೋ ಹೈಡ್ರೈಡನ್ನು ನೀರಿಗೆ ಬೆರೆಸಿ ವಿಷವನ್ನು ಕೊಡುತ್ತಿದ್ದಂಥ ಪರಿಸ್ಥಿತಿ ಬಂತು. ಆಗ ನಿಜವಾದಂಥ ಹೆಂಡವನ್ನು ಕೊಡುತ್ತಿರಲಿಲ್ಲ.

ಶ್ರೀ ಕೆ.ಎಚ್. ರಂಗನಾಥ್.- ನಾವೆಲ್ಲರೂ ಸಾರ್ವಜನಿಕ ಹಿತಕ್ಕಾಗಿ ಸದಸ್ಯರಾಗಿ ಇಲ್ಲಿಗೆ ಬಂದಿದ್ದೇವೆ. ನಾವು ತೆಂಗಿನ ಮರದ ಬಗ್ಗೆ ಪ್ರಶ್ನೆ ಮಾಡುತ್ತಿರುವಾಗ, ಅದರ ಮಾಲೀಕರಾಗಿ ಸಣ್ಣ ರೈತರಾಗಿಯೋ, ದೊಡ್ಡ ರೈತರಾಗಿಯೋ ನಮ್ಮ ಸ್ವಂತ ಹಿತದಿಂದ ಮಾತನಾಡುತ್ತಿದ್ದೇವೆ. ಕ್ಲೋರೋಹೈಡ್ರೈಡನ್ನು ಮಿಕ್ಸ್ ಮಾಡಿ ಹೆಂಡದ ಹೆಸರಿನಲ್ಲಿ ಮಾರಾಟ ಮಾಡುತ್ತಿದ್ದುದರಿಂದ ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ. ಕಣ್ಣು ಹೋಗುತ್ತದೆ ಎಂಬ ಕಾರಣದಿಂದ ಪಾನ ನಿರೋಧ ಜಾರಿಗೆ ತರಬೇಕೆಂದು ಸಾರ್ವಜನಿಕ ಹಿತದೃಷ್ಟಿಯಿಂದ ಆ ಒಂದು ವಿಚಾರಧಾರೆ ಇತ್ತು. ಆದರೆ ಇವತ್ತು ಈ ನೀರಾ ಹೆಂಡವಾಗಿ ಪರಿವರ್ತನೆಯಾಗುವುದಿಲ್ಲವೆಂಬುದಕ್ಕೆ ಏನು ಗ್ಯಾರಂಟಿ? ನಾಳೆ ಎಲ್ಲಾ ಮರಗಳಿಂದ ನೀರಾವನ್ನು ಇಳಿಸಿದರೆ ಸುಮಾರು ಒಂದು ಕೋಟಿ ಲೀಟರ್ ನೀರಾ ಉಳಿಯುತ್ತದಂತೆ. ಅದನ್ನು ತೆಗೆದುಕೊಂಡು ಹೋಗಿ ಚರಂಡಿಗೆ ಚೆಲ್ಲುತ್ತೀರಾ? ಅಥವಾ ಎಲ್ಲರೂ ಅದನ್ನು ಕುಡಿಯಬೇಕೆಂದು ಕಡ್ಡಾಯ ಮಾಡುತ್ತೀರಾ? ಇದರ ಬಗ್ಗೆ ನಾವೆಲ್ಲಾ ಯೋಚನೆ ಮಾಡಬೇಕು. ಮಾನ್ಯ ಪಾಟೀಲರಿಗೆ ನೀರಾ ಕುಡಿಯಿರಿ ಎಂದು ಹೇಳಲು ಆಗುತ್ತದೆಯೇ? ನಾಳೆ ದಿವಸ ಕ್ಲೋರೋಹೈಡ್ರೈಡನ್ನು ಮಿಕ್ಸ್ ಮಾಡುವುದಿಲ್ಲ. ಅದು ಹೆಂಡವಾಗುವುದಿಲ್ಲವೆಂಬುದಕ್ಕೆ ಏನು ಗ್ಯಾರಂಟಿ? ನಾಳೆ ದಿವಸ ಇನ್ನೊಂದು ಲಾಬಿ ಪ್ರಾರಂಭವಾಗಿ ರೈತರ ಹೆಸರಿನಲ್ಲಿ ಹೆಂಡ ಮರು ಪ್ರವೇಶವಾದರೆ ಏನು ಮಾಡಬೇಕು? ಆ ರೀತಿ ಆಗುವುದಿಲ್ಲವೆಂಬುದಕ್ಕೆ ಯಾವ ಗ್ಯಾರಂಟಿ ಇದೆ?

ಶ್ರೀ ಸಿ. ಭೈರೇಗೌಡ.- ಕ್ಲೋರೋಹೈಡ್ರೈಡ್‌ನ್ನು ಮಿಕ್ಸ್ ಮಾಡಿ ಮಾರುತ್ತಿದ್ದವರ ಬಗ್ಗೆ ನಾನು ಹಿಂದೆ ಧ್ವನಿಯೆತ್ತಿದ್ದೆ. ಅದರ ಬಗ್ಗೆ ಮಾತ್ರ ನಾನು ಹೇಳಲು ಬಯಸುತ್ತೇನೆ. ಒತ್ತಾಯದ ಮೇರೆಗೆ ರಾಜ್ಯ ಸರ್ಕಾರ ಆಗ ಹೆಂಡವನ್ನು ನಿಷೇಧ ಮಾಡತಕ್ಕ ತೀರ್ಮಾನವನ್ನು ತೆಗೆದುಕೊಂಡಿತು.

ಶ್ರೀ ಕೆ.ಎಚ್. ರಂಗನಾಥ್.- ಆ ರೀತಿ ಮಾಡಿದ್ದು ಸಾರ್ವಜನಿಕರ ಹಿತದೃಷ್ಟಿಯಿಂದ ಇಡೀ ಸಮುದಾಯದ ಹಿತದೃಷ್ಟಿಯಿಂದ. ಆದರೆ ನಾವು ಇವತ್ತು ಮಾತನಾಡುತ್ತಿರುವುದೇನು? ನನಗೆ ನಾಲ್ಕು ರೂಪಾಯಿ ಬರುತ್ತದೆ. ಹತ್ತು ರೂಪಾಯಿ ಬರುತ್ತದೆ. ತೊಂದರೆಯಾಗಿದೆ

ನನ್ನ ಮರವನ್ನು ಉಳಿಸಿಕೊಳ್ಳಬೇಕು ಎಂಬ ದೃಷ್ಟಿಯಿಂದ ಮಾತನಾಡುತ್ತಿದ್ದೇವೆ. ಈ ಚರ್ಚೆ ಸಾರ್ವಜನಿಕರ ಹಿತದೃಷ್ಟಿಯಿಂದ ಮಾಡುತ್ತಿಲ್ಲ. ನಮ್ಮ ಹಿತದೃಷ್ಟಿಯಿಂದ ಮಾಡುತ್ತಿದ್ದೇವೆ. ನನಗೂ 250-270 ತೆಂಗಿನ ಮರಗಳಿವೆ. ನನ್ನ ಮರಗಳಿಗೂ ನುಸಿರೋಗ ಬಂದಿದೆ. ಆದರೆ ನಮ್ಮ ಪ್ರಯತ್ನ ನಮ್ಮ ದೃಷ್ಟಿಯಿಂದ ಮಾತನಾಡುತ್ತಿದ್ದೇವೆ. ಇಡೀ ಸಾರ್ವಜನಿಕರ ದೃಷ್ಟಿಯಿಂದ ಮಾತನಾಡುತ್ತಿಲ್ಲ. ನಮ್ಮ ಉದ್ದಿಮೆಗಾಗಲಿ, ವ್ಯವಸಾಯ ಮಾಡತಕ್ಕ ಬಡಜನರೇನಿದ್ದಾರೆ ಅವರ ದೃಷ್ಟಿಯಿಂದ ನಾವು ವಿಚಾರ ಮಾಡುತ್ತಿದ್ದೇವೆಯೇ? ಕೇವಲ ನಮ್ಮ ದೃಷ್ಟಿಯಿಂದ ಮಾಡುತ್ತಿದ್ದೇವೆ. ನನ್ನ ಭೂಮಿ, ನನಗಿರುವ ಆದಾಯ ಕಡಿಮೆಯಾಗುತ್ತಿದೆ ಎಂಬ ದೃಷ್ಟಿಯಿಂದ ನೀರಾ ಬೇಕೆಂದು ಚರ್ಚೆ ಮಾಡುತ್ತಿದ್ದೇವೆ.

ಶ್ರೀ ಸಿ. ಭೈರೇಗೌಡ.- ಮಾನ್ಯ ರಂಗನಾಥ್‌ರವರು ಹೇಳಿರುವ ವಿಚಾರವನ್ನು ಸಂಪೂರ್ಣವಾಗಿ ನಾನು ತಳ್ಳಿ ಹಾಕುವುದಿಲ್ಲ. ಅವರ ವಾದದಲ್ಲೂ ಅರ್ಥವಿದೆ. ತೆಂಗಿನ ಮರುವಿರುವವರು ನೀರಾ ಇಳಿಸಲು ಅನುಮತಿ ಕೊಡಬೇಕೆಂದು ಹೇಳುತ್ತಿರುವುದು ನಿಜ. ಆದರೆ ಇವರುಗಳು ಎಷ್ಟು ಸಂಖ್ಯೆಯಲ್ಲಿದ್ದಾರೆ ಎಂಬ ಬಗ್ಗೆ ನಾವು ಚಿಂತನೆ ಮಾಡಬೇಕಾಗುತ್ತದೆ. ಇವರುಗಳ ಆರ್ಥಿಕ ಪರಿಸ್ಥಿತಿ ಯಾವ ಮಟ್ಟಕ್ಕೆ ಬಂದು ನಿಂತಿದೆ ಎಂಬ ಬಗ್ಗೆಯೂ ನಾವು ವಿಚಾರ ಮಾಡಬೇಕಾಗುತ್ತದೆ.

*****

## ಆಯ್ಕೆ ಸಮಿತಿಯಿಂದ ನೌಕರರಿಗೆ ಅನ್ಯಾಯ!

22 ಅಕ್ಟೋಬರ್ 1965

ಶ್ರೀ ಕೆ.ಎಚ್. ರಂಗನಾಥ್.- ಮಾನ್ಯ ಅಧ್ಯಕ್ಷರೇ, ಮಾನ್ಯ ಗೋಪಾಲಗೌಡರು ಸಭೆಯಲ್ಲಿ ಮಂಡಿಸಿರತಕ್ಕ ನಿರ್ಣಯವನ್ನು ನಾನು ಸಮರ್ಥನೆ ಮಾಡುತ್ತ ನಾಲ್ಕು ಮಾತನ್ನು ಹೇಳಬೇಕೆಂದು ಬಯಸುತ್ತೇನೆ, ಸ್ವಾಮಿ.

ಇವತ್ತಿನ ದಿವಸ ಈ ಸಭೆಯ ಮುಂದೆ ಇರತಕ್ಕ ಆರ್ಡಿನೆನ್ಸನ್ನು ರಿಫೀಲ್ ಮಾಡಿ ಕಾನೂನು ಮಾಡಬೇಕು ಎಂದು ಬಂದಿರುವ ಮಸೂದೆ ಸರ್ಕಾರ ಹೇಳುವ ರೀತಿಯಲ್ಲಿ ಮೇಲ್ನೋಟಕ್ಕೆ ಸಮರ್ಥನೀಯವಾಗಿ ಕಂಡರೂ ಕೂಡ ಅದರಿಂದ ಬಹಳ ಜನಗಳಿಗೆ ತೊಂದರೆಯುಂಟಾಗುತ್ತದೆ. ಇದನ್ನು ಯಾವ ಉದ್ದೇಶದಿಂದ ತರಲಾಗಿದೆ ಎನ್ನುವುದು ಮುಖ್ಯ. ರಾಜ್ಯಪಾಲರಿಗೆ ರಾಜ್ಯಾಂಗದ 213ನೆಯ ವಿಧಿ ಪ್ರಕಾರ ಆರ್ಡಿನೆನ್ಸ್ ಹೊರಡಿಸತಕ್ಕ ಅಧಿಕಾರವಿದೆ. 24.9.65 ರಲ್ಲಿ ಈ ಆರ್ಡಿನೆನ್ಸ್ ಹೊರಗೆ ಬಂದಿದೆ. ವಿಧಾನ ಸಭೆ ಇಲ್ಲದೆ ಇರತಕ್ಕ ಕಾಲದಲ್ಲಿ, ವಿಧಾನ ಸಭೆ ಕೊಡಲು ಸಾಧ್ಯವಾಗದೆ ಇರತಕ್ಕ ಪರಿಸ್ಥಿತಿಯಲ್ಲಿ ಬಹಳ ಅವಶ್ಯಕತೆ ಏನಾದರೂ ಇದ್ದರೆ, ಅಂಥ ಒಂದು ತೀವ್ರತೆಯ ಪರಿಸ್ಥಿತಿ ಇದ್ದ ಪಕ್ಷದಲ್ಲಿ 213ನೆಯ ವಿಧಿಯ ಪ್ರಕಾರ ರಾಜ್ಯಪಾಲರು ಒಂದು ಆಜ್ಞೆಯನ್ನು ಹೊರಡಿಸತಕ್ಕ ಅಧಿಕಾರವನ್ನು

ಹೊಂದಿದ್ದಾರೆ. ನಮ್ಮ ವಿಧಾನ ಸಭೆಯ ಪ್ರೋರೋಗ್ ಆದದ್ದು ಸೆಪ್ಟೆಂಬರ್ 11ನೇ ತಾರೀಖು. ಈ ಆರ್ಡಿನೆನ್ಸ್ ಬಂದಿರುವುದು 24ನೇ ತಾರೀಖು. ಆದರಲ್ಲಿ ಹೇಳಿರತಕ್ಕ ಕಾರಣ ಆ ವಿಧಿಯನ್ನು ಸಮರ್ಥನೆ ಮಾಡುವುದಕ್ಕೆ ಎಷ್ಟು ಕಾರಣಬೇಕೋ ಅಷ್ಟನ್ನು ಮಾತ್ರ ಕೊಟ್ಟಿದ್ದಾರೆಯೇ ವಿನಾ ವಾಸ್ತವಾಂಶಗಳನ್ನು ಸಭೆಯ ಮುಂದೆ ಸರ್ಕಾರದವರು ಇಟ್ಟಿಲ್ಲ ಎಂದು ನನ್ನ ಭಾವನೆ.

ಈ ಆರ್ಡಿನೆನ್ಸ್‌ನಲ್ಲಿ ಹೇಳಿರತಕ್ಕ ಕಾರಣ ಡಿವಿಜನ್ ಲೆವಲ್ ರಿಕ್ರೂಟ್‌ಮೆಂಟ್ ಕಮಿಟಿ ಮತ್ತು ಸ್ಟೇಟ್ ಲೆವಲ್ ರಿಕ್ರೂಟ್‌ಮೆಂಟ್ ಕಮಿಟಿ ಇವುಗಳ ರಚನೆ, ಆದರಲ್ಲಿ ಕೆಲವು ತಪ್ಪುಗಳು ಮತ್ತು ಸಮಿತಿ ಅಭ್ಯರ್ಥಿಗಳನ್ನು ಆರಿಸುವಾಗ ಕೆಲವು ನ್ಯೂನತೆಗಳು ಕಂಡುಬಂದುದರಿಂದ ಹೈಕೋರ್ಟಿನವರು ಅದನ್ನು ಕಿತ್ತುಹಾಕಿದರು. ಆ ದೃಷ್ಟಿಯಿಂದ ಈ ಸಮಿತಿಗಳು ಆಯ್ಕೆ ಮಾಡಿರುವ ನೌಕರರಿಗೆ ಅನ್ಯಾಯವಾಗುತ್ತದೆ. ಸಾವಿರಾರು ಜನ ನೌಕರರನ್ನು ಬದುಕಿಸುವುದಕ್ಕೋಸ್ಕರ ಈ ಆರ್ಡಿನೆನ್ಸ್ ಹೊರಡಿಸಲಾಗಿದೆ ಎಂದು ಮಾತ್ರ ಆದರಲ್ಲಿ ಕೊಟ್ಟಿದೆ. ಏನೇ ಆಗಲಿ, ಒಂದು ರಾಜ್ಯದಲ್ಲಿರತಕ್ಕ ಮುಖ್ಯ ನ್ಯಾಯಾಲಯ ತೀರ್ಮಾನ ಕೊಟ್ಟಾಗ ಆ ತೀರ್ಮಾನಕ್ಕೆ ಎಲ್ಲರೂ ಬದ್ಧರಾಗಿರಬೇಕು. ಅಥವಾ ಇನ್ನಾವುದಾದರೂ ರೂಪದಲ್ಲಿ ಅನ್ಯಾಯವಾಗಿರತಕ್ಕವರಿಗೆ ನ್ಯಾಯವನ್ನು ಕಲ್ಪಿಸುವ ಕಾರ್ಯವನ್ನು ಸರ್ಕಾರ ಮಾಡಿಸಿದ್ದರೆ ಬಹಳ ಚೆನ್ನಾಗಿತ್ತು. ಸ್ಟೇಟ್ ಲೆವಲ್ ರೆಕ್ರೂಟ್‌ಮೆಂಟ್ ಕಮಿಟಿಯವರು ಮಾಡಿದಂಥ ಪಟ್ಟಿ ಪ್ರಕಾರ ಸಾವಿರಾರು ನೌಕರರಿಗೆ ಅನ್ಯಾಯವಾಯಿತು, ಕೆಲವರು ಟೆಂಪೊರರಿಯಾಗಿ ಕೆಲಸ ಮಾಡುತ್ತಿದ್ದವರಿಗೆ ಅನ್ಯಾಯವಾಯಿತು ಎಂದು ಸುಮಾರು 8-00 ರಿಟ್ ಅರ್ಜಿಗಳು ಈಗ ಹೈಕೋರ್ಟಿನಲ್ಲಿವೆ. ಸೆಕ್ರೆಟ್ರೇರಿಯಟ್‌ನಲ್ಲಿಯೇ ಕೆಲಸಮಾಡುವ ನೌಕರರು 4-5-6 ವರ್ಷಗಳು ಸರ್ವಿಸ್ ಮಾಡಿದಂಥ ಜನ ಆದರಲ್ಲೂ ಎಷ್ಟೋ ವರ್ಷಗಳು ಇನ್‌ಕ್ರಿಮೆಂಟ್ ಪಡೆದ ಜನ-ಇಂತಹವರಿಗೆ ಇದರಿಂದ ತೊಂದರೆಯಾಗಿದೆ. ಆ 800 ಜನ ನೌಕರರು ಹಾಕಿದಂತಹ ಅರ್ಜಿಗಳು ಇನ್ನೂ ಹೈಕೋರ್ಟಿನಲ್ಲಿವೆ. ಆದರೆ ಇಷ್ಟು 800 ಜನರಿಗೆ ಅನ್ಯಾಯವಾಗಿರತಕ್ಕದ್ದನ್ನು ಸರ್ಕಾರದವರು ಈ ಸಭೆಯ ಮುಂದೆ ಹೇಳಲಿಲ್ಲ.

ಸ್ಟೇಟ್ ಲೆವಲ್ ರೆಕ್ರೂಟ್‌ಮೆಂಟ್ ಕಮಿಟಿಗಳು ಮತ್ತು ಡಿವಿಜನಲ್ ಲೆವಲ್ ರೆಕ್ರೂಟ್‌ಮೆಂಟ್ ಕಮಿಟಿಗಳು 1962ನೇ ಇಸ್ವಿಯಲ್ಲಿ ಅಸ್ತಿತ್ವಕ್ಕೆ ಬಂದಾಗ ಎಷ್ಟು ಜನ ಕೆಲಸಮಾಡುತ್ತಾ ಇದ್ದರು. ಈಗ ಎಷ್ಟು ಜನ ಕೆಲಸದಲ್ಲಿದ್ದಾರೆ. ಅವರ ಸರ್ವಿಸ್ ಎಷ್ಟಾಗಿತ್ತು-ಎಂಬ ವಿವರಗಳನ್ನು ಸರ್ಕಾರದವರು ಈ ಸಭೆಯ ಮುಂದೆ ಇಟ್ಟಿಲ್ಲ. ಆ ಕಮಿಟಿಗಳ ಆಸ್ತಿತ್ವಕ್ಕೆ ಬರುವುದಕ್ಕೆ ಮುಂಚಿತರಾಗಿ ಎಷ್ಟು ನೌಕರರು ಇದ್ದರು ಎಂಬುದನ್ನು ಕೂಡ ಇವರು ತಿಳಿಸಿಲ್ಲ. ಆ ರೀತಿ ತಿಳಿಸಿದರೆ ಆದರಲ್ಲಿ ಯಾವ ರೀತಿಯಲ್ಲಿ ನ್ಯಾಯ ದೊರಕಿಸಿದ್ದಾರೆಂಬುದನ್ನು ತಿಳಿದು ಈ ಆರ್ಡಿನೆನ್ಸನ್ನು ಒಪ್ಪಬೇಕೋ ಬೇಡವೋ ಎಂದು ಹೇಳುತ್ತಿದ್ದೆವು. ಈಗ ಒಂದು ವೇಳೆ ಇದನ್ನು ಒಪ್ಪಿ ಜಾರಿಗೆ ಕೊಟ್ಟ ಪಕ್ಷದಲ್ಲಿ ಸಾವಿರಾರು

ನೌಕರರು ಬೀದಿಗೆ ಹೋಗುವ ಪರಿಸ್ಥಿತಿ ಬಂದಿದೆ. ನಾನು ಈ ಸರ್ಕಾರಿ ನೌಕರರಿಗೆ ಬರತಕ್ಕ ಜನರಿಗೆ ಅಷ್ಟು ಪ್ರೋತ್ಸಾಹಕೊಡುವ ಮನುಷ್ಯನಲ್ಲ. ಬೇರೆ ಏನೂ ಕೆಲಸಮಾಡುವುದಕ್ಕೆ ಸಾಧ್ಯವಿಲ್ಲದೇ ಇರತಕ್ಕ ಜನ ಕೂಡ ಕೇವಲ ಈ 100-150 ರೂಪಾಯಿಗಳ ಸಂಬಳವನ್ನು ತೆಗೆದುಕೊಂಡು ಜೀವನ ಮಾಡುವುದಕ್ಕೆ ಸಾಧ್ಯವಿಲ್ಲವೆಂದು ನನ್ನ ಅಭಿಪ್ರಾಯ. ಅವರು ಅಂತಹ ಪರಿಸ್ಥಿತಿಯಲ್ಲಿರುತ್ತಾರೆ. ಸಾವಿರಾರು ಜನ ನೌಕರರು 6-7 ವರ್ಷಗಳ ಕಾಲ ಸರ್ವಿಸ್‌ನಲ್ಲಿದ್ದು ಇನ್‌ಕ್ರಿಮೆಂಟ್ ತೆಗೆದುಕೊಂಡವರು ಹೈಕೋರ್ಟಿನಲ್ಲಿ ರಿಟ್ ಹೋಗಿದ್ದಾರೆ. ಸುಮಾರು 800 ಅರ್ಜಿಗಳು ಆ ಕೋರ್ಟಿನಲ್ಲಿ ದಾಖಲು ಆಗಿದ್ದರೂ ರಾಜ್ಯಾದ್ಯಂತ ಎಷ್ಟು ಜನಗಳಿಗೆ ತೊಂದರೆಯಾಗುತ್ತದೆಂಬುದನ್ನು ಸರ್ಕಾರದವರು ಈ ಸಭೆಯ ಮುಂದೆ ಇಟ್ಟಿಲ್ಲ. ಈ ಡಿವಿಜನಲ್ ಲೆವಲ್ ರೆಕ್ರೂಟ್‌ಮೆಂಟ್ ಕಮಿಟಿ ಮತ್ತು ಸ್ಟೇಟ್ ಲೆವಲ್ ರೆಕ್ರೂಟ್‌ಮೆಂಟ್ ಕಮಿಟಿಯವರು ಆಯ್ಕೆ ಮಾಡಿದಂತಹ ಜನಗಳಲ್ಲಿ ಎಷ್ಟು ಜನ ಕೆಲಸಗಳಿಗೆ ಹಾಜರಾಗಿದ್ದಾರೆ? ಹಾಜರಾಗಿರುವವರು ಬಹಳ ಕಡಿಮೆ ಜನ. ಕೆಲಸದಲ್ಲಿದ್ದವರಿಗೆ ಇದರಿಂದ ಆಗಿರುವ ಅನ್ಯಾಯಗಳನ್ನು ನೋಡಬೇಕಾಗಿದೆ, ಮನೆಗೆ ಹೋಗುವವರ ಸ್ಥಿತಿಯನ್ನು ನೋಡಬೇಕಾಗಿದೆ.

ಸರ್ಕಾರದವರು ತಾವು ಮಾಡಿದ ತಪ್ಪನ್ನು ಶ್ರೀಮಾನ್ ಗೋಪಾಲಗೌಡರು ಹೇಳಿದ ಹಾಗೆ ಒಪ್ಪಿಕೊಳ್ಳಬೇಕು. ಇವರು ರಾಜಮಾರ್ಗವನ್ನು ಬಿಟ್ಟು ಹಿಂಬದಿಯಲ್ಲಿ ಬಂದಾಗ ಅವರು ಮಾಡಿದ್ದನ್ನು ಸಮರ್ಥನೆಮಾಡಿಕೊಳ್ಳುವುದು ಅನುಚಿತವಾದ್ದು. ಆದ್ದರಿಂದ ಇಂತಹ ಆರ್ಡಿನೆನ್ಸನ್ನು ಈಗ ತಂದಿರುವುದು ಅಷ್ಟು ಯೋಗ್ಯವಾದ್ದಲ್ಲ, ಮತ್ತು ಅಷ್ಟು ಗೌರವವಾದುದಲ್ಲ. ನಮ್ಮಲ್ಲಿ ಐ.ಸಿ.ಎಸ್. ಆಗಿರತಕ್ಕ ಒಬ್ಬ ಚೀಫ್ ಸೆಕ್ರೆಟರಿಗಳಿದ್ದಾರೆ. ಲಾ ಡಿಪಾರ್ಟಿಮೆಂಟ್ ಬೇರೆ ಇದೆ. ಎಷ್ಟೋ ಕಮಿಟಿಗಳು ಆಗಿವೆ. ಇವರ‍್ಯಾರೂ ಇದನ್ನೆಲ್ಲ ಯೋಚನೆಮಾಡಲಿಲ್ಲವೇ? ಇಂತಹ ಒಂದು ಸಣ್ಣ ವಿಚಾರವನ್ನು ಬಗೆಹರಿಸಲಾದ ಜನ ನಿಜವಾಗಿ ಈಗಿನ ಹೆಚ್ಚು ಜವಾಬ್ದಾರಿಯನ್ನು ಹೊರಲಿಕ್ಕೆ ಸಾಧ್ಯವೇ? ಇನ್ನೂ ಅಂತರ ರಾಜ್ಯ ಸೀನಿಯಾರಿಟಿ ಪಟ್ಟಿಯೂ ಸಹ ತಯಾರಾಗಿಲ್ಲ. ಫಾರೆಸ್ಟ್ ಮತ್ತು ಅಗ್ರಿಕಲ್‌ಚರಲ್ ಇಲಾಖೆಯಲ್ಲಿರತಕ್ಕ ಅಧಿಕಾರಿಗಳೂ ಸಹ ಈ ವಿಚಾರದ ಬಗ್ಗೆ ಕೋರ್ಟಿಗೆ ಹೋಗತಕ್ಕದ್ದನ್ನು ನಾನು ಒಪ್ಪುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ನೌಕರರು ತ್ಯಾಗಮಾಡುವುದನ್ನು ನಾನು ಒಪ್ಪುತ್ತೇನೆ. ಆದರೆ ಅವರು ಕೋರ್ಟಿಗೆ ಹೋಗುವ ರೀತಿಯಲ್ಲಿಲ್ಲ. ಏನಾದರೂ ತಪ್ಪು ಮಾಡುವ ಅಧಿಕಾರಿಗಳಿದ್ದರೆ ಅಂತಹವರಿಗೆ ಆ ಮಾತನ್ನು ಹೇಳಬೇಕಾಗುತ್ತದೆ. ಯಾವಾಗಲೂ ನೌಕರರು ಅವರಿಗೆ ಅನ್ಯಾಯವಾಗಿದ್ದರೆ ಕೋರ್ಟಿಗೆ ಹೋಗುತ್ತಾರೆಯೇ ಹೊರ್ತು ಸಂಬಳ ಜಾಸ್ತಿಬೇಕೆಂದು ಹೋಗುವುದಿಲ್ಲ. ಈಗ ಅಂಡರ್ ಸೆಕ್ರೆಟರಿ ಡೆಪ್ಯುಟಿ ಸೆಕ್ರೆಟರಿ, ಸೆಕ್ರೆಟರಿ, ಮತ್ತು ಚೀಫ್ ಸೆಕ್ರೆಟರಿ, ಅಲ್ಲದೆ ಲಾ ಡಿಪಾರ್ಟ್‌ಮೆಂಟ್ ಬೇರೆ ಇದೆ. ಇಷ್ಟು ಇದ್ದರೂ ನಮ್ಮ ರಾಜ್ಯದಲ್ಲಿ ಡೆವಲಪ್‌ಮೆಂಟ್ ವರ್ಕ್ಸ್‌ನಿಂದ ಹೆಚ್ಚಿಗೆ ಜನರನ್ನು ಸರ್ಕಾರಿ ನೌಕರರಿಗೆ ತೆಗೆದುಕೊಳ್ಳುವುದು, ಸೀನಿಯಾರಿಟಿ ಕೊಡುವುದು, ಪ್ರೊಮೋಷನ್ ಕೊಡುವುದು, ಹೀಗೆಲ್ಲಾ ಇದರಲ್ಲಿ ತೆಗೆದುಕೊಳ್ಳುತ್ತಾರೆ. ಆದರೂ ಡೆವಲಪ್‌ಮೆಂಟ್ ಆಕ್ಟಿವಿಟೀಸಿಗೆ ಹೆಚ್ಚು ಕಾಲವನ್ನು ಇವರು ವ್ಯಯಮಾಡುತ್ತಿಲ್ಲ.

*****

## ಇದು ಡೆಮಾಕ್ರಸಿ, ಮಾಬಾಕ್ರಸಿ ಅಲ್ಲ.

22 ಮಾರ್ಚ್ 2000

**ಶ್ರೀ ಕೆ.ಎಚ್. ರಂಗನಾಥ್** (ಮಾನ್ಯ ಅರಣ್ಯ ಸಚಿವರು).- ಮಾನ್ಯ ಅಧ್ಯಕ್ಷರೆ, ಮಾನ್ಯ ಸಿಂಧ್ಯಾರವರು ಒಂದು ಹೊಸ ವಿಚಾರವನ್ನು ಈ ಸಭೆಯ ಮುಂದಿಡುತ್ತಿದ್ದಾರೆ. ಸರ್ಕಾರ ಯಾವ ಕಾನೂನನ್ನು ತರಬೇಕಾಗುತ್ತದೆ. ಯಾವುದನ್ನು ಮಂಡನೆ ಮಾಡಬೇಕಾಗುತ್ತದೆ. ಆಗ ನಮ್ಮನ್ನು ಕೇಳಬೇಕಾಗುತ್ತದೆ ಎನ್ನುವ ಧಾಟಿಯಲ್ಲಿದೆ. ನಾವು ಈ ಕಾನೂನನ್ನು ಈ ಸಭೆಯಲ್ಲಿ ಪಾಸು ಮಾಡಲಾಗಿದೆ, ಇದನ್ನು ಕಾಂಗ್ರೆಸ್ ಪಕ್ಷ ಅಥವಾ ಬೇರೆಯವರು ಮಾಡಿರತಕ್ಕಂಥದ್ದು ಅಲ್ಲ. ಇದರಲ್ಲಿ ನಾವು ಸ್ಪಷ್ಟವಾಗಿ ಪ್ರಸ್ತಾಪ ಮಾಡಿರುತ್ತೇವೆ. ಬಿಲ್ಸ್‌ಗೆ ಯಾವ ರೀತಿಯಾಗಿ ನಾವು ಆದ್ಯತೆಯನ್ನು ಕೊಡಬೇಕಾಗುತ್ತದೆ, ಸಾಮಾಜಿಕ ದೃಷ್ಟಿಯಿಂದ ಜನರ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಂಡು ಯಾವ ಕಾನೂನನ್ನು ತರಬೇಕು, ಯಾವ ಕಾನೂನನ್ನು ಬಿಡಬೇಕು ಎನ್ನತಕ್ಕಂತಹದ್ದು ಸರ್ಕಾರದ ವಿವೇಚನೆಗೆ ಬಿಟ್ಟ ವಿಚಾರ. It comes before the House in the form of a motion. ಒಂದು ಬಿಲ್ ಬರುತ್ತಿದೆ. ಇದನ್ನು ನಾವು 3 ಹಂತದೊಳಗೆ ತೆಗೆದುಕೊಳ್ಳುತ್ತೇವೆ. One is introduction stage, the other is the consideration stage and the third is the voting stage. ಇಂಟ್ರಡಕ್ಷನ್ ಸ್ಟೇಜ್‌ನಲ್ಲಿ ಏನು ಮಾಡಬೇಕು ಅಂತ ಹೇಳಿ ರೂಲ್-29ರಲ್ಲಿ ಸ್ಪಷ್ಟವಾಗಿ ಹೇಳಿದೆ. ಅದನ್ನು ನಾವು ಮಾಡಬೇಕಾದರೆ ತಮ್ಮ ಅಪ್ಪಣೆಯನ್ನು ಮಾತ್ರ ತೆಗೆದುಕೊಳ್ಳುತ್ತೇವೆ. ಮತ್ತೆ ಮುಂದೆ ಇದೆ. supposing for argument sake, that particular piece of legislation is opposed to public, ಯಾವುದಕ್ಕೆ ದೃಷ್ಟಿಯಿಂದ ವಿರೋಧವಾಗಿದ್ದರೂ ವಿರೋಧಪಕ್ಷದವರಿಗೆ ಆಗಲಿ, ಪಬ್ಲಿಕ್ ಒಪಿನಿಯನ್‌ಗೆ ಕಳುಹಿಸಬಹುದು ಎಂದು ಮೂವ್ ಮಾಡುವುದಕ್ಕೂ ಅವಕಾಶವಿದೆ. ಡಿಸ್‌ಕಸ್ ಮಾಡುವುದಕ್ಕೆ ಅಧಿಕಾರವಿದೆ. ಕನ್ಸಿಡರೇಷನ್ ಸ್ಟೇಜ್‌ಗೆ ಬಂದಾಗ ಪ್ರತಿ ಕ್ಲಾಜ್, ಪ್ರತಿ ವರ್ಡ್ಸ್ ಯಾವುದೇ ಒಂದು (ಕಾಮ) ವನ್ನು ವಿಚಾರ ಮಾಡುವುದಕ್ಕೆ ಅವಕಾಶವಿರುತ್ತದೆ. ಹೀಗಿರುವಾಗ ನಾವು ಅವರನ್ನು ಕೇಳಿ ಬಿಲ್ ತರಬೇಕು. ಅದರ ಸಾರಾಂಶವನ್ನು ನಮಗೆ ಮೊದಲು ತಿಳಿಸಬೇಕು, ಅದನ್ನು ಒಪ್ಪಿದ ಮೇಲೆ it should come only in that form then you should frame the law. ನಂತರ ಇದು ಲಾ ಡಿಪಾರ್ಟ್‌ಮೆಂಟ್‌ಗೆ ಹೋಗಿ ಮಾಡಬೇಕು. ಇದೆಲ್ಲಾ ಮಾಡತಕ್ಕಂಥದ್ದು ಎಲ್ಲಿ ತೊಂದರೆ ಬರುತ್ತದೆಂದರೆ when you hold the whole House into ransom. ಆಗ ನಮಗೆ ಅಂತಹ ಪರಿಸ್ಥಿತಿ ನಮಗೆ ಬರುತ್ತದೆ. ಹಾಗಾದರೆ ಯಾವ ಕಾನೂನಿನಲ್ಲಿ ಸಾಧ್ಯವಾಗುತ್ತದೆ.

ಇವತ್ತು ಏನಾಗಿದೆ ಎಂದರೆ ಇಡೀ ರಾಷ್ಟ್ರದಲ್ಲಿ ಪಂಚಾಯಿತಿ ಕಾನೂನನ್ನು ನಾವು ಮಾಡದೆ ಇದ್ದುದರಿಂದ, ಚುನಾವಣೆಗಳನ್ನು ಮಾಡದೆ ಇರುವುದರಿಂದ though the

particular subject was a State subject the Government of India has thought it fit to amend the constitution though it was not within their jurisdiction. ರಾಜ್ಯಾಂಗದಲ್ಲಿ ಪಂಚಾಯಿತಿ ವ್ಯವಸ್ಥೆ ಬರತಕ್ಕಂಥದ್ದು ಬೇರೆ ಬೇರೆ Directive Principleನಲ್ಲಿ ಬರತಕ್ಕಂಥದ್ದು ಸ್ಟೇಟ್ ಲಿಸ್ಟ್‌ನಲ್ಲಿ ಬರತಕ್ಕಂಥದ್ದು ಇದ್ದರೂ ಕೂಡ 5 ವರ್ಷಕ್ಕೆ ಒಂದು ಸಲ ಚುನಾವಣೆ ಮಾಡಬೇಕೆಂದು ಅವರು ಮಾಡಿದ್ದಾರೆ. ಹೀಗಿರುವಾಗ ಅದಕ್ಕೆ ಅನುಗುಣವಾಗಿ ಇವತ್ತು ಕಾನೂನು ಬಂದಿರುತ್ತದೆ. ಆ ಕಾನೂನು ಜಾರಿಗೆ ಕೊಡುವಾಗ ಕಷ್ಟಸುಖಗಳು ಬರುತ್ತವೆ. ಅದನ್ನು ನಿವಾರಣೆ ಮಾಡತಕ್ಕಂಥದ್ದನ್ನು ಮತ್ತು ಆಡಳಿತ ಮಾಡತಕ್ಕಂಥದನ್ನು ಮಾಡಿಕೊಳ್ಳುತ್ತದೆ. ಉದಾಹರಣೆಗಾಗಿ 1993ನೇ ಇಸವಿಯಲ್ಲಿ ಕಾನೂನು ಮಾಡುವಾಗ ಮಾನ್ಯ ಸಚಿವರು ಮಾಡಿದ್ದರು. ಆಗ ಮಾನ್ಯ ಸಿಂಧ್ಯಾರವರು ಅಧಿಕಾರದಲ್ಲಿದ್ದರು. Their government in its wisdom thought it fit to amend it. They have amended it. But, after seeing the pros and cons, the present government which has also said in its election mainfesto. ಮಾನ್ಯ ಮುಖ್ಯಮಂತ್ರಿಗಳು ಇದರ ಬಗ್ಗೆ ಸ್ಪಷ್ಟವಾಗಿ ಹೇಳಿದ್ದಾರೆ. we have said it before the people. We have put it before the people, we have got the mandate of the people. ಹೀಗಿರುವಾಗ - ನಾವು ಅದಕ್ಕೆ ಸಂಬಂಧಪಟ್ಟಂತೆ ತಿದ್ದುಪಡಿಯನ್ನು ತರುವಾಗ, at this point of time, when the Bill is to be introduced in this august House. to say I am not going to allow it.

ನಾವು ಧರಣಿ ಮಾಡುತ್ತೇವೆಂದು ಹೇಳುವುದಾದರೆ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರುವಂತಹ ನಮ್ಮಗಳಿಗೆ ಇದು ಸರಿಹೋಗುತ್ತದೆಯೇ? ಇದನ್ನು ತಾವುಗಳು ವಿಚಾರ ಮಾಡಬೇಕು. ಮಾನ್ಯ ಸದಸ್ಯರ ವಿವೇಚನೆಗೆ ಈ ವಿಷಯವನ್ನು ನಾನು ಬಿಡುತ್ತೇನೆ. ಈ ಮಾತನ್ನು ಈ ಸದನದ ವಿವೇಚನೆಗೆ ಬಿಡುತ್ತೇನೆ. ಹೀಗೆ ಮಾಡುವುದಾದರೆ ನನಗೆ ಏನೋ ಬರುತ್ತದೆ ನಾನು ಮನೆಯಲ್ಲಿರುತ್ತೇನೆ, ನನ್ನ ಮನಸ್ಸಿಗೆ ಏನೋ ಒಂದು ಡೌಟ್ ಬರುತ್ತದೆ. So, I can moblise about 40 to 50 people come lve and do all sorts of these things then how are we to run this House? What is the sanctity? ಈ ರೀತಿಯಾದರೆ ನಾವು ಕಾನೂನನ್ನು ತರುವುದು ಹೇಗೆ? ಮತ್ತು ನಾವು ಆಡಳಿತವನ್ನು ಮಾಡುವುದಾದರೂ ಹೇಗೆ? ಸಾಮಾಜಿಕ ನ್ಯಾಯವನ್ನು ಕೊಡುವುದಾದರೂ ಹೇಗೆ? ಇದನ್ನು ನಾವು ವಿಚಾರ ಮಾಡಬೇಕಾಗುತ್ತದೆ. ಅವರು ಹಿರಿಯರಿದ್ದಾರೆ. ಒಂದಲ್ಲ ಅನೇಕಸಲ ಆಡಳಿತವನ್ನು ನಡೆಸಿದವರಾಗಿದ್ದಾರೆ. ನಿರ್ವಹಣೆಯಿಂದ ಕೆಲಸವನ್ನು ಮಾಡಿದವರಾಗಿದ್ದಾರೆ. ಮಾನ್ಯ ಎಸ್.ಎಸ್. ಪಾಟೀಲ್‌ರವರು ಯಾವುದೋ ಒಂದು ವಿಚಾರದಲ್ಲಿ ಲೋಕಸಭೆಯಲ್ಲಿ ಕೂಡ ಪ್ರಧಾನಿಯವರು ಸಕರಾಮ್ ವಿಚಾರದಲ್ಲಿ ಲೋಕಸಭೆಯನ್ನು ಹೋಲ್ಡ್ ಮಾಡಿದ್ದರಿಂದ

ಬೇರೆಯವರು ಅದನ್ನು ಮಾಡತಕ್ಕಂತಹ ಪರಿಸ್ಥಿತಿ ಇಂತಹ ಪೋಡಿಯಂಗೂ ಕೂಡ ಬರುತ್ತಿರಲಿಲ್ಲ. ನಾನು ಒಂದು ಸಲ ಲೋಕಸಭೆಯಲ್ಲಿದ್ದೆ. ಮಾನ್ಯ ಮುಖ್ಯಮಂತ್ರಿಗಳು ಬಹಳ ಸಲ ಇದ್ದರು. They were not even allowed to get into the podium.

(ಗೊಂದಲ)

ಹಾಗಾದರೆ ಈ ಮನೆಯ ಸದಸ್ಯರುಗಳು ಏನು ಬೇಕಾದರೂ ಮಾಡುವುದಾದರೆ ಈ ಸಭೆಯೇ ಇರಬೇಕಾದ್ದಿಲ್ಲ. Then let us not have this book at all. ಅಧ್ಯಕ್ಷರೇ, ಈ ಪುಸ್ತಕಾನೇ ಬೇಕಾಗಿಲ್ಲ. ಅದನ್ನು ತೆಗೆದುಬಿಡೋಣ. ಅಧ್ಯಕ್ಷರೆ, ತಾವು ದಯಮಾಡಿ ಈ ಕಡೆಗೆ ಗಮನ ಕೊಡಬೇಕು. ಹಾಗೆ ಆಗುವುದಾದರೆ, ಈ ಪುಸ್ತಕ ನಮಗೆ ಬೇಕಾಗಿಲ್ಲ. ಇವತ್ತಿನಿಂದ let us pass unanimously a resolution that we are not following this book at all. ಎಲ್ಲರೂ ಇದರ ಬಗ್ಗೆ ಒಂದು ತೀರ್ಮಾನಕ್ಕೆ ಬರಬೇಕು ಸಭೆಯಲ್ಲಿ ಇಲ್ಲದೇ ಹೋದರೆ ಹೇಗಾಗುತ್ತದೆ? ನಾನು ದಯಮಾಡಿ ಮಾನ್ಯ ಸದಸ್ಯರಲ್ಲಿ ವಿನಂತಿ ಮಾಡುತ್ತೇನೆ. ಮಾನ್ಯ ಮುಖ್ಯಮಂತ್ರಿಗಳು ವಿನಂತಿ ಮಾಡಿದ್ದಾರೆ. ನಾವೆಲ್ಲರೂ ಕೂಡ we are of the same opinion. You should cooperate. You have your say. ಕನ್‌ವಿನ್ಸ್ ಮಾಡಿ. After all what is democracy? Democracy is by discussions only. You convince us. ಮುಕ್ತ ಮನಸ್ಸಿನಿಂದ ನಾವು ವಿಚಾರ ಮಾಡುತ್ತೇವೆ. Consideration stageನಲ್ಲಿ Every word of the Bill can be discusssed. Amendment can be moved. ರಾತ್ರಿಯಾಗುವವರೆಗೆ ತಾವು ಮೂವ್ ಮಾಡಿ. If it is possible every word of the BIll can be considered by this august House. ಅದನ್ನು ಬಿಟ್ಟು ನಾವು ಕನ್ಸಿಡೆರೇಷನ್ ಸ್ಟೇಜ್‌ನಲ್ಲಿಯೇ ಅವಕಾಶ ಕೊಡುವುದಿಲ್ಲವೆಂದರೆ, ಆ ರೀತಿ ಮಾಡುವುದು ನ್ಯಾಯ ಸಮ್ಮತವಾಗಿರತಕ್ಕದ್ದಲ್ಲ. ನಾನು ಕೂಡ ಮಾನ್ಯ ಮಂತ್ರಿಗಳ ವಿನಂತಿಯ ಜೊತೆಗೆ ಕೈಗೂಡಿಸಿ ವಿನಂತಿ ಮಾಡಿಕೊಳ್ಳುತ್ತೇನೆ. I was also the Speaker for some period. ಮಾನ್ಯ ದಿವಂಗತ ದೇವರಾಜ ಅರಸ್‌ರವರು ಇಲ್ಲಿದ್ದರು. We have seen these things. ನಾವು ಈಗ ಯಾವ ಸ್ಟೇಜಿಗೆ ಬಂದಿದ್ದೇವೆಂದರೆ, ಇಲ್ಲಿಗೆ ಬರದೇ ಇರತಕ್ಕ ರೀತಿಯಲ್ಲಿ ನಾವೇ ಸ್ವಯಂಪ್ರೇರಿತರಾಗಿ ಒಂದು ನಿಯಂತ್ರಣವನ್ನು ಹಾಕಿಕೊಳ್ಳತಕ್ಕ ಪರಿಸ್ಥಿತಿಗೆ ನಾವು ಬಂದಿದ್ದೇವೆ. ಈ ಸಭೆಯಲ್ಲಿ ಪಾಸ್ ಮಾಡಿಕೊಳ್ಳಬೇಕು. For no account we should come here and sit, do these things ಇದನ್ನು ಈ ಸಭೆಯ ಮುಂದೆ ಮಾಡಿಕೊಳ್ಳಲೇಬೇಕಾಗುತ್ತದೆ. ನಾನು ಈ ಸಭೆಗೆ ತಮ್ಮ ಮುಖಾಂತರ ವಿನಂತಿ ಮಾಡಿಕೊಳ್ಳುತ್ತಿದ್ದೇನೆ. ಇಲ್ಲದೇ ಹೋದರೆ ನಾವು ಸಭೆ ನಡೆಸುವುದಕ್ಕೆ ಸಾಧ್ಯವೇ ಆಗುವುದಿಲ್ಲ. Then this can never be a parliamentary democracy. It can only be a "mobocracy".

*****

# ಬಜೆಟ್ ಬಹಿರಂಗ : ಒಂದು ವಾಗ್ವಾದ

1992

*ಬಜೆಟನ್ನು ಸದನದಲ್ಲಿ ಮಂಡಿಸುವುದಕ್ಕಿಂತ ಮೊದಲೆ ಬಹಿರಂಗವಾಗಿರುವ ಬಗ್ಗೆ ಚರ್ಚೆ*

ಶ್ರೀ ಕೆ.ಎಚ್. ರಂಗನಾಥ್: ಮಾನ್ಯ ಅಧ್ಯಕ್ಷರೇ, ಎರಡು ಗಂಟೆಗೆ ಬಜೆಟ್ ಇಲ್ಲಿ ಮಂಡನೆಯಾಗಬೇಕು.

ಶ್ರೀ ವಾಟಾಳ್ ನಾಗರಾಜ್: ಮಾನ್ಯ ............

ಶ್ರೀ ಕೆ.ಎಚ್. ರಂಗನಾಥ್: ಒಂದು ಅನಾಹುತ ಇಲ್ಲಿ ಆಗಿರುವುದರಿಂದ ಈ ಕಾರ್ಯಕ್ರಮವನ್ನು ನಿಲ್ಲಿಸುವುದು ಒಳ್ಳೆಯದೆಂದು ತಮ್ಮಲ್ಲಿ ವಿನಂತಿಸಿಕೊಳ್ಳುತ್ತಿದ್ದೇನೆ. ನಾವು ಕಾಫಿ ಲೌಂಜ್‌ನಲ್ಲಿದ್ದೆವು. ಫೈನಾನ್ಸ್ ಡಿಪಾರ್ಟ್‌ಮೆಂಟಿಗೆ ಸೇರಿದ ಕೆಲವು ಸಣ್ಣ ಅಧಿಕಾರಿಗಳು ಅದನ್ನು ಹಂಚುತ್ತಿದ್ದರು. ನನಗೂ ಕೂಡ ಒಂದು ಕಾಪಿ ಕೊಟ್ಟರು.

ಅಧ್ಯಕ್ಷರು: ಮಾನ್ಯ ಸದಸ್ಯರಾದ ಶ್ರೀ ರಂಗನಾಥರವರು ಆಯವ್ಯಯ ಪತ್ರದ ಭಾಷಣದ ಒಂದು ಕಾಪಿಯನ್ನು ಕಳುಹಿಸಿಕೊಟ್ಟಿದ್ದಾರೆ. ಇದು 199-93 ನೇ ಇಸವಿಗೆ ಸಂಬಂಧಪಟ್ಟದ್ದು. ಇದು ನಿಮ್ಮ ಕೈಗೆ ಎಷ್ಟು ಹೊತ್ತಿಗೆ ಬಂತು?

ಶ್ರೀ ಕೆ.ಎಚ್. ರಂಗನಾಥ್: 15 ನಿಮಿಷ ಮುಂಚೆ ಬಂತು.

(ಗೊಂದಲ)

ಶ್ರೀ ಎಸ್. ಬಂಗಾರಪ್ಪ: ನಾನು ಸಂಪೂರ್ಣ ಹೇಳುತ್ತೇನೆ. ಮಾನ್ಯ ಸಭಾಧ್ಯಕ್ಷರೆ, ಅದು ಹೊರಗಡೆ ಜನರಿಗೆ ಸಿಕ್ಕಿತು ಎನ್ನತಕ್ಕಂಥ ವಿಚಾರವನ್ನು ಮಾನ್ಯ ಸದಸ್ಯರಾದ ರಂಗನಾಥಜೀಯವರು ಹೇಳಿದ್ದರೆ ನಾನು ಒಪ್ಪಿಕೊಳ್ಳುತ್ತಿದ್ದೆ, ಅವರೇ ಹೇಳಿದ ಪ್ರಕಾರ, ಈಗ ಇಲ್ಲಿ ಸಿಕ್ಕಿದೆ ಎನ್ನತಕ್ಕಂಥ ಮಾತು. ಆದುದರಿಂದ ಯಾವ ಸೀಕ್ರೆಸಿಯನ್ನು ಮೇನ್‌ಟೇನ್ ಮಾಡಬೇಕಾಗಿತ್ತೋ ಅದನ್ನು ಸಂಪೂರ್ಣವಾಗಿ ಮೇನ್‌ಟೇನ್ ಮಾಡಲಾಗಿದೆ. ತಾವು ದಯವಿಟ್ಟು ಅದನ್ನು ಓದುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ನಾನು ವಿನಂತಿ ಮಾಡುತ್ತೇನೆ.

(ಗೊಂದಲ)

ಶ್ರೀ ಆರ್.ವಿ. ದೇಶಪಾಂಡೆ: ರಂಗನಾಥ್‌ರವರು ಹೇಳಿದರು, ಅವರಿಗೆ ಲಾಂಜ್‌ನಲ್ಲಿ ಬಜೆಟ್ ಕಾಪಿ ಸಿಕ್ಕಿದೆ ಎಂದು. He has got the copy outside....Copies have not been distibuted here. it is a breach of privilege......

ಶ್ರೀ ಬಿ.ಎಚ್.ಬನ್ನಿಕೋಡ್ : ಮಾನ್ಯ ರಂಗನಾಥರವರು ಬಜೆಟ್ ಪ್ರತಿಗಳನ್ನು ಅಲ್ಲಿ ಹಂಚಿದ್ದಾರೆ ಎಂದು ಹೇಳುತ್ತಿದ್ದಾರೆ.

(ಗೊಂದಲ)

**ಶ್ರೀ ಕಾಗೋಡು ತಿಮ್ಮಪ್ಪ:** ರಂಗನಾಥರವರು ಆ ಬಜೆಟ್ ಪ್ರತಿ ಎಲ್ಲಿಂದ ಬಂತು ಎಂದು ಹೇಳಬೇಕು, ಯಾರು ಕೊಟ್ಟರು ಎಂದು ಹೇಳಬೇಕು.

(ಗೊಂದಲ)

ಲಾಂಜ್‌ನಲ್ಲಿ ಅಂದರೆ ಈ ಲಾಬಿ ಕೂಡ ಅದಕ್ಕೆ ಸೇರಿದೆ. ಈ ಸದನ ಅಂದರೆ ಈ ಲಾಬಿ ಕೂಡ ಅದಕ್ಕೆ ಸೇರಿರತಕ್ಕಂಥಾದ್ದು. Definition of the House ಎನ್ನುವುದಕ್ಕೆ precints ಕೂಡ ಇದೆ. ಆದ್ದರಿಂದ ಅವರು ಬಾಯಿಮಾತಿನಿಂದ ಹೇಳುವುದಾದರೆ, ಅದನ್ನು ಅವರು ತೆಗೆದುಕೊಂಡಿರುವುದು ಲಾಬಿಯೊಳಗೆ. It comes within the purview of the Legislative Assembly ......... ಆ ದೃಷ್ಟಿಯಲ್ಲಿ ಅಲ್ಲಿ ಬುಕ್ ಕೊಟ್ಟಿದ್ದರೂ ಕೂಡ ಈ ಸದನಕ್ಕೆ ಅವರು ಬಂದು ಕುಳಿತದ್ದು ಮಾನ್ಯ ಮುಖ್ಯಮಂತ್ರಿಗಳು ಇಲ್ಲಿಗೆ ಬಂದ ಮೇಲೆ. ಆದ್ದರಿಂದ ಪ್ರತಿಗಳು ಲೀಕ್ ಔಟ್ ಆಗಲಿಲ್ಲ. ಆದ್ದರಿಂದ ತಾವು ದಯಮಾಡಿ ಬಜೆಟ್ ಮಂಡನೆಗೆ ಅವಕಾಶ ಮಾಡಿಕೊಡಬೇಕು.

(ಗೊಂದಲ)

**ಶ್ರೀ ಕೆ.ಎಚ್. ರಂಗನಾಥ್:** ನಮ್ಮ ಪಕ್ಷದ ಹಲವು ಮಿತ್ರರು, ಅದರಲ್ಲೂ ಕಾಗೋಡು ತಿಮ್ಮಪ್ಪನವರು ಬಹಳ ದಿವಸದಿಂದ ಈ ಸಭೆಯಲ್ಲಿದ್ದಾರೆ. ಮಾನ್ಯ ಸದಸ್ಯರು ಏನು ತಿಳಿದುಕ್ಕೊಂಡಿದ್ದಾರೆಂದರೆ, ನಾನೇನು ಇದನ್ನು ರಾಜಕೀಯ ಮಾಡುವುದಕ್ಕೆ ಪ್ರಯತ್ನ ಪಟ್ಟಿದ್ದೇನೆಂದು ತಿಳಿದುಕೊಂಡಿದ್ದಾರೆ.

(ಗೊಂದಲ)

**ಶ್ರೀ ಕೆ.ಎಚ್.ರಂಗನಾಥ್:** ಆದರೆ ವಾಸ್ತವಾಂಶ ಏನೆಂದರೆ ತಾವು ಅಧ್ಯಕ್ಷರಾಗಿರುವಾಗಿ ಇದು ಹೇಗೂ ಆಗಿದೆ. ಆದರೆ ಕಾನೂನಿಗೆ ಬಾಹಿರವಾದ ಕೆಲಸ ಈ ಸದನದಲ್ಲಾಗಬಾರದು. ತಾವು ಅಧ್ಯಕ್ಷರಾಗಿದ್ದಾಗ ಇದು ಆಗಬಾರದು ಎಂದು ಹೇಳಿ ನನ್ನ ಗಮನಕ್ಕೆ ಬಂದದ್ದನ್ನು ನಾನು ಎತ್ತಿಕೊಂಡು ಬಂದು ತಾವು ಕರೆಯುವ ಮುಂಚೆ ವಿನಂತಿ ಮಾಡಿಕೊಂಡಿದ್ದೇನೆ. ಇದು ಆಗಬಾರದು ಸ್ವಾಮಿ, ಇದನ್ನು ನಿಲ್ಲಿಸಿರಿ, ನಿಲ್ಲಿಸುವುದರಿಂದ ಈ ಸದನಕ್ಕೆ ಒಳ್ಳೆಯದಾಗುತ್ತದೆ. ಒಳ್ಳೆಯ ಸಂಪ್ರದಾಯ ಆಗುತ್ತದೆಂಬ ದೃಷ್ಟಿಯಿಂದ ಹೇಳಿದ್ದೇನೆ. ಅದರ ತೀರ್ಮಾನ ತಮಗೆ ಬಿಟ್ಟಿದ್ದು. ಬಜೆಟ್ ಅನ್ನು ಮಂಡಿಸುವುದಕ್ಕೆ ಅವಕಾಶ ಕೊಡಬೇಕೆ ಕೊಡಬಾರದೇ, ಪ್ರಿಸೆಂಟ್ಸ್‌ನಲ್ಲಿ ಆಗಿದೆಯೇ ಆಗಿಲ್ಲವೇ ಹ್ಯಾಗೇ ಎಂಬುದು ತಮ್ಮ ವಿವೇಚನೆಗೆ ಬಿಟ್ಟಿದ್ದು. ಘಟನೆ ಏನೋ ನಡೆಯಿತು, Just facts, not beyond that. ಏನು ವಾಸ್ತವಾಂಶ ನಡೆಯಿತು ಅಷ್ಟನ್ನು ಮಾತ್ರ ಈ ಸಭೆಯ ಮುಂದಿಟ್ಟು ತಮ್ಮ ಗಮನಕ್ಕೆ ತರುತ್ತಿದ್ದೇನೆ ಅಷ್ಟೆ.

ಅದಕ್ಕಿಂತ ಬೇರೇನೂ ಇಲ್ಲ. ಲಾಂಜ್‌ನಲ್ಲಿ ನಾನು ನನ್ನ ಸ್ನೇಹಿತರು ಕುಳಿತದ್ದೆವು. ತಾವು ಅಡ್ಜರ್ನ್‌ಮೆಂಟ್ ಮಾಡಿ ಹೋದಮೇಲೆ ನಾನೂ ಎಲ್ಲೂ ಮನೆಗೆ ಹೋಗಲಿಲ್ಲ. ಇಲ್ಲೇ ಕುಳಿತುಕೊಂಡು ಮಾತನಾಡುತ್ತಿದ್ದೆ. ಅಷ್ಟು ಹೊತ್ತಿಗೆ ಮಾನ್ಯ ಯಾಹ್ಯಾ ಅವರು ಬಂದರು, ಮಾನ್ಯ ರಾಜಶೇಖರಮೂರ್ತಿಯವರೂ ಬಂದರು. ನಾನೂ ಡಾಕ್ಟರ್ ಪಕ್ಕದಲ್ಲಿ ಕುಳಿತುಕೊಂಡಿದ್ದೆ. ಇನ್ನೂ ಕೆಲವರು ಪಕ್ಕದಲ್ಲಿ ಕುಳಿತುಕೊಂಡಿದ್ದರು. ನಮ್ಮ ಎದುರಿಗೆ ಕೆಲವು ಪತ್ರಿಕೆಯವರು ಕಾಫಿ ಕುಡಿಯುತ್ತಾ ಕುಳಿತುಕೊಂಡಿದ್ದರು. ಇದು ವಾಸ್ತವಾಂಶ. ನಾಲ್ಕೈದು ಜನ ಈ ಇಲಾಖೆಗೆ ಸಂಬಂಧಪಟ್ಟಿರುವವರು ಇರಬಹುದು. ಬಹಳ ಮಟ್ಟಿಗೆ ನನಗೆ ಅನ್ನಿಸುತ್ತದೆ, Just wait. Why are yo worried ?

(ಗೊಂದಲ)

ನನ್ನನ್ನು ಜೋರು ಮಾಡಿ ಕೂರಿಸಲಿಕ್ಕೆ ಹೊರಟರೆ ಅದು ಬಹಳ ತಪ್ಪಾಗುತ್ತದೆ. ಈ ಸದನದಲ್ಲಿ ತಪ್ಪು ಮಾಡಿದರೆ ಕಾನೂನು ಪ್ರಕಾರ ಅದು ಸರಿಯಲ್ಲವೆಂಬ ಭಾವನೆಯನ್ನು ನಾವು ಇಟ್ಟುಕೊಂಡಿದ್ದೇವೆ. ಇಲ್ಲಿ ಆಗುತ್ತಿರುವುದನ್ನು ರಾಜ್ಯದ ಜನ ನೋಡುತ್ತಾ ಇದ್ದಾರೆ. ಅವರು ಎಷ್ಟು ಕೂಗಿದರೂ I will not be cowed down by these things. I do not want to look at them. I would like to place before this August only the facts. ನಾವು ಅಲ್ಲಿ ಕುಳಿತುಕೊಂಡಿದ್ದೆವು. ಆಗ ನಾಲ್ಕಾರು ಜನ ಗುಮಾಸ್ತರಿರಬಹುದು, ನನಗೆ ಅವರ ಹೆಸರು ಗೊತ್ತಿಲ್ಲ, ಅವರು ಹಂಚುತ್ತಾ ಇದ್ದರು. ಡಾ.ಮಲಕರೆಡ್ಡಿಯವರಿಗೆ ಒಂದು ಕಾಫಿಯನ್ನು ಹಂಚಿದರು, ಆ ಕಾಪಿಯನ್ನು ನಾನು ತೆಗೆದುಕೊಂಡು ಹಾಗೆಯೇ ಇಟ್ಟುಕೊಂಡು ಇಲ್ಲಿಗೆ ಬಂದ. I did not show it to anybody, not even to the Secretary of my own party Mr. Ananatha krishna who is a very close friend as to what it is ನಾನು ತಮ್ಮ ಮುಂದೆ ಏಕೆ ಇಟ್ಟೆ ಎಂದರೆ, ಇನ್ನೂ ಅನಾಹುತವಾಗಿಲ್ಲ, ಅದು ಮಂಡನೆ ಆಗಿಲ್ಲ, ಇಂಥಾದ್ದರಲ್ಲಿ ಅದನ್ನು ಮಂಡನೆ ಮಾಡಿದರೆ ತಪ್ಪಾಗಬಹುದೆಂದು ತಮಗೆ ನಾನು ಕೇಳಿಕೊಳ್ಳುತ್ತಿದ್ದೇನೆ. ಇದನ್ನು ತಾವು ನಿಲ್ಲಿಸಬೇಕು ಇದನ್ನು ಮಂಡನೆ ಮಾಡಿಸಬಾರದು. ಆಮೇಲೆ ಮುಖ್ಯಮಂತ್ರಿಗಳು ಮತ್ತೊಂದು ಭಾಷಣವನ್ನು ಮಾಡಲಿಕ್ಕೆ ಬರುತ್ತದೆ. ನಾಳೆಯೋ, ನಾಡಿದ್ದೋ ಇನ್ನೊಂದು ದಿವಸ ಸಮಯ ತೆಗೆದುಕೊಂಡು ಭಾಷಣ ಮಾಡಲಿಕ್ಕೆ ಬರುತ್ತದೆ.

(ಗೊಂದಲ)

ತಮಗೆ ಕಾನೂನು ಗೊತ್ತಿಲ್ಲ. ಏತಕ್ಕೆ ಮಾತನಾಡುತ್ತೀರಿ, ತಾವು ಕಾನೂನು ಗೊತ್ತಿದ್ದರೆ ಈ ರೀತಿ ಮಾತಾನಾಡುತ್ತಿರಲಿಲ್ಲ. ನಾನು ಮಾನ್ಯ ಕಾಗೋಡು ತಿಮ್ಮಪ್ಪನವರ ಬಗ್ಗೆ ಬಹಳ

ಗೌರವವನ್ನು ಇಟ್ಟುಕೊಂಡಿದ್ದೆ. ಅವರಿಗೆ ಏನೂ ಕಾನೂನು ಗೊತ್ತಿಲ್ಲ ಎಂದು ಈಗ ಗೊತ್ತಾಯಿತು. ಇನ್ನು ತಮ್ಮ ವಿವೇಚನೆಗೆ ಬಿಟ್ಟಿದ್ದೇನೆ. ನನಗೆ ಅಲ್ಲಿ ಏನೂ ಕಾಪಿ ದೊರೆಯಿತು, ಅದನ್ನು ತೆಗೆದುಕೊಂಡು ಬಂದು ನಾನು ತಮಗೆ ಹೇಳಿದ್ದೇನೆ. ನಾನು ವಿನಂತಿ ಮಾಡಿಕೊಂಡಿದ್ದೇನೆ, I have not raised any point of order. I did not make any allegations against the Chif Minister or the Finance Minister who incidentally holds the portfolio. I did not make allegations. ನಾನು ತಮಗೆ ಏನು ಹೇಳಿದೆಯೆಂದರೆ ಇದು ನಡೆದಿದೆ, ಇದಕ್ಕೆ ಅವಕಾಶವನ್ನು ಕೊಡಬೇಡಿ, ಅವಕಾಶವನ್ನು ಕೊಟ್ಟರೆ ತಪ್ಪಾಗಬಹುದು. ಮುಂದಿನ ಕಾನಸಿಕ್ವೆನ್ಸನ್ ಆಗಬಹುದು ಎಂದು ಹೇಳಿದ್ದೇನೆ. This is all the facts. ಆದುದರಿಂದ ಮುಂದಿನ ವಿಚಾರವನ್ನು ನಾನು ತಮಗೆ ಬಿಟ್ಟಿದ್ದೇನೆ.

ಶ್ರೀ ಡಿ.ಬಿ. ಚಂದ್ರೇಗೌಡ: ಶಾಸಕಾಂಗ ಕಾರ್ಯಾಲಯದಲ್ಲಿ ದೋಷ ನಡೆದಿದೆ ಎನ್ನುವುದು ನಿಮ್ಮ ಒಟ್ಟು ಮಾತಿನ ಅರ್ಥ I feel that it is casting an aspersion on the Chair itself. I may be wrong. Sir, two distinquishing factors that you got to take notice of are...........

ತಮ್ಮ ಅಬ್ಸರ್ವೇಷನ್‌ನಲ್ಲಿ ಬಜೆಟ್‌ನಲ್ಲಿ ಸ್ಯಾಂಕ್ಟಿಟಿ ಬಗ್ಗೆ ಹೇಳಿದ್ದೀರಿ.

I am going in terms of the contempt of the House, this very House itself . ಬಹಳ ಮುಖ್ಯವಾಗಿ, ಹಿರಿಯ ಸದಸ್ಯರಾದ ಶ್ರೀ ಮಾನ್ ರಂಗನಾಥ ಅವರ ಶಾಸಕಾಂಗದ ಪ್ರಿಸಿಂಕ್ಸ್ ಒಳಗೆ ಕಾಪಿ ಸಿಕ್ಕಿತು ಎನ್ನತಕ್ಕಂಥ ವಾದವನ್ನಾಗಲಿ, ಶಾಸಕಾಂಗದ ಕಛೇರಿಯಿಂದ ಕೊಟ್ಟರು ಎಂದಾಗಲಿ ಅವರು ಪ್ರಸ್ತಾಪ ಮಾಡಲಿಲ್ಲ. ಇಲ್ಲಿ ಡಿಸ್ಟಿಂಕ್ಷನ್ ಏನೆಂದರೆ ಫೈನಾನ್ಸ್ ಡಿಪಾರ್ಟಮೆಂಟಿಗೆ ಸಂಬಂಧಪಟ್ಟ ಅಧಿಕಾರಿಗಳು ಕಾಪಿಯನ್ನು ಕೊಡುತ್ತಿದ್ದರು ಎನ್ನತಕ್ಕಂಥದ್ದು ಮುಖ್ಯವಾದ ಪ್ರಶ್ನೆ.

*****

# ಪತ್ರಿಕೆಯವರು ದೊಡ್ಡ ತಪ್ಪು ಮಾಡಿಬಿಡುತ್ತಾರೆ!

18 ಜುಲೈ 2002

ಕನ್ನಡ ಪ್ರಭ ಪತ್ರಿಕೆಯಲ್ಲಿ ಬಿಜೆಪಿ ಉಚ್ಚಾಟಿತ ಸದಸ್ಯರು ಎಂದು ಉಲ್ಲೇಖಿಸಿರುವುದರ ಬಗ್ಗೆ ನಡೆದ ಒಂದು ಗೊಂದಲಮಯ ಚರ್ಚೆ.

**ಶ್ರೀ ಕೆ.ಎಚ್. ರಂಗನಾಥ್** (ಅರಣ್ಯ ಸಚಿವರು).- ಅಧ್ಯಕ್ಷರೇ, ನನ್ನ ಒಂದು ಸಣ್ಣ ವಿಚಾರ ಇದೆ. ಅದನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ. ನಾನು ಬೆಳಿಗ್ಗೆ ಪತ್ರಿಕೆಯನ್ನು ಓದುತ್ತಾ ಇದ್ದೆ. ಅದು 'ಕನ್ನಡಪ್ರಭ' ಪತ್ರಿಕೆ ಫೇರ್ ರಿಪೋರ್ಟಿಂಗ್ ಇಲ್ಲಿ ಆಗಬೇಕು. ನಿನ್ನೆ ಇಲ್ಲಿ ಒಂದು ಪ್ರಶ್ನೆ ಬಂದಿದೆ. ಶ್ರೀ ಹೆಚ್.ಸಿ. ಬಸವರಾಜು ಅವರು ಸಚಿವರಾದ ಚಂದ್ರಶೇಖರ್ ಅವರಿಗೆ ಒಂದು ಪ್ರಶ್ನೆ ಕೇಳಿದ್ದಾರೆ. ಅವರು ಬಸವರಾಜ್ ಆಗಿ ಪ್ರಶ್ನೆ ಕೇಳಿದ್ದಾರೆ. ಇಲ್ಲಿ ನಾನು ಬೆಳಿಗ್ಗೆ ಪತ್ರಿಕೆಯನ್ನು ಓದುತ್ತಾ ಇರುವಾಗ ಅದನ್ನು ನೋಡಿದಾಗ ಹೀಗಿತ್ತು "…….ವಿಧಾನಸಭೆಯಲ್ಲಿ ಬುಧವಾರ ಪ್ರಶ್ನೋತ್ತರ ವೇಳೆ ಬಿ.ಜೆ.ಪಿ.ಯ ಉಚ್ಚಾಟಿತ ಸದಸ್ಯ….." ಹಾಗೆ ಎಂದು ಹೇಳಿ ಇದೆ. ಹಾಗೆ ಬರೆದರೆ ಹೇಗೆ? ಹಾಗೆ ಅನ್ನಬಹುದಾ? ನಮ್ಮ ರೂಲ್ಸ್ ಪ್ರಕಾರ ಅಥವಾ ಸಂಪ್ರದಾಯದ ಪ್ರಕಾರ ಸದಸ್ಯರನ್ನು ಇಂಗ್ಲಿಷಿನಲ್ಲಿ ಆದರೆ 'Hon'ble Minister ಎನ್ನುತ್ತೇವೆ, ಇಂಗ್ಲೇಂಡಿನಲ್ಲಿ. ಆದರೆ ಇಲ್ಲಿ 'ಗೌರವಾನ್ವಿತ ಸದಸ್ಯರು' ಎನ್ನಬೇಕು. ಒಂದು ವೇಳೆ ಅಕಸ್ಮಾತಾಗಿ ನೀವು ಸದಸ್ಯರ ಹೆಸರು ಮರೆತುಬಿಟ್ಟರೆ ಅವರ ಕ್ಷೇತ್ರ ಇರುತ್ತದಲ್ಲಾ, ಇಂತಹ ಕ್ಷೇತ್ರದ ಸದಸ್ಯರು ಎಂದು ಹೇಳಬೇಕು. ಹಾಗೆಂದು ಹೇಳಿ ನಾವು ನೀವು ಎಲ್ಲಾ ಓದುತ್ತೇವೆ, ಮಾನ್ಯ ಸದಸ್ಯರುಗಳು ಓದಿದ್ದಾರೆ.
ಪೇಪರ್‌ನವರು ಸ್ವಾಮಿ ತಾವುಗಳು ಬುದ್ಧಿವಂತರು ಎಂದು ಹೇಳಿ ಒಂದೊಂದು ಸಾರಿ ಬಹಳ ದೊಡ್ಡ ತಪ್ಪು ಮಾಡಿಬಿಡುತ್ತಾರೆ. ದಯಮಾಡಿ ಅವರಿಗೆ ಹೇಳಬೇಕು. ಇದು ಒಳ್ಳೆಯದಲ್ಲ. I cannot take it lying down.

**ಅಧ್ಯಕ್ಷರು.**- ನಾನು ಅವರನ್ನು ಕರೆಸಿ ಮಾತನಾಡುತ್ತೇನೆ.

**ಶ್ರೀ ಕೆ.ಎಚ್. ರಂಗನಾಥ್.**- ಬಿ.ಜೆ.ಪಿ.ಯ ಉಚ್ಚಾಟಿತ ಸದಸ್ಯರು, ಅವರು ಹಾಗೆ ಕೇಳಿದರೆ ಅವರ ಪ್ರಶ್ನೆಯಲ್ಲಿ ಹೆಚ್‌ಸಿ ಬಸವರಾಜು ಎಂದು ಇದೆ. ನಾನು ಅವರ ಪ್ರಶ್ನೆಯನ್ನು ವೆರಿಫೈ ಮಾಡಿದೆ. ಹೆಚ್‌ಸಿ ಬಸವರಾಜು ಎಂದು ಪ್ರಿಂಟೆಡ್ ಲಿಸ್ಟ್‌ನಲ್ಲಿದೆ. ನಂತರ ಉತ್ತರ ಹೇಳುವಾಗಲೂ ಮಂತ್ರಿಗಳು ಹಾಗೆಯೇ ಹೇಳಿರುತ್ತಾರೆ. ಇಲ್ಲಿ ನೋಡಿ, ವಿಧಾನಸಭೆಯಲ್ಲಿ ಬುಧವಾರ ಪ್ರಶ್ನೋತ್ತರ ವೇಳೆಯಲ್ಲಿ ಬಿ.ಜೆ.ಪಿ.ಯ ಉಚ್ಚಾಟಿತ ಸದಸ್ಯ ಹೆಚ್.ಸಿ. ಬಸವರಾಜು ಅವರ ಪ್ರಶ್ನೆಗೆ ಸಚಿವರು ಈ ವಿಷಯವನ್ನು ಸ್ಪಷ್ಟಪಡಿಸಿದರು.

**ಶ್ರೀ ಡಿ.ವಿ. ಸದಾನಂದಗೌಡ.**- ಅದರಲ್ಲಿ ಏನು ತಪ್ಪು ಇದೆ? 3-4 ಜನ ಬಸವರಾಜುರವರು ಇದ್ದಾರೆ. ಒಂದು ಬಸವರಾಜುರವರನ್ನು ಚೆನ್ನಾಗಿ ಐಡೆಂಟಿ ಫೈ ಮಾಡಬೇಕಾದರೆ ಏನು ವ್ಯವಸ್ಥೆ ಎಂದು ಮಾಡಿದ್ದಾರೆ. ಅದರಲ್ಲಿ ಏನು ತಪ್ಪು ಇದೆ?

(ಗೊಂದಲ)

**ಅಧ್ಯಕ್ಷರು.**- ತಾವು ಕುಳಿತುಕೊಳ್ಳಿ. Don't take down. (ಗೊಂದಲ)

**ಶ್ರೀ ಕೆ.ಎಚ್. ರಂಗನಾಥ್.**- ನೀವು ಬೇಕಾದರೆ ನಿಮ್ಮ ಬಿ ಜೆ ಪಿ ಆಫೀಸ್‌ನಲ್ಲಿ ಹೇಳಿ. ಅದು ಬೇರೆ. (ಗೊಂದಲ)

*****

ಆಚಾರವರಿಯಿರಿ, ವಿಚಾರವರಿಯಿರಿ
ಜಂಗಮ ಸ್ಥಲ ಲಿಂಗ ಕಾಣಿರಯ್ಯ
ಜಾತಿಭೇದವಿಲ್ಲ, ಸೂತಕವಿಲ್ಲ, ಅಜಾತಂಗೆ
ಕುಲವಿಲ್ಲ. ನುಡಿದಂತೆ ನಡೆಯದಿದ್ದಡೆ
ಕೂಡಲಸಂಗಯ್ಯ ಮೆಚ್ಚ ಕಾಣಿರಯ್ಯ



# ಅಮೃತ ನುಡಿಗಳು

ಸಂಗ್ರಹ: ಎನ್. ನರಸಿಂಹಮೂರ್ತಿ

**ನಾಡಿನ ಹಿರಿಯ ಮುತ್ಸದ್ದಿ ರಂಗನಾಥ್‌ಜೀಯವರನ್ನು ಕಂಡ ಅವರ ಸಮಕಾಲೀನ ಚೇತನಗಳು ನೀಡಿದ ಅಮೃತ ನುಡಿಗಳನ್ನು ಅಮೃತ ಮಹೋತ್ಸವ ಸಂದರ್ಭದಲ್ಲಿ ಹೊರತಂದ ಪರಿಶುದ್ಧ ಎಂಬ ಪುಸ್ತಕದಿಂದ ಆಯ್ದು ಇಲ್ಲಿ ಸಂಕ್ಷಿಪ್ತವಾಗಿ ನೀಡಲಾಗಿದೆ.**

ಜೀವನ ಮೌಲ್ಯಗಳನ್ನು ಗೌರವಿಸುವ, ಸಾತ್ವಿಕ ಮಾರ್ಗಾನುಯಾಯಿಗಳು ವಿರಳವಾಗುತ್ತಿರುವ ಈ ದಿನಮಾನಗಳಲ್ಲಿ ಸಾರ್ವಜನಿಕ ಜೀವನದಲ್ಲಿ ಆಶಾಭಾವನೆಯನ್ನು ಉಳಿಸಿಕೊಳ್ಳುವಂತೆ ಬದುಕನ್ನು ನಡಸಿರುವ ಶ್ರೀ ಕೆ.ಎಚ್. ರಂಗನಾಥರದು "ವನಸುಮದೊಳೆನ್ನ ಜೀವನವು ವಿಕಸಿಸುವಂತೆ ಮನವನನುಗೊಳಿಸು ಗುರುವೆ" ಎಂಬಂತಹದು. ಸಾಧನೆ ದೊಡ್ಡದು ಪರಿಶುದ್ಧತೆಗೆ ಕುಂದಣವಿಟ್ಟಂತಹದು. ಮಹಾತ್ಮಗಾಂಧಿಯವರ ತತ್ವಾನುಯಾಯಿಗಳಾಗಿ, ಅಬ್ಬರ, ಆರ್ಭಟ, ಪ್ರಚಾರ, ಪ್ರತಿಷ್ಠೆಗಳಿಂದ ಮುಕ್ತವಾಗಿ ನಡೆದು ಬಂದಿರುವ ಶ್ರೀಯುತರದು ಅನನ್ಯ ಜೀವನ ಶೈಲಿ. ಶಾಸಕರಾಗಿ, ಸಚಿವರಾಗಿ ರಾಜ್ಯದ ರಾಜಕಾರಣದಲ್ಲಿ ಸಂಭಾವಿತರೆನಿಸಿಕೊಂಡವರು. ವ್ಯಕ್ತಿಯ ಘನತೆ ಗೌರವಗಳು ಅಧಿಕಾರದಿಂದ ಬರುವಂತಹುವಲ್ಲ. ಸಹಜ ಸುಂದರ ನಡವಳಿಕೆಯಿಂದ ಪ್ರಾಪ್ತವಾಗುವಂಥವು ಎಂಬುದನ್ನು ಸಾಬೀತುಗೊಳಿಸಿದವರು ಸೇವಾ ಸಂಪನ್ನತೆಗೆ ಇನ್ನೊಂದು ಹೆಸರು ಶ್ರೀ ರಂಗನಾಥ.

– ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

ಶ್ರೀ ಸಿದ್ಧಗಂಗಾ ಮಠ

ಕರ್ನಾಟಕ ಸಾಂಸ್ಕೃತಿಕ ಶ್ರೀಮಂತ ಪರಂಪರೆಗೆ ಇಲ್ಲಿನ ಕಲೆ, ಸಾಹಿತ್ಯ, ಸಂಗೀತ, ವಾಸ್ತುಶಿಲ್ಪ, ಧರ್ಮ ಮತ್ತು ಶಿಕ್ಷಣ ಮುಖ್ಯ ಕಾರಣ. ಇವುಗಳ ಸಾಲಿಗೆ ರಾಜಕಾರಣವೂ ಸೇರುತ್ತದೆ. ಕರ್ನಾಟಕದ ರಾಜಕಾರಣದ ಇತಿಹಾಸದಲ್ಲಿ ಮರೆಯಲಾರದ ಮಹಾ ಚೇತನಗಳಿವೆ. ಅಂಥ ಚೇತನಗಳ ಸಾಲಿಗೆ ಸೇರಬಹುದಾದ ರಾಜಕೀಯ ಮುತ್ಸದಿ ಶ್ರೀ ಕೆ.ಎಚ್. ರಂಗನಾಥ್.

ರಾಜಕಾರಣದ ತಮ್ಮ ಇಡೀ ಜೀವನದಲ್ಲಿ ಯಾರಿಂದಲೂ ಬೆರಳು ಮಾಡಿ ತೋರಿಸದ ಹಾಗೆ ಪಾರದರ್ಶಕ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡಿರುವವರು. ಇಂಥವರು ಚಿತ್ರದುರ್ಗದವರ ಪುತ್ರರಲ್ಲಿ ಒಬ್ಬರೆಂದು ಹೇಳಲು ಹೆಮ್ಮೆಯಾಗುತ್ತದೆ.

ಸಮಾಜವಾದಿ ವಿಚಾರಧಾರೆಯನ್ನು ಅಧ್ಯಯನ ಮಾಡಿದ ಶ್ರೀ ರಂಗನಾಥ್ ಸಮಾಜದಲ್ಲಿನ ದುರ್ಬಲರ ಏಳ್ಗೆಗೆ ಬೆನ್ನೆಲುಬಾಗಿ ನಿಂತವರು. ಶೋಷಿತ ಜನಾಂಗದ ಬಗ್ಗೆ ಅಪಾರವಾದ ಕಾಳಜಿಯುಳ್ಳವರು. ಸಮಾನ ಸಮಾಜದ ಕನಸನ್ನು ಕಂಡವರು. ಸ್ವಪ್ರತಿಷ್ಠೆ, ಧಿಮಾಕು ಮತ್ತು ಹುಂಬುತನಗಳಿಂದ ಬಹುದೂರ ಇದ್ದಾರೆ.

– ಶ್ರೀ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರು

ಚಿತ್ರದುರ್ಗ

ತಮ್ಮ ಸಾರ್ವಜನಿಕ ಜೀವನದಲ್ಲಿ ಅನೇಕ ಏಳು ಬೀಳುಗಳನ್ನು ಕಂಡಿರುವ ಶ್ರೀ ರಂಗನಾಥ ಅವರು ಎಂದೂ ಅವಕಾಶವಾದಿಗಳಾಗಿ ಬಾಳದೆ ತಾವು ನಂಬಿದ ತತ್ವಗಳಿಗೆ ಬದ್ಧವಾಗಿ ಬದುಕಿದವರು. ಸಮಕಾಲಿನ ಸಾರ್ವಜನಿಕ ರಂಗದಲ್ಲಿ ಇಂಥವರು ದೊರೆಯುವುದು ತುಂಬಾ ವಿರಳ.

-- ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು

ಶ್ರೀ ತರಳಬಾಳು ಜಗದ್ಗುರು

Sri Ranganath has made significant contributions to the politics and society of the country and, especially, Karnataka. Greater the heights he attained in public life, closer became his contact with the grassroots. Highly regarded for his political prowess, administrative acumen and parliamentary skills, Sri Ranganath was equally respected for his nature reflection, wise counsel and deep sensitivity for the poor and the deprived. He has remained a true and tireless adherent of socialism.

- **KRISHNA KANT**

Former. Vice President of India

ಶ್ರೀ ಕೆ.ಎಚ್. ರಂಗನಾಥ್ ಅವರು ಪರಿಪಕ್ವತೆಗೆ ಮತ್ತೊಂದು ಹೆಸರು. ತಮ್ಮ ಸಾರ್ವಜನಿಕ ಜೀವನದಲ್ಲಿ ಅನೇಕ ಏಳುಬೀಳುಗಳನ್ನು ಕಂಡಿರುವ ಶ್ರೀಯುತರದು ವಿಸ್ತಾರವಾದ, ಆಳವಾದ ಹಾಗೂ ವೈವಿಧ್ಯಮಯವಾದ ಲೋಕಾನುಭವ ಪಡೆದ ಸಮಾಜವಾದಿ ಬದುಕಾಗಿರುತ್ತದೆ. ಮೇಲಾಗಿ ತಮ್ಮ ಸರಳತೆ, ಪ್ರಾಮಾಣಿಕತೆ ಮತ್ತು ತೆರೆದ ಮನಸ್ಸಿನಿಂದ ಎಲ್ಲರ ಪ್ರೀತಿ ಗೌರವಗಳನ್ನು ಗೆದ್ದುಕೊಂಡ ಹಿರಿಯರಾಗಿದ್ದಾರೆ.

- ವಿ.ಎಸ್. ರಮಾದೇವಿ

ಕರ್ನಾಟಕದ ಮಾಜಿ ರಾಜ್ಯಪಾಲರು

I know that Shri Ranganath has made a name for himself as a leader of the masses and is an unholder of the Gandhian principles.

**- Sonia Gandhi**

President, AICC

ಕಳೆದ ಐದು ದಶಕಗಳಿಗಿಂತಲೂ ಹೆಚ್ಚು ಕಾಲ ಸಾರ್ವಜನಿಕ ಜೀವನದಲ್ಲಿ ಶ್ರೀ ಕೆ.ಎಚ್. ರಂಗನಾಥ್‌ರವರು ಸಮಾಜದ ಎಲ್ಲಾ ವರ್ಗಗಳಲ್ಲೂ ಗೌರವ ಆದರಣೆಗೆ ಪಾತ್ರರಾಗಿದ್ದಾರೆ. ಹಾಗೂ ಸಾರ್ವಜನಿಕ ಬದುಕಿನಲ್ಲಿ ಇರುವವರು ಹೇಗೆ ಬದುಕಬೇಕೆಂಬುದಕ್ಕೆ ಉದಾಹರಣೆಯಾಗಿದ್ದಾರೆ. ಇಂತಹ ಆದರ್ಶ ವ್ಯಕ್ತಿ ನಮ್ಮ ಸಚಿವ ಸಂಪುಟದ ಸದಸ್ಯರಾಗಿರುವುದು ಹೆಮ್ಮೆಯ ವಿಚಾರ.

- ಎಸ್.ಎಂ. ಕೃಷ್ಣ

ಮಹಾರಾಷ್ಟ್ರದ ರಾಜ್ಯಪಾಲರು.

Veteran Gandhian, freedom fighter and senior administrator, Shri Rnganath has been rendering laudable service in the socio-political scenario for the past 50 years.

**- A.K. ANTONY**

General Secretary, AICC

Shri K.H. Ranganath, is a veteran Gandhian, a great freedom fighter, a distinguished administrator and a renowned parliamentarian. The life and work of Shri Ranganath are a source of inspiration for the younger generation.

**- Manmohan Singh**
Prime Minister of India

ಶ್ರೀ ಕೆ.ಹೆಚ್. ರಂಗನಾಥ್‌ರವರು ಸಾರ್ವಜನಿಕ ಜೀವನದಲ್ಲಿ ಗಾಂಧೀಜಿಯವರ ಆದರ್ಶಗಳನ್ನು ಮೈಗೂಡಿಸಿಕೊಂಡು ಸರಳತೆ ನಿರಾಡಂಬರ ಪ್ರಚಾರ ಮತ್ತು ಹೊಗಳಿಕೆಗಳಿಂದ ದೂರವಿರುವ ಅಪರೂಪದ ವ್ಯಕ್ತಿ. ಸ್ವಾರ್ಥ ಮತ್ತು ಸ್ವಹಿತದ ಭ್ರಷ್ಟ ರಾಜಕಾರಣದಿಂದ ಬಹುದೂರವಿದ್ದು ಪ್ರಗತಿಪರ ಧೋರಣೆ. ದೇಶದ ಹಿತಚಿಂತನೆಯ ಬಗ್ಗೆ ಅತ್ಯಂತ ಕಾಳಜಿಯುಳ್ಳ ಅಪರೂಪದ ವ್ಯಕ್ತಿ.

**- ರಾಮಕೃಷ್ಣ ಹೆಗಡೆ**
ದಿವಂಗತ ಮುಖ್ಯಮಂತ್ರಿಗಳು

Shri K.H. Ranganath is one of our very senior Congress leaders, a freedom fighter and a good parliamentarian. He is widely respected. As PCC President of Karnataka he greatly strengthened the party. As a Minister in the Govt. of Karnataka, he is committed to implementing the Congress Manifesto for achieving socio economic justice.

**- Ambika Soni**
General Secretary, AICC

ಶ್ರೀ ಕೆ.ಹೆಚ್. ರಂಗನಾಥ್‌ರವರು ರಾಜ್ಯದ ಹಿರಿಯ ನಾಯಕರು, ಮುತ್ಸದ್ದಿಗಳು. ಕಳೆದ ಐದು ದಶಕಗಳಿಗಿಂತಲೂ ಹೆಚ್ಚು ಕಾಲ ಸಾರ್ವಜನಿಕ ಜೀವನದಲ್ಲಿ ಸಮಾಜದ ಎಲ್ಲಾ ವರ್ಗಗಳಲ್ಲೂ ಗೌರವ ಮನ್ನಣೆಗೆ ಪಾತ್ರರಾದ ಹಿರಿಯರು.

**- ಸಿ.ಕೆ. ಜಾಫರ್ ಷರೀಫ್**
ಕೇಂದ್ರದ ಮಾಜಿ ಮಂತ್ರಿಗಳು

ಶ್ರೀ ಕೆ.ಎಚ್. ರಂಗನಾಥ್ ಅವರು ನನ್ನ ಆತ್ಮೀಯರಾಗಿದ್ದು ಸುಮಾರು 3 ದಶಕಗಳಿಂದ ಒಟ್ಟಿಗೆ ಕೆಲಸ ಮಾಡಿದವರಾಗಿರುತ್ತಾರೆ. ಅವರು ಮಹಾ ಸಾಧಕರಾಗಿದ್ದು, ಮಹಾತ್ಮಾ ಗಾಂಧೀಜಿಯವರ ಆದರ್ಶಗಳನ್ನು ಪಾಲಿಸಿಕೊಂಡು ಬಂದವರಾಗಿದ್ದಾರೆ. ಅವರು ಬರೇ ರಾಜಕಾರಣಿ ಆಗಿರದೆ ಒಬ್ಬ ಸಮಾಜ ಸುಧಾರಕರು ಆಗಿದ್ದು, ದಲಿತ ಹಾಗೂ ಹಿಂದುಳಿದ ವರ್ಗಗಳ ಏಳಿಗೆಗಾಗಿ ಸದಾ ದುಡಿದ ವ್ಯಕ್ತಿ ಆಗಿರುತ್ತಾರೆ. ಸಾಮಾಜಿಕ ನ್ಯಾಯದಲ್ಲಿ ಅಚಲ ವಿಶ್ವಾಸವಿಟ್ಟ ಒಬ್ಬ ಅಪರೂಪದ ಮೇರು ವ್ಯಕ್ತಿಯಾಗಿದ್ದಾರೆ.

**– ಎಂ. ವೀರಪ್ಪ ಮೊಯಿಲಿ**

ಮಾಜಿ ಮುಖ್ಯ ಮಂತ್ರಿಗಳು

ಶ್ರೀ ಕೆ.ಎಚ್. ರಂಗನಾಥ್ ಅವರು ಸತ್ಯ ನಿಷ್ಟುರರೆಂದು ಪ್ರಾಮಾಣಿಕ ಹಾಗೂ ದಕ್ಷ ಆಡಳಿತಗಾರರೆಂದು ಖ್ಯಾತರಾಗಿದ್ದಾರೆ. ತಮ್ಮ ಅನನ್ಯ ಪ್ರಾಮಾಣಿಕ ವ್ಯಕ್ತಿತ್ವದಿಂದ ಬಹು ಜನರ ಗಮನ ಸೆಳೆದಿದ್ದಾರೆ. ಅವರ ಜನಪರ ಕಾಳಜಿಯ ಬಗ್ಗೆ ಅನೇಕ ದೃಷ್ಟಾಂತಗಳನ್ನು ಕೊಡಬಹುದು. ಇಂತಹವರ ಜೀವನ ಹಾಗೂ ಸಾಧನೆಯನ್ನು ಯುವ ಪೀಳಿಗೆಗೆ ಪರಿಚಯಿಸುವುದು ಅತ್ಯಂತ ಅವಶ್ಯಕವಾಗಿದೆ.

**– ಬಿ.ಎಲ್. ಶಂಕರ್**

ಮಾಜಿ ಸಭಾಪತಿಗಳು

Mr K.H. Ranganath belongs to the fast vanishing rare breed of true Gandhians. who have dedicated their life to the service of the people. Through his unblemished record and selfless service, Mr. Ranganath has shown that it is possible to remain honest even in the murky politics of today. He is on of the few whose integrity, dedication and service have not been tarnished by allegations, controversies and misdeeds in his entire political career spanning over 50 years. In the last 30 years I have known him, he has always struck me as a through gentleman and an outstanding citizen.

**- U.R. Rao**

Formar Chairman, Space Commission.

ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದ್ದನ್ನು ನೆನಪಿಸಿಕೊಳ್ಳುವುದು ಸೂಕ್ತ. ಮೂಲತಃ ವಕೀಲ ವೃತ್ತಿಯವರಾಗಿದ್ದು ತಮ್ಮ ಸೇವೆಯನ್ನು ಸಮಾಜ ಸುಧಾರಣೆಗೆ ಮೀಸಲಾಗಿಟ್ಟಿದ್ದರು. ಸ್ವಾತಂತ್ರ್ಯದ ನಂತರ ಅಮೂಲ್ಯವಾದ ಸೇವೆಯನ್ನು ಕಾಂಗ್ರೆಸ್ ಪಕ್ಷದ ಮುಖೇನ ಸಾರ್ವಜನಿಕ ಜೀವನದಲ್ಲಿ ಸಲ್ಲಿಸುತ್ತಿರುವುದು ಅಭಿನಂದನಾರ್ಹ.

ವಿಧಾನಸಭೆಯ ಅಧ್ಯಕ್ಷರಾಗಿ ಇವರು ನಡೆಸಿಕೊಂಡು ಬಂದಿರುವ ಅಧಿವೇಶನದ ಕಾರ್ಯಕಲಾಪಗಳು ಇಂದಿಗೂ ಸಹ ಸಭಾಧ್ಯಕ್ಷರುಗಳಿಗೆ ಒಂದು ಮಾದರಿ. ತಮ್ಮ ರಾಜಕೀಯ ಜೀವನದಲ್ಲಿ ಅನೇಕ ಏರುಪೇರುಗಳನ್ನು ಕಂಡಿದ್ದು ಯಾರುದಕ್ಕೂ ಜಗದ್ದೇ ಸೋಲುಗೆಲವುಗಳನ್ನು ಸಮಾನಂತರವಾಗಿ ಸ್ವೀಕರಿಸುವ ವಿಶಾಲ ಮನೋಭಾವನೆಯನ್ನು ಉಳ್ಳವರಾಗಿದ್ದಾರೆ.

- ಧರ್ಮಸಿಂಗ್

ಮುಖ್ಯ ಮಂತ್ರಿಗಳು



ಅರಸು ಸಚಿವ ಸಂಪುಟಕ್ಕೆ 1978ರಲ್ಲಿ ರಾಜ್ಯಪಾಲ ಶ್ರೀ ಗೋವಿಂದನಾರಾಯಣ್ ಅವರಿಂದ ಪ್ರಮಾಣವಚನ



1989ರಲ್ಲಿ ವೀರೇಂದ್ರಪಾಟೀಲ್ ಸಚಿವ ಸಂಪುಟಕ್ಕೆ ಸೇರ್ಪಡೆ. ರಾಜ್ಯಪಾಲ ಶ್ರೀ ವೆಂಕಟಸುಬ್ಬಯ್ಯ ಅವರಿಂದ ಪ್ರಮಾಣ ವಚನ

# ಆ ಕಾಲದಲ್ಲಿ ಬುದ್ಧ; ಈಗ ರಂಗನಾಥ್

ಹೆಚ್. ಗಣಪತಿಯಪ್ಪ,

ಬುದ್ಧನ ಆ ಕಾಲವಂತೂ ನನಗೆ ಗೊತ್ತಿಲ್ಲ. ಆ ಕಾಲದ ಸತ್ಯಸಂಗತಿಗಳ ಬಗ್ಗೆ ನಾನು ಚರಿತ್ರೆಯಲ್ಲಿ ಓದಿ ಬಲ್ಲೆ, ಕೇಳಿ ಬಲ್ಲೆ. ಆದರೆ ಈ ಕಾಲದಲ್ಲಿ ಬದುಕಿರುವ ನನಗೆ ಬುದ್ಧನ ಆ ಮಹಾವ್ಯಕ್ತಿತ್ವದ ಅಂಶವುಳ್ಳ ಯಾರಾದರೂ ಇದ್ದಾರೆಯೇ ಎಂದು ಯೋಚಿಸಿದಾಗ ನನ್ನ ಮನಸ್ಸಿಗೆ ನನ್ನ ಅನುಭವಕ್ಕೆ ಬರುವ ದೊಡ್ಡ ವ್ಯಕ್ತಿ ಕೆ.ಎಚ್. ರಂಗನಾಥ್.

ಎಲ್ಲರೂ ನನ್ನನ್ನು ಅಲಕ್ಷ್ಯ ಮಾಡಿದ್ದರು. ಕಾಗೋಡು ಚಳುವಳಿ ಹಾಗೂ ಸ್ವಾತಂತ್ರ್ಯ ಹೋರಾಟದ ನಂತರ ಅನೇಕ ಜನ ಸಿಹಿ ಬೆಲ್ಲಕ್ಕೆ ಮಕ್ಕಳು ಮುತ್ತುವಂತೆ ಮುತ್ತಿದ ಅಧಿಕಾರ ದಾಹಿಗಳ ಕಾಲು ತುಳಿತದಲ್ಲಿ ನಾನು ಸತ್ತೆ ಹೋದಂತಿದ್ದೆ. ಎಲ್ಲೋ ಕೆಳಗೆ ಬಿದ್ದಿದ್ದ ನನ್ನನ್ನು ಮೇಲೆತ್ತಿ, ಪುನರ್ಜನ್ಮ ನೀಡಿದವರು ಗೆಳೆಯ ರಂಗನಾಥ್. ಚಳವಳಿಗಳ ಫಲ ಉಂಡವರು ನನ್ನನ್ನು ಮರೆತಾಗ, ರಂಗನಾಥ್ ಮರೆಯದೆ ನನ್ನನ್ನು ಎತ್ತರದ ಸ್ಥಾನಕ್ಕೆ ತಂದರು. ಅವರನ್ನು ನಾನು ಎಂದಿಗೂ ಮರೆಯುವಂತಿಲ್ಲ.

ರಂಗನಾಥ್ ಅವರ ಮನೋಲೋಕದಲ್ಲಿ ಅನೇಕ ಜ್ಞಾನಕೋಶಗಳಿವೆ. ಯಾರ್‍ಯಾರನ್ನು ಹೇಗೆ ಭಾವಿಸಬೇಕು, ಎಲ್ಲೆಲ್ಲಿ ಇಡಬೇಕು, ಯಾರ ಬಗ್ಗೆ ಮಾತನಾಡಬೇಕು, ಯಾರೊಂದಿಗೆ ಹೇಗೆ ವರ್ತಿಸಬೇಕು ಎಂಬ ಜಡ್ಜಿಂಗ್ ಕ್ಯೆಪಾಸಿಟಿ ರಂಗನಾಥ್ ಅವರಿಗೆ ಇದೆ. ಅವರು ಮಾತನಾಡುವುದು ಒಂದು ಜಡ್ಜ್‌ಮೆಂಟ್, ಮೌನವಾಗಿದ್ದರು ಒಂದು ಜಡ್ಜ್‌ಮೆಂಟ್. ನನ್ನ ಮನಸ್ಸಿನಲ್ಲಿ ಇದ್ದುದ್ದನ್ನು ಅವರು ಅರ್ಥ ಮಾಡಿಕೊಂಡು ಕ್ರಿಯೆಯ ರೂಪಕ್ಕೆ ತರುತ್ತಿದ್ದರು. ಇದನ್ನು ನಾನು ಆತ್ಮಾನುಸಂಧಾನ ಎಂದು ತಿಳಿದಿದ್ದೇನೆ. ರಂಗನಾಥ್ ಅವರನ್ನು ಯಾರೊಂದಿಗೂ ಹೋಲಿಸುವಂತಿಲ್ಲ. ಅಂತಹ ವಿಶಿಷ್ಟ ವ್ಯಕ್ತಿತ್ವ ಅವರದು.

ಸಾಮಾಜಿಕ ವ್ಯವಸ್ಥೆಯ ಕಟ್ಟ ಕಡೆಯ ಅಲಕ್ಷಿತ ಮನುಷ್ಯ, ಅತ್ಯಂತ ಎತ್ತರಕ್ಕೆ ಏರುವುದು ಅಷ್ಟು ಸುಲಭದ ಮಾತಲ್ಲ. ಲಾಲ್ ಬಹುದ್ದೂರ್‌ಶಾಸ್ತ್ರಿಯವರಂತೆ ಸರಳವಾಗಿ ಜೀವಿಸಿದಂತವರು, ಹಾಗೆಯೇ ಎತ್ತರದಲ್ಲಿ ನಿಂತವರು ರಂಗನಾಥ್. ನನ್ನ ರಾಜಕೀಯ ಗುರು ಕಡಿದಾಳು ಮಂಜಪ್ಪನವರಂತೆ ರಂಗನಾಥ್ ಕೂಡ ರಾಜಕಾರಣವನ್ನು ಪವಿತ್ರ ಸಂಕಲ್ಪ ಎಂದು ಭಾವಿಸಿಕೊಂಡವರು. ಶ್ರೀಮಂತರೊಂದಿಗಿದ್ದರೂ ಅವರ ಶ್ರೀಮಂತಿಕೆಯನ್ನು ದುರ್ಬಳಕೆ ಮಾಡಿಕೊಳ್ಳಲಿಲ್ಲ. ದುಪ್ಪಟ್ಟು ಸಂಪಾದಿಸುವ ದುರಾಸೆಯೂ ಇರಲಿಲ್ಲ.

ಶರೀರವಿದ್ದವನು ಮಾತ್ರ ಸೀಮಿತ ಆಸೆ ಇಟ್ಟುಕೊಂಡಿರುತ್ತಾನೆ. ದೇವರ ದಾಸಿಮಯ್ಯ ಹೇಳುವಂತೆ ಒಡಲುಗೊಂಡವ ಹಸಿವ ಒಡಲುಗೊಂಡವ ಹುಸಿವ, ನೀನು ಎನ್ನಂತೊಮ್ಮೆ ಒಡಲುಗೊಂಡು ನೋಡಾ ರಾಮನಾಥ ಎಂಬ ಸಿದ್ಧಾಂತಕ್ಕೆ ತಕ್ಕ ಹಾಗೆ ಬದುಕಿದವರು ರಂಗನಾಥ್.

ನನಗೆ ಇವರ ಮೇಲಿರುವಷ್ಟು ಪ್ರೀತಿ ಇನ್ಯಾರ ಮೇಲೂ ಇಲ್ಲ. ನಾನು ದಾರಿತಪ್ಪಿದಾಗ ರಂಗನಾಥ್ ನನ್ನನ್ನು ಬೈದಿದ್ದಾರೆ, ನನ್ನನ್ನು ತಿದ್ದಿದ್ದಾರೆ. ಆದರೆ ನನಗೆಂದೂ ಕೆಡುಕು ಬಯಸಿಲ್ಲ. ಆಧ್ಯಾತ್ಮಿಕವಾಗಿ ದೊಡ್ಡಸ್ತಿಕೆ ಪಡೆಯುವುದು ಬಹಳ ಸುಲಭ. ಲೌಕಿಕ ವ್ಯವಹಾರಗಳಲ್ಲಿದ್ದು ದೊಡ್ಡವರಾಗುವುದು ಎಷ್ಟು ಕಷ್ಟ! ಇದನ್ನು ರಂಗನಾಥ್ ಸಾಧಿಸಿ ತೋರಿಸಿದ್ದಾರೆ. ಅವರು ನನಗಿಂತ ಹೆಚ್ಚು ಕಾಲ, ನೂರ್ಕಾಲ ಬಾಳಬೇಕು.

ಚಾರಿತ್ರಿಕ ಮಹತ್ವವುಳ್ಳ ಕಾಗೋಡು ಚಳವಳಿ ನೇತಾರ ಹೆಚ್. ಗಣಪತಿಯಪ್ಪ ನಮ್ಮ ನಡುವಿನ ಹಿರಿಯ ಹೋರಾಟಗಾರ. ಕಾಗೋಡು ಸತ್ಯಾಗ್ರಹದ ಕಾಲದಿಂದಲೂ ರಂಗನಾಥರನ್ನು ಬಲ್ಲವರು. ರಂಗನಾಥರು ಹುಟ್ಟಿದ ದಿನ ಅಕ್ಟೋಬರ್ 20 ರಂದು ಬೆಂಗಳೂರಿಗೆ ಬಂದಿದ್ದರು. ಆ ಸಂದರ್ಭದಲ್ಲಿ ಅವರು ರಂಗನಾಥರನ್ನು ಕುರಿತು ಹೇಳಿದ ಅಪೂರ್ವ ಮಾತುಗಳಿವು.



# ಅಪರೂಪದ ವ್ಯಕ್ತಿತ್ವ

ಹಾರನಹಳ್ಳಿ ರಾಮಸ್ವಾಮಿ

ಕರ್ನಾಟಕದ ಸಾರ್ವಜನಿಕ ಜೀವನದ ಕ್ಷಿತಿಜದಲ್ಲಿ ಧ್ರುವತಾರೆಯಂತೆ ಶುಭ್ರವಾದ ದೃಢವಾದ ಶೋಭೆಯಿಂದ ಕಾಣುವ ಅಪರೂಪದ ವ್ಯಕ್ತಿ ಶ್ರೀ ಕೆ.ಎಚ್. ರಂಗನಾಥ್. ರಾಜ್ಯದ ಅಭುಕ್ತ ಮೂಲೆಯಿಂದ ಬಂದವರಾಗಿ ತುಂಬಾ ಧಾರ್ಮಿಕ ಪ್ರವೃತ್ತಿಯವರೂ ಆದ ತಂದೆತಾಯಿಯ ಪೋಷಣೆ - ಮಾರ್ಗ ಸೂಚಿಯಲ್ಲಿ ವ್ಯಕ್ತಿತ್ವ ರೂಪಿಸಿಕೊಂಡವರು, ತಮ್ಮ ಪರಿಶ್ರಮದಿಂದಲೇ ಮೊದಲ ಬಾರಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆಯಿಂದ ವಿಧಾನಸಭೆಗೆ ಆರಿಸಿ ಬಂದವರು. ಎರಡು ಬಾರಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿ, ಅನೇಕ ಬಾರಿ ಮಂತ್ರಿಯಾಗಿ, ಸಾಮಾನ್ಯ ಕ್ಷೇತ್ರದಿಂದ ಲೋಕಸಭೆಗೆ ಆರಿಸಿ ಬಂದು, ವಿಧಾನಸಭೆ ಅಧ್ಯಕ್ಷರಾಗಿ ಆಡಳಿತದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ರಾಜ್ಯದ ಆಡಳಿತದಲ್ಲಿ ಶ್ರೀ ರಂಗನಾಥ್ ಅವರ ಮಾತು ಯಾವಾಗಲೂ ಸರ್ವಮಾನ್ಯ- ಕಾರಣ ಅವರು ಹೇಳುವ ಮಾತು ತಿರಸ್ಕಾರಕ್ಕೆ ಆಸ್ಪದವಿಲ್ಲದಂತಿರುವುದು. ಬಡವರ ಸಂಕಷ್ಟವನ್ನು ತಿಳಿದವರು, ಸಮಾಜದಲ್ಲಿಯ ಅಸಮತೆಯ ಬಗ್ಗೆ ಆತಂಕ ಹೊಂದಿರುವವರು, ಅಂತ್ಯೋದಯ ಹಾದಿಯಲ್ಲಿ ನಡೆದು ಸರ್ವೋದಯ ಸಾಧಿಸಬೇಕೆನ್ನುವವರು. ಇವರ ವೈಶಿಷ್ಟ್ಯವೆಂದರೆ ಬಡವರ ಪರವಾಗಿ ಎಷ್ಟೇ ಹೋರಾಟ ನಡೆಸಿದರೂ ಬೇರೆ ವರ್ಗದ ಬಗ್ಗೆ ದ್ವೇಷ ಇಲ್ಲದವರು. ಆದ್ದರಿಂದಲೇ ಇವರನ್ನು ಎಲ್ಲ ವರ್ಗದವರೂ, ಎಲ್ಲ ಸಾಮಾಜಿಕ ಗುಂಪಿನವರೂ ಗೌರವಪೂರ್ವಕವಾಗಿ ಕಾಣುತ್ತಾರೆ. ಇವರ ಸ್ವಭಾವ ಇದ್ದದ್ದು ಇದ್ದಂತೆಯೇ ಹೇಳುವುದು. ನಿಮ್ಮನ್ನು ಒಲಿಸಿಕೊಳ್ಳಲು ನಯವಾದ ಮಾತನಾಡಲಾರದು. ನಿಮಗೆ ಅಪ್ರಿಯವಾದರೂ, ನಿಮ್ಮ ಹಿತಕ್ಕೆ ಸಾಧ್ಯವಾಗುವಂತಹ ಕಾರ್ಯವಿಧಾನ. ಈ ಗುಣ ಬಹು ಜನಕ್ಕೆ ಬರುವುದಿಲ್ಲ.

ಇವರ ವಿಚಾರಗಳು, ಚಿಂತನೆಗಳು ಮೂಲಭೂತವಾಗಿ ಬುದ್ಧಪ್ರಜ್ಞೆ ಮತ್ತು ಗಾಂಧಿ ಸಿದ್ಧಾಂತದ ಬುನಾದಿಯ ಮೇಲೆ ರೂಪುಗೊಂಡಿವೆ. ಬುದ್ಧ ಮತ್ತು ಗಾಂಧೀಜಿಯ ಸಾಮಾಜಿಕ, ಆರ್ಥಿಕ ಚಿಂತನೆಗಳು ಮಾರ್ಗಗಳು ಭಾರತಕ್ಕೆ ಮಾತ್ರವಲ್ಲದೆ ಜಗತ್ತಿಗೆಲ್ಲಾ ಪ್ರಸ್ತುತವಾಗಿದೆಯೆಂದು ಇವರ ನಂಬಿಕೆ. ಈ ಸಿದ್ಧಾಂತದ ಹಿನ್ನೆಲೆಯಲ್ಲಿಯೇ ಇವರು ತಮ್ಮ ಸಾರ್ವಜನಿಕ ಜೀವನವನ್ನು ರೂಪಿಸಿಕೊಂಡಿದ್ದಾರೆ. ಶ್ರೀ ರಂಗನಾಥ್ ಅವರ ಅಮೃತ ಮಹೋತ್ಸವವನ್ನು ಆಚರಿಸಬೇಕೆಂದು ಹಲವಾರು ಮಿತ್ರರು ನಿರ್ಧಾರ ಮಾಡಿದ್ದು ಕೇವಲ ವ್ಯಕ್ತಿಯನ್ನು ಗೌರವಿಸುವುದಕ್ಕೆ ಮಾತ್ರ ಸೀಮಿತವಾಗಿಲ್ಲ. ಇವರು ಅನುಸರಿಸುತ್ತಿರುವ ಮಾರ್ಗ ಇವರ ಆದರ್ಶಕ್ಕೆ ಬೆಲೆ ಕೊಡುವುದೇ ಆಗಿದೆ. ಮುಂದೆ ಸಾರ್ವಜನಿಕ ಜೀವನದಲ್ಲಿ ಕೆಲಸ ಮಾಡಲು ಆಸೆ ಹೊಂದಿರುವ ಸಾವಿರಾರು ಯುವಕರಿಗೆ ಇವರ ಜೀವನವೇ ಆದರ್ಶ ಆಗುವುದು. ಇಂಥ ನಡೆ, ನುಡಿ, ಆಚಾರ ವಿಚಾರ ಎಲ್ಲರಿಗೂ ಮಾರ್ಗದರ್ಶಿಯಾಗಲಿ ಎಂದು ಹಾರೈಸುತ್ತೇನೆ.

# ಅವರದು ಚಿಕಿತ್ಸಕ ಬುದ್ಧಿ

ರಂಜಾನ್ ದರ್ಗಾ

ಅವರಿಗೆ ಸಾಹಿತ್ಯದ ಬಗ್ಗೆ ವಿಶೇಷ ಆಸಕ್ತಿ, ಅವರು ಓದುವ ಆನಂದವನ್ನು ಬಯಸುತ್ತಾರೆ. ಹಚ್ಚ ಹಸುರಾದ ಪ್ರಶಾಂತ ಸ್ಥಳವೊಂದರಲ್ಲಿ ನದಿ ದಂಡೆಯ ಮೇಲೆ ಒಂದು ಪುಟ್ಟ ಮನೆಯಲ್ಲಿ ಪುಸ್ತಕಗಳ ಜೊತೆ ಕಾಲ ಕಳೆಯುವುದು ಅವರ ಮಹದಾಶೆಯಾಗಿದೆ. ಕೆ.ವಿ. ಅಯ್ಯರ್ ಅವರ 'ಶಾಂತಲಾ' ಮತ್ತು ನಿರಂಜ್ಯರ 'ಚಿರಸ್ಮರಣೆ' ಅವರಿಗೆ ಬಹಳ ಹಿಡಿಸಿದ್ದವು. ಯಾವುದೇ ಒಂದು ವಿಷಯದ ಬಗ್ಗೆ ಮಾತನಾಡಲು ಅವರು ಒಪ್ಪಿಕೊಂಡರೆ ಅದನ್ನು ಗಂಭೀರವಾಗಿ ಪರಿಗಣಿಸುತ್ತಾರೆ.

ರಾಹುಲ ಸಾಂಕೃತ್ಯಾಯನರ 'ಓಲ್ಗಾ-ಗಂಗಾ' ಗ್ರಂಥದ ಕನ್ನಡ ಅನುವಾದವನ್ನು ಅವರೇ ಬಿಡುಗಡೆ ಮಾಡಬೇಕೆಂಬುದು ನವಕರ್ನಾಟಕದ ಪಬ್ಲಿಕೇಷನ್ಸ್‌ನ ರಾಜಾರಾಮ್ ಅವರ ಬಯಕೆಯಾಗಿತ್ತು. ಅವರು ಒಪ್ಪಿಕೊಂಡರು. ಆ ಗ್ರಂಥ ಬಿಡುಗಡೆ ಮಾಡಿ ಚೆನ್ನಾಗಿ ಮಾತನಾಡಿದರು. ಗ್ರಂಥ ಕುರಿತು ಕ.ವೆಂ. ರಾಜಗೋಪಾಲ ಅವರು ಮಾತನಾಡಿದ್ದನ್ನು ಮೆಚ್ಚಿಕೊಂಡರು.

ನನ್ನ 'ಸಾಹಿತ್ಯ ಮತ್ತು ಸಮಾಜ' ಪುಸ್ತಕವನ್ನು ಅವರಿಗೆ ಕೊಟ್ಟಿದ್ದೆ. ರಾತ್ರಿ 11.30 ಆಗಿತ್ತು. ಗನ್‌ಮ್ಯಾನ್ ನಾನಿದ್ದ ಔಟ್‌ಹೌಸ್‌ಗೆ ಬಂದು ಸಾಹೇಬರು ಕರೆಯುತ್ತಿದ್ದಾರೆಂದು ಹೇಳಿದ. ನಾನು ಅಳುಕುತ್ತಲೇ ಹೋದೆ. ಅವರು 'ಸಾಹಿತ್ಯ ಮತ್ತು ಸಮಾಜ' ಓದುತ್ತಿದ್ದರು. 'ಮಹಿಳೆಯಿಂದಾಗಿ ಕೃಷಿ ಪ್ರಾರಂಭವಾಯಿತು; ಅದೇ ನಾಗರೀಕತೆಗೆ ಮೂಲವಾಯಿತು.' ಎಂಬ ವಿಚಾರ ಕುರಿತು ಬರೆದದ್ದರ ಬಗ್ಗೆ ಪ್ರಶ್ನಿಸಿದರು. ಅದು ಅವರಿಗೆ ಸಂತಸವನ್ನುಂಟು ಮಾಡಿತ್ತು.

ಹೀಗೆ ಅವರದು ಸದಾ ಚಿಕಿತ್ಸಕ ಬುದ್ಧಿ. ಒಳ್ಳೆಯದು ಎಲ್ಲೇ ಇದ್ದರೂ ಸ್ವೀಕರಿಸುವ ಮನೋಭಾವ ಅವರದು.

# ನನ್ನ ಮದುವೆಯ ಪುರೋಹಿತರು

ಪ್ರೊ. ಕಾಳೇಗೌಡ ನಾಗವಾರ

ಈ ಎಲ್ಲ ಸಂಗತಿಗಳನ್ನು ಹಿರಿಯರಾದ ಕೆ.ಎಚ್. ರಂಗನಾಥ್ ಅವರಿಗೆ ವಿವರಿಸಿದೆ. ಬೆಂಗಳೂರಿನ ಗಾಂಧಿನಗರದ ತಮ್ಮ ಮನೆಯಲ್ಲಿ ಕುಳಿತು ತುಂಬು ತಾಳ್ಮೆಯಿಂದ ಇದನ್ನೆಲ್ಲಾ ಕೇಳಿದರು. ಆಗ ಅವರು ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು, ಶಾಸಕರಾಗಿದ್ದರು. ಪ್ರಬುದ್ಧ ರಾಜಕಾರಣಿಯೂ ನನ್ನ ಹಿತೈಷಿಗಳೂ ಆಗಿದ್ದ ಅವರಿಗೆ ಈ ಬಗ್ಗೆ ವಿವರಿಸಿ ಈ ಸ್ಥಿತಿಯಲ್ಲಿ ದಯಮಾಡಿ ನೀವೇ ನಿಂತು ಲಗ್ನ ಕಾರ್ಯ ನೆರವೇರಿಸಬೇಕು. ಉದ್ವಿಗ್ನ ಜನರು ನನಗೆ ಮತ್ತು ನಿಮಗೆ ಹೊಡೆದರೂ ಕೂಡ ನಾವು ವಿಚಲಿತರಾಗುವುದು ಬೇಡ" ಎಂದು ಕೇಳಿಕೊಂಡೆ. ಮೊದಲೇ ಗಂಭೀರವಾಗಿದ್ದ ರಂಗನಾಥ್ ನನ್ನ ಹೆಗಲ ಮೇಲೆ ಪ್ರೀತಿಯಿಂದ ಕೈಯಿಟ್ಟು ಇನ್ನಷ್ಟು ದೃಢವಾದ ದನಿಯಲ್ಲಿ "ಈ ನಿಮ್ಮ ಉದ್ದೇಶ ಒಳ್ಳೆಯದು. ಶ್ರೇಷ್ಠವಾದುದು. ಹಮ್ಮಿಕ್ಕೊಂಡು ಜನರಲ್ಲಿ ಸಾಮಾಜಿಕ ಎಚ್ಚರವನ್ನು ಉಂಟುಮಾಡಬೇಕಾದುದು, ನಮ್ಮೆಲ್ಲರ ಸಾಮೂಹಿಕ ಹೊಣೆಗಾರಿಕೆಯೇ ಆಗಿದೆ. ಆ ದಿನ ಯಾವುದೇ ಮುಖ್ಯಕಾರ್ಯ ಇದ್ದರೂ ಪಕ್ಕಕ್ಕಿಟ್ಟು ನಿಮ್ಮ ಹಳ್ಳಿಗೆ ನಾನು ಬರುತ್ತೇನೆ. ಏನೇ ಬಂದರೂ ಸಂತೋಷದಿಂದ ಸ್ವೀಕರಿಸೋಣ" ಎಂದು ಹೇಳಿದರು.

ಗ್ರಾಮೀಣ ಪ್ರದೇಶದಲ್ಲಿ ತಮ್ಮ ಜನಸಮುದಾಯಕ್ಕೆ ಅನೇಕ ವಿಚಾರಗಳಲ್ಲಿ ತಿಳುವಳಿಕೆ ನೀಡುವ ಉದ್ದೇಶ ನನಗೆ ಇತ್ತು. ಇದನ್ನು ಒಂದು ಅಪರಿಮಿತ ಅಕ್ಕರೆಯ ಕಾರ್ಯವೆಂದು ನಾವು ಭಾವಿಸಿದ್ದೇವು. "ಮೂಢಸಂಪ್ರದಾಯ ವಿರೋಧಿ ಸಮ್ಮೇಳನ" ಎಂದು ಇದನ್ನು ಕರೆದೆವು. ಕರಪತ್ರಗಳನ್ನು ಹಂಚಿದೆವು. ನಾನು ಹುಟ್ಟಿದ ಹಳ್ಳಿ ಮೊದಲೇ ದೊಡ್ಡ ಊರು. ಆಗತಾನೇ ನಾವು ಕೆಲವರು ಸೇರಿ ಪ್ರೌಢಶಾಲೆ ಆರಂಭಿಸಿದ್ದೆವು. ಅಲ್ಲಿಯ ಅಧ್ಯಾಪಕರೆಲ್ಲ ನನ್ನ ಮಿತ್ರರು. ಅವರೆಲ್ಲರೂ ನನಗೆ ಸಹಕರಿಸುತ್ತಿದ್ದರು. ಸುತ್ತಮುತ್ತಲ ಹಳ್ಳಿಗರು ಕುತೂಹಲಿಗಳಾದರು. ಮದುವೆಯ ದಿನ ವಿಪರೀತ ಜನ ಸೇರಿದರು. ಆ ದಿನ ಮುಂಜಾನೆ ನಾನು ಆ ನಮ್ಮ ಪ್ರೌಢಶಾಲೆಯ ಹೊರಗೋಡೆಯಲ್ಲಿದ್ದ ಸುಭಾಷಿತಗಳನ್ನು ಬರೆಯುವ ಕಪ್ಪು ಹಲಗೆಯ ಮೇಲೆ ಲೋಹಿಯಾ ಅವರ ವಾಕ್ಯಗಳನ್ನು ಬರೆದಿದ್ದೆ:

"ಈ ದೇಶಕ್ಕೆ ಜೀವದಾನ ಮಾಡುವ ಹೊಸದೇನಾದರೂ ಇದ್ದರೆ, ಅದು ಎಷ್ಟೇ ಅಪಾಯಕಾರಿ, ಅಪಖ್ಯಾತಿಕಾರಿಯಾಗಿದ್ದರೂ ಗಾಂಧೀಜಿ ಮಾಡದೆ ಬಿಡುತ್ತಿರಲಿಲ್ಲ. ಕೆಲವರನ್ನು ಕೋಪಾವಿಷ್ಟರನ್ನಾಗಿ ಮಾಡದೆ ಏನನ್ನೂ ಸಾಧಿಸಲಾಗದು. ನಮ್ಮ ಜನಪ್ರಿಯತೆಯನ್ನು ಪಣವನ್ನಾಗಿ ಒಡ್ಡಿ ಇಂಥವರೊಡನೆ ಸೆಣೆಸಬೇಕು"

ಪ್ರೊ: ಕಾಳೇಗೌಡ ನಾಗವಾರ ಅವರು ಕನ್ನಡದ ಬಹುದೊಡ್ಡ ಲೇಖಕರು ಮತ್ತು ಚಿಂತಕರು. ಎಪ್ಪತ್ತರ ದಶಕದಲ್ಲೂ ಅವರು ತಮ್ಮ ಬರವಣಿಗೆ ಮತ್ತು ಬದುಕಿನ ಬಂಡಾಯ ಮನೋಧರ್ಮದಿಂದ ಕನ್ನಡ ಜಗತ್ತನ್ನು ಜಾಗೃತಗೊಳಿಸಿದವರು. ಆ ಕಾಲಕ್ಕೆ ದುರ್ಲಭ ಎನ್ನಿಸಿದ ಸರಳ ಮದುವೆಗೆ ಸ್ವಯಂ ನಾಂದಿ ಹಾಡಿದವರು. ಅವರ ಮದುವೆಯನ್ನು ರಂಗನಾಥ್ ನಡೆಸಿಕೊಟ್ಟ ಪುಟ್ಟ ಚಿತ್ರಣ ಇಲ್ಲಿದೆ.

ಇಡೀ ಕಾರ್ಯಕ್ರಮದ ವರದಿಯು 9.06.1972ರ ಶುಕ್ರವಾರದ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ಪ್ರಕಟವಾಯಿತು. ರಂಗನಾಥ್ ಅವರ ಅಪೇಕ್ಷೆಯ ಮೇರೆಗೆ ಅವರೊಡನೆ ಬಂದಿದ್ದ ವಿಶೇಷ ಪ್ರತಿನಿಧಿ ಎಸ್.ವಿ. ಜಯಶೀಲರಾವ್ ಅವರು ಈ ವರದಿಯನ್ನು ಬರೆದಿದ್ದರು. "ಮೂಢ ಸಂಪ್ರದಾಯ ಹತ್ತಿಕ್ಕಲು ನಾಂದಿ: ಮಾದರಿ ವಿವಾಹ" ಎಂಬ ಶೀರ್ಷಿಕೆಯಲ್ಲಿ ಆ ಬರಹವು ಪ್ರಜಾವಾಣಿಯ ಮುಖಪುಟದಲ್ಲಿ ರಂಗನಾಥ್ ಅವರು ವಧೂವರರಿಗೆ ಪ್ರಮಾಣ ಬೋಧಿಸುವ ಚಿತ್ರಸಮೇತ ಪ್ರಕಟವಾಗಿತ್ತು.

ಮೂಢಸಂಪ್ರದಾಯ ವಿರೋಧಿ ಸಮ್ಮೇಳನವೇ ಶುಭ ಸಂದರ್ಭ, ಶುಭ ಮುಹೂರ್ತ, ಮರಿಯಮ್ಮನ ಗುಡಿಯ ಬಯಲೇ ಕಲ್ಯಾಣಮಂಟಪ. ಸುತ್ತಮುತ್ತಲ ಹಳ್ಳಿಗಳಿಂದ ಬಂದಿದ್ದ ಐದು ಸಾವಿರಕ್ಕಿಂತ ಹೆಚ್ಚು ಮಂದಿ ಪುರುಷರು, ಮಹಿಳೆಯರೇ 'ಹತ್ತು ಸಮಸ್ತರು'

ನೆರೆದಿದ್ದವರ ಕರತಾಡನವೇ ಆರತಿ-ಅಕ್ಷತೆ ಹಾಗೂ ಆಶೀರ್ವಾದ. ಪ್ರದೇಶ ಕಾಂಗ್ರೆಸ್ ಅಧ್ಯಕ್ಷ, ಹರಿಜನ ಬಂಧು ಶ್ರೀ ಕೆ.ಹೆಚ್. ರಂಗನಾಥ್ ಅವರದೇ ಪೌರೋಹಿತ್ಯ. ಅಭಿವೃದ್ಧಿ ಸಚಿವ ಮತ್ತೊಬ್ಬ ಹರಿಜನ ಬಂಧು ಶ್ರೀ ಎಂ. ಮಲ್ಲಿಕಾರ್ಜುನಸ್ವಾಮಿ ಅವರು ಉದ್ಘಾಟಿಸಿದುದೇ ಮಂಗಳವಾದ್ಯ. ದಕ್ಷಿಣೆ ಪಡೆಯದ "ಪುರೋಹಿತ" ಶ್ರೀ ರಂಗನಾಥ್ ಪ್ರಮಾಣ ವಚನ ಹೇಳುತ್ತಾ ಹೋದರು. ಮೊದಲು ವರ ಅನಂತರ ವಧು ಪ್ರಮಾಣ ವಚನ ಸ್ವೀಕರಿಸಿದರು. ವರ "ನೀಡಿದ ಭರವಸೆಯ" ಸಂಕೇತವಾಗಿ ತಾಳಿಯೊಂದನ್ನು ಕಟ್ಟಿದರು. ಚಿ. ಕಾಳೇಗೌಡ ಹಾಗೂ ಸಿ.ಸೌ ಕೆಂಪಮ್ಮ ಅವರುಗಳು ಬಾಳಸಂಗಾತಿಗಳಾದರು.

ಚನ್ನಪಟ್ಟಣಕ್ಕೆ ಐದು ಮೈಲಿ ದೂರದಲ್ಲಿರುವ ನಾಗವಾರದಲ್ಲಿ ಇಂದು ಈ ಅಪರೂಪದ ಘಟನೆ. ನೆರೆದಿದ್ದವರಿಗೊಂದು ಹೊಸ ಅನುಭವ. ಮೂಢ ಸಂಪ್ರದಾಯದ ವಿರೋಧದ

ಅಂಗವಾಗಿ ಈ ಸರಳ, ನಿರಾಡಂಬರ ಸಮಾರಂಭ. ಮೂಢನಂಬಿಕೆಯ ಆಧಾರದ ಮೇಲೆ ನಡೆಯುವ ದುಂದು ವೆಚ್ಚವಿಲ್ಲದಿದ್ದ ಮದುವೆ.

ನಾಗವಾರದಲ್ಲಿ ಸಾಮಾಜಿಕ ಆರ್ಥಿಕ ಕ್ರಾಂತಿದಳವೊಂದುಂಟು. ಪ್ರಗತಿಪರ ವಿಚಾರಿ ಯುವಕರು ಇದರ ಸದಸ್ಯರು. ಇಂದಿನ ಮದುವೆಯ ವರನಾದ ಶ್ರೀ ಸಿದ್ದೇಗೌಡರ ಮಗ ಶ್ರೀ ಕಾಳೇಗೌಡರೇ ದಳದ ಸಂಚಾಲಕರು. ಕೊಡಗಿನ ಗೋಣಿಕೊಪ್ಪದ ಕಾವೇರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು. ಎಂ.ಎ. ಪದವೀಧರರು.

ದಿವಂಗತ ಚನ್ನಯ್ಯ ಅವರ ಪುತ್ರಿ ಚಿ. ಕೆಂಪಮ್ಮ ವಧು, ಎಸ್ಸೆಸ್ಸೆಲ್ಸಿ ವಿದ್ಯಾರ್ಹತೆ.

ಮೂಢ ಸಂಪ್ರದಾಯ ಹಾಗೂ ನಂಬಿಕೆಗಳ ವಿರೋಧ, ಈ ಯುವಕರ ವಿಚಾರ ವ್ಯಾಪ್ತಿಯಲ್ಲೊಂದು ಭಾಗ. ಈ ವಿಚಾರದ ಕ್ರಾಂತಿಯನ್ನು ಜನರಲ್ಲೆಬ್ಬಿಸಬೇಕೆಂಬುದು ಈ ದಳದ ಗುರಿ. ತಾವೇ ನಿದರ್ಶನವಾಗಬೇಕೆಂದು ಶ್ರೀ ಕಾಳೇಗೌಡರಿಗಿದ್ದ ಆಸೆ. ಅದಕ್ಕಾಗಿಯೇ ವರದಕ್ಷಿಣೆಯ ಕಾಟ ಹಾಗೂ ದುಂದುವೆಚ್ಚದ ಆಡಂಬರವಿಲ್ಲದ ಈ ವಿವಾಹದ ಏರ್ಪಾಡು.

ತಮಗಿರುವ ವಿಚಾರದ ಪ್ರಚಾರದ ಅಂಗವಾಗಿ ಸಾಮಾಜಿಕ ಆರ್ಥಿಕ ಕ್ರಾಂತಿಗಳ ಮೂಢಸಂಪ್ರದಾಯ ವಿರೋಧಿ ಸಮ್ಮೇಳನ ಕರೆದಿತ್ತು. "ಕಂದಾಚಾರಗಳಿಲ್ಲದ ಮದುವೆ" ಗಾಗಿ ಹಸ್ತಪ್ರತಿಗಳ ಮೂಲಕ 'ಲಗ್ನಪತ್ರಿಕೆ' ಗಳನ್ನು ಹಂಚಲಾಗಿತ್ತು.

"ನಮ್ಮ ಸಮಾಜದ ಪ್ರಗತಿಗೆ ಕಂಟಕವಾಗಿರುವ ಮೂಢ ನಂಬಿಕೆಗಳು ಹಾಗೂ ಸಂಪ್ರದಾಯಗಳ" ಬಗ್ಗೆ ಭಾಷಣ ಕಾರ್ಯಕ್ರಮದ ಅಂಗವಾಗಿತ್ತು. "ಊಟ ಅಥವಾ ಉಪಹಾರದ ವ್ಯವಸ್ಥೆಗಳು ಇರುವುದಿಲ್ಲ ಎಂದು ಮನ್ನೂಚನೆ ನೀಡಿ ಪ್ರಗತಿಪರ ವಿಚಾರಣಗಳಲ್ಲಿ ನಂಬಿಕೆಯಿರುವ ಎಲ್ಲ ಜನರನ್ನೂ ಈ ಸಮ್ಮೇಳನದಲ್ಲಿ ಪ್ರೀತಿಯಿಂದ ಸ್ವಾಗತಿಸುತ್ತೇವೆ" ಎಂದು ತಿಳಿಸಲಾಗಿತ್ತು.

ಸಂಜೆ ಆರು ಗಂಟೆ ಸಮಯ. ಸುಮಾರು 2,300 ಜನಸಂಖ್ಯೆಯ ನಾಗವಾರದಲ್ಲಿ ಅದರ ಮೂರರಷ್ಟು ಜನ ಸೇರಿದ್ದರು.

ವರನಾದ ಶ್ರೀ ಕಾಳೇಗೌಡ ಅವರು ಸ್ವಾಗತಿಸಿ ಮೂಢಸಂಪ್ರದಾಯ, ಅಂಧಪದ್ಧತಿ ಹಾಗೂ ಕಂದಾಚಾರಗಳನ್ನು ಹೋಗಲಾಡಿಸಬೇಕೆಂಬ ದಳದ ಧ್ಯೇಯ ವಿವರಿಸಿದರು. ಗ್ರಾಮಾಂತರ ಜನರಿಗೆ ತಿಳುವಳಿಕೆ ನೀಡಲು, "ಅಂಧಪದ್ಧತಿಯ ಅನುಷ್ಠಾನವಿಲ್ಲದ ಈ ಮದುವೆಯನ್ನು ಏರ್ಪಡಿಸಿಕೊಂಡಿದ್ದೇವೆ" ಎಂದರು.

ಸಮ್ಮೇಳನವನ್ನು ಉದ್ಘಾಟಿಸಿದ ಅಭಿವೃದ್ಧಿ ಸಚಿವ ಶ್ರೀ ಮಲ್ಲಿಕಾರ್ಜುನ ಸ್ವಾಮಿ ಅವರಿಂದ ಬುದ್ಧನ ಕಾಲ, ಆತನ ಬೋಧನೆಯಿಂದ ಇಲ್ಲಿಯವರೆಗೆ ಸಮಾಜ ಬೆಳೆದು ಬಂದುದರ ವಿಚಾರಪೂರಿತ ಪ್ರಸ್ತಾಪ. "ಮೂಢನಂಬಿಕೆ, ಮೂಢ ಸಂಪ್ರದಾಯ, ಕಂದಾಚಾರ ನಮ್ಮ ಶತ್ರುಗಳು" ಎಂದು ವರ್ಣಿಸಿ ಜಾತಿ ಉಪಜಾತಿಗಳ ಉಪಟಳದಿಂದಾಗಿರುವ ಅನಾಹುತ ವಿವರಣೆ. "ಬ್ರಾಹ್ಮಣರಲ್ಲೇ 800 ಉಪಜಾತಿಗಳಿವೆ. ಹರಿಜನರಲ್ಲಿ 427 ಉಪಜಾತಿಗಳಿವೆ" ಎಂದು ಒಂದು ನಿದರ್ಶನ. "ನಾವೆಲ್ಲ ಒಂದು ಎಂಬ ಭಾವನೆ ಬರಬೇಕು" ಎಂದು ಒತ್ತಿ ಹೇಳಿದರು.

ಭಾರತದಲ್ಲಿ ಪ್ರತಿವರ್ಷ ಮದುವೆಗಳಿಗಾಗಿ ಜನರಿಂದ 1,250 ಕೋಟಿ ಖರ್ಚು. ಇದು ಯೋಜನಾ ಆಯೋಗದ ಅಂದಾಜು.

"ಬ್ರಾಹ್ಮಣರಲ್ಲಿದ್ದ ವರದಕ್ಷಿಣೆ ಹರಿಜನರವರೆಗೆ ಬಂದಿದೆ" ಎಂದು ಸಚಿವ ಮಲ್ಲಿಕಾರ್ಜುನಸ್ವಾಮಿ ಅವರು ವರದಕ್ಷಿಣೆ ಪದ್ಧತಿಯನ್ನು ತೀವ್ರವಾಗಿ ವಿರೋಧಿಸಿದರು.

"ನಿರುದ್ಯೋಗಿ ಎಂಜಿನಿಯರ್ ಆದರೂ ಮದುವೆ ಆಗಲು ಸ್ಕೂಟರ್ ಬೇಕು ಅನ್ನುತ್ತಾನೆ. ಪ್ರೀತಿಯಿಂದ ಬೆಳೆಸಿದ ಹೆಣ್ಣನ್ನು ಕೊಟ್ಟರೆ ಜೊತೆಗೆ ಸ್ಕೂಟರೂ ಬೇಕು ಹಾಗಾದರೆ ಸ್ಕೂಟರನ್ನೇ ಮದುವೆಯಾಗಬಾರದೇಕೆ?" ವರೋಪಚಾರದ ಪದ್ಧತಿಯನ್ನು ಟೀಕಿಸಿದರು. ಈ ಹಣವನ್ನು ಜನೋಪಯುಕ್ತ ಕಾರ್ಯಗಳಿಗೆ ನೀಡಬೇಕೆಂದು ಸಲಹೆ ಮಾಡಿದರು. "ಮೂಢ ನಂಬಿಕೆ ಸಂಪ್ರದಾಯಗಳ ಸಂಕೋಲೆಗಳಿಂದ ಮುಕ್ತವಾದರೆ ಮಾತ್ರ ನಿಜವಾದ ಸ್ವರಾಜ್ಯ ಸ್ಥಾಪನೆಯಾಗುತ್ತದೆ" ಎಂದರು.

ಸರಳ ವಿವಾಹ ಮಹೋತ್ಸವ ಆರಂಭವಾಯಿತು.

ಅಧ್ಯಕ್ಷ ಶ್ರೀ ರಂಗನಾಥ್ ನೀಡಿದ ಪ್ರಮಾಣ ವಚನವನ್ನು ಚಿ. ಕಾಳೇಗೌಡ ಚಿ.ಸೌ. ಕೆಂಪಮ್ಮ ಅವರುಗಳು ಒಬ್ಬರಾದ ಮೇಲೊಬ್ಬರು ಪಠಿಸಿ, "ಈ ಕ್ಷಣದಿಂದ ನನ್ನ ಜೀವನದ ಸಂಗಾತಿಯನ್ನಾಗಿ ತುಂಬು ಮನಸ್ಸಿನಿಂದ ಒಪ್ಪಿಕೊಳ್ಳುತ್ತಿದ್ದೇನೆ. ಜೀವನದುದ್ದಕ್ಕೂ ಮನಸ್ಸು, ಮಾತು ನಡವಳಿಕೆಗಳಲ್ಲಿ ಪ್ರೇಮದಿಂದ ಕಾಣುತ್ತಾ ಅನುಭವಾತ್ಮಕ ವಿಚಾರಗಳು ಮತ್ತು ಚರ್ಚೆಯ ಮೂಲಕ ಈ ಬದುಕಿನಲ್ಲಿ ಯಾವುದು ಸತ್ಯ ಹಾಗೂ ಅರ್ಥಪೂರ್ಣವಾಗಿ ಕಂಡುಬರುತ್ತದೋ ಈ ಕಡೆಗೇ ನಡೆಯಲು ನಾನು ನಿರಂತರವಾಗಿ ಶ್ರಮಿಸುತ್ತೇನೆ ಎಂದು ಸತ್ಯದ ಹೆಸರಿನಲ್ಲಿ ಪ್ರಮಾಣ ಮಾಡಿ ಹೇಳುತ್ತೇನೆ" ಎಂದು ಪ್ರಮಾಣ ಮಾಡಿದರು. ಶ್ರೀ ಕಾಳೇಗೌಡ ತಾಳಿ ಕಟ್ಟಿದರು. ವಧು, ವರರು ಪರಸ್ಪರ ಹಾರ ಹಾಕಿದರು.

ನೆರೆದಿದ್ದ ಜನ, ಅದರಲ್ಲೂ ಮಹಿಳೆಯರು ಅಷ್ಟು ಹೊತ್ತಿಗೆ ಎದ್ದು ನೂಕು ನುಗ್ಗುತ್ತ ಮುಂದಕ್ಕೆ ಬಂದಿದ್ದರು. ಅಷ್ಟು ಉತ್ಸಾಹ ಕುತೂಹಲ ಉಂಟಾಗಿತ್ತು.

"ಇಷ್ಟೇ ಮದುವೆ ಶಾಸ್ತ್ರ, ಮುಗಿದು ಹೋಯಿತು" - ಶ್ರೀ ರಂಗನಾಥ್ ಸಾರಿದರು. ದುಂದುವೆಚ್ಚಕ್ಕೆ ಬದಲಾಗಿ ಜನೋಪಯೋಗಿ ಕಾರ್ಯಕ್ಕೆ ಹಣ ಕೊಡಬೇಕೆಂಬ ಧ್ಯೇಯವನ್ನನುಸರಿಸಿ ಶ್ರೀ ಕಾಳೇಗೌಡರು ನಾಗವಾರದಲ್ಲಿ ಆರೋಗ್ಯ ಕೇಂದ್ರ ನಿರ್ಮಾಣಕ್ಕಾಗಿ ಐದು ನೂರು ರೂಪಾಯಿ ಕಾಣಿಕೆ ನೀಡಿದರು.

ಅನೂಚಾನವಾಗಿ ಬಂದಿರುವ ಸಂಪ್ರದಾಯಗಳನ್ನು ಹಳ್ಳಿಗಳಲ್ಲಿ ಸ್ಥಾಪಿಸಲು ಮಾಡಿರುವ ಪ್ರಯತ್ನವನ್ನು ಮೆಚ್ಚಿದ ಶ್ರೀ ಕೆ.ಎಚ್. ರಂಗನಾಥ್ ಅವರ "ಇದು ಕಷ್ಟದ ಕೆಲಸ" ಎಂದರು. ಮೂಢನಂಬಿಕೆಗಳಿಗೆ ಮನೆಮಾರಿ ಮದುವೆಯ ಆಡಂಬರದ ಖರ್ಚಿಗೆ ಭಯವೇ ಕಾರಣವೆಂದು ಹೇಳಿ "ಈ ರೀತಿ ಮಾಡದಿದ್ದರೆ ಏನು ಆಗುತ್ತೆ ಅಂತ ಯಾರೂ ಧೈರ್ಯದಿಂದ ಯೋಚನೆ ಮಾಡದಿರುವುದೇ ಅದು ಬೆಳೆದು ಬರಲು ಕಾರಣ" ಎಂದರು. "ಮೂಢ ಸಂಪ್ರದಾಯಗಳನ್ನು ಕಿತ್ತೊಗೆದರೆ ಏನೂ ಆಗೋದಿಲ್ಲ" ಎಂದು ಭರವಸೆ ನೀಡಿ ಮದುವೆ ಲಗ್ನವಿಲ್ಲದಿದ್ದ ದಿನ ತಾವು ತಮ್ಮ ತಂಗಿಯ ಮದುವೆ ಮಾಡಿದುದಾಗಿಯೂ ಅವರು ಸುಖವಾಗಿದ್ದಾರೆಂದೂ ತಿಳಿಸಿದರು.

ವರದಕ್ಷಿಣೆಯ ಅನಿಷ್ಟವನ್ನು ಹೋಗಲಾಡಿಸಬೇಕೆಂದು ಒತ್ತಿ ಹೇಳಿ ನೂತನ ದಂಪತಿಗಳಿಗೆ ಆಯುರಾರೋಗ್ಯ ಸಂಪತ್ತನ್ನು ಕರುಣಿಸಲಿ ಎಂದು ಹಾರೈಸಿದರು.

*****

ಕನ್ನಡದ ಪ್ರಸಿದ್ಧ ಕವಿ, ಕಥೆಗಾರ ಡಾ|| ಕಾಳೇಗೌಡ ನಾಗವಾರ ಎಪ್ಪತ್ತರ ದಶಕದಲ್ಲಿ ತಮ್ಮ ಸರಳ ಮದುವೆಯ ಮೂಲಕ ಸಮಾಜದಲ್ಲಿ ಹೊಸ ಸಂಚಲನ ಮೂಡಿಸಿದ್ದರು. ಅವರ ಮದುವೆ ಮಾಡಿಸಿದವರು ಶ್ರೀ ರಂಗನಾಥ್. ಆ ಘಟನೆಯನ್ನು ಕುರಿತು ಅವರು ಬುದ್ಧಪ್ರಜ್ಞೆಯಲ್ಲಿ ಬರೆದ ಲೇಖನದ ಆಯ್ದ ಭಾಗವಿದು.

# ಪರಿಶುದ್ಧ ಚಾರಿತ್ರ್ಯದ ಧ್ಯೇಯನಿಷ್ಠ ನಾಯಕ

ಟಿ.ಕೆ. ಮಹಮೂದ್

ಶ್ರೀ ಕೆ.ಎಚ್. ರಂಗನಾಥ್ ಅವರೊಡನೆ 1954 ರಲ್ಲಿ ನನ್ನ ಪರಿಚಯ ಬೆಳೆಯಿತು. ಆಗ ನಾವು ಪ್ರಜಾ ಸಮಾಜವಾದಿ ಪಕ್ಷದಲ್ಲಿದ್ದೆವು. ಶ್ರೀ ರಂಗನಾಥರು ಸಹ ಆ ಪಕ್ಷದ ಒಬ್ಬ ಪ್ರಮುಖ ನಾಯಕರಾಗಿ ಆಗಲೇ ಬೆಳೆದಿದ್ದರು. ಸಮಾಜವಾದಿಗಳೆಂದರೆ ಎಲ್ಲರೂ ವಿಚಾರಶೀಲರಲ್ಲ, ಪ್ರಗತಿಪರ ದೃಷ್ಟಿಯವರಲ್ಲ ಎಂಬ ಭಾವನೆ ನನ್ನಲ್ಲಿ ಆಗಲೇ ಬೆಳೆದುಬಂದಿತ್ತು. ಶ್ರೀ ರಂಗನಾಥ್ ಅವರ ಸಂಪರ್ಕದ ನಂತರ ಅವರೊಬ್ಬರು ನಿಖರತೆಯುಳ್ಳ ಚಿಂತನಶೀಲರು ಎಂಬುದು ಮಾತ್ರವಲ್ಲ ಅವರೊಬ್ಬರು ಶ್ರದ್ಧಾವಂತ ಪರಿಪಕ್ವ ಬುದ್ಧಿಜೀವಿಗಳೆಂಬ ಭಾವನೆ ಬೆಳೆಯುವಂತಾಯಿತು.

ಸಮಯ ಸಂದರ್ಭಗಳು ಬಂದಾಗ ಸಮಾಜವಾದ ಮತ್ತು ವಿಚಾರವಾದಗಳ ಬಗ್ಗೆ ನಮ್ಮಲ್ಲಿ ವಿಚಾರ ವಿನಿಮಯ, ಚರ್ಚೆಗಳು ನಡೆಯುತ್ತಿದ್ದವು. ಶ್ರೀ ರಂಗನಾಥ್ ಅವರ ಆಳ ಅಧ್ಯಯನ ವಿಚಾರಮಂಥನದ ವಿಧಾನಗಳು ನನಗೆ ಬಹಳ ಪ್ರಿಯವೆನಿಸುತ್ತಿದ್ದವು. ಅವರು ಆದರ್ಶ ಅನುಕರಣೀಯರು. ಮಾತಿನಲ್ಲಿ ಮಾತ್ರವಲ್ಲ, ಕೃತಿಯಲ್ಲೂ ಅವರು ನೂರಕ್ಕೆ ನೂರುಪಟ್ಟು ಪರಿಶುದ್ಧರಾಗಿದ್ದರು.

ಸಮಾನ ಮನೋಭಾವ ಮತ್ತು ಆಲೋಚನೆಗಳು ಇರುವ ವ್ಯಕ್ತಿಗಳ ಸಂಬಂಧಗಳು ಅತ್ಯಂತ ದೃಢವಾಗಿ ಬೆಳೆಯುತ್ತವೆ. ರಂಗನಾಥ್ ಅವರು ಆಗಲೇ ನನಗೆ ಒಬ್ಬ ಹಿರಿಯ ಸಂಗಾತಿಗಳಾಗಿ ಮಾರ್ಗದರ್ಶಕರಾಗಿ ಮಾನ್ಯರಾದರು.

1957 ಮತ್ತು 1962ರ ಸಾರ್ವತ್ರಿಕ ಚುನಾವಣೆಗಳ ನಂತರ ದೇಶದಲ್ಲಿ ಅನೇಕ ಬೆಳವಣಿಗೆಗಳು, ಸರಣಿ ಹೋರಾಟಗಳು ನಡೆದವು. ಪ್ರಜಾ ಸಮಾಜವಾದಿ ಪಕ್ಷ ಆಗ ವಿಧಾನಸಭೆಯಲ್ಲಿ ಮಾನ್ಯತೆ ಪಡೆದಿದ್ದ ವಿರೋಧಪಕ್ಷವಾಗಿತ್ತಲ್ಲದೆ ಆ ಪಕ್ಷಕ್ಕೆ ರಾಜ್ಯಾದ್ಯಂತ ಜನ ಬೆಂಬಲ ವ್ಯಕ್ತವಾಗಿತ್ತು.

ಕರ್ನಾಟಕದಲ್ಲಿ ರೈತರ ಗೇಣಿ ಶೋಷಣೆ ತಪ್ಪಿ ಉಳುವವನೆ ಹೊಲದೊಡೆಯ ಆಗಬೇಕೆಂಬುದು ಆಗಿನ ಎಡಪಕ್ಷಗಳ ಘೋಷಣೆಯಾಗಿತ್ತು. ಅದಕ್ಕೆ ವಿಧಾನಮಂಡಲಗಳಲ್ಲಿ ಧ್ವನಿ ಒದಗಿಸಿದ್ದು ಪ್ರಜಾಸಮಾಜವಾದಿ ಪಕ್ಷ. ಶ್ರೀ ರಂಗನಾಥ್ ಅವರು ವಿಧಾನಮಂಡಲದ

ಒಳಗೆ ಮತ್ತು ಹೊರಗೆ ನಡೆದ ಗೇಣಿ ರೈತರ ಹಾಗೂ ಕೃಷಿ ಕೂಲಿಕಾರರ ಈ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಹಾಗೂ ಪಕ್ಷದ ಸಭೆಗಳಲ್ಲಿ ಅಂಥ ಹೋರಾಟಗಳ ಅವಶ್ಯಕತೆಗಳನ್ನು ದೃಢವಾಗಿ ಪ್ರತಿಪಾದಿಸುತ್ತಿದ್ದರು.

1969 ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಅದರಲ್ಲಿ ಇಂದಿರಾಗಾಂಧಿಯವರ ಬಣದಲ್ಲಿ ಸೇರ್ಪಡೆಯಾಗಬೇಕೆಂಬ ಬಲವಾದ ಒತ್ತಡ ಪ್ರಜಾಸಮಾಜವಾದಿ ಪಕ್ಷದ ಮೇಲೆ ಬಂತು. ಧೃವೀಕರಣಕ್ಕೆ ಹೆಚ್ಚು ಒತ್ತು ಕೊಡಲಾಯಿತು. ಆ ಸಂದರ್ಭದಲ್ಲಿ ಇಂಥ ವಿಚಾರ ಪ್ರಣಾಳಿಕೆಗೆ ಒತ್ತು ಕೊಟ್ಟು ಪಿ.ಎಸ್.ಪಿ. ಯನ್ನು ಕಾಂಗ್ರೆಸ್ ಪಕ್ಷದ ಸೇರ್ಪಡೆಯ ನಂತರ ಹಲವಾರು ಜವಾಬ್ದಾರಿಗಳನ್ನು ಅವರು ನಿರ್ವಹಿಸಬೇಕಾಯಿತು. ಶ್ರೀ ದೇವರಾಜ್ ಅರಸರು ತಮ್ಮ ಸಂಪುಟದಲ್ಲಿ ಅವರನ್ನು ಸಾರಿಗೆ ಸಚಿವರನ್ನಾಗಿ ಸೇರ್ಪಡೆ ಮಾಡಿಕೊಂಡರು. ಆಗಲೇ ಶ್ರೀ ಕೆ.ಎಚ್. ರಂಗನಾಥ್ ಅವರು ರಾಜ್ಯದ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದರು. ಕಾಂಗ್ರೆಸ್ಸಿನ ಅಧ್ಯಕ್ಷರಾದ ನಂತರ ಹಲವಾರು ಜನಪರ ಕಾರ್ಯಕ್ರಮಗಳನ್ನು ತರಲು ಕ್ರಮಕೈಗೊಂಡರು.

ರಾಜ್ಯದಲ್ಲಿ ಜಾರಿಗೆ ಬಂದ ಭೂಸುಧಾರಣಾ ಶಾಸನದ "ಮೆದುಳು" **ಶ್ರೀ ಕೆ.ಎಚ್. ರಂಗನಾಥರು**, ರೈತ ಕೂಲಿಕಾರರ, ಗೇಣಿದಾರರ ಸಮಸ್ಯೆಗಳ ಸ್ಪಷ್ಟ ತಿಳುವಳಿಕೆ ಇರುವ ಅವರು ಬರೇ ಘೋಷಣೆಗಳಲ್ಲೇ ಕಾಲ ಕಳೆಯದೆ ಉಳುವವನನ್ನು ಹೊಲದೊಡೆಯನನ್ನಾಗಿ ಮಾಡುವ ಕರ್ನಾಟಕ ಭೂಸುಧಾರಣ ಶಾಸನದ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದರು. ಆ ಶಾಸನ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ನೋಡಿಕೊಂಡ ದೂರದೃಷ್ಟಿ ಸಹ ಅವರದ್ದಾಗಿದೆ.

ಉಳುವವರಿಗೇ ಹೊಲ ದೊರಕಿಸಿಕೊಡುವ ಭೂಸುಧಾರಣಾ ಶಾಸನ ಮಾತ್ರವಲ್ಲದೆ ಕೃಷಿ ಕಾರ್ಮಿಕರು, ತೋಟದ ಕಾರ್ಮಿಕರಾದಿಯಾಗಿ ಅಸಂಘಟಿತ ಕೂಲಿಕಾರರ ಹಿತರಕ್ಷಣೆ ಮಾಡಲು ಅವರು ಸಂಪುಟದಲ್ಲೂ ಅದರ ಉಪಸಮಿತಿಗಳಲ್ಲೂ ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಾರೆ. ಬಲಿಷ್ಠರಾದ ಭೂಮಾಲೀಕರು ನ್ಯಾಯಾಲಯಗಳಿಂದ ತಮ್ಮ ಪರವಾದ ತೀರ್ಮಾನ ಪಡೆಯಲು ಶಕ್ತರು ಎಂಬ ಅರಿವಿದ್ದ ಅವರು ಗೇಣಿವಿವಾದಗಳನ್ನು ನ್ಯಾಯಾಲಯಗಳ ವ್ಯಾಪ್ತಿಯಿಂದ ಹೊರಗಿಡುವ ಅವಶ್ಯಕತೆಯನ್ನು ಪ್ರತಿಪಾದಿಸುತ್ತಿದ್ದರಲ್ಲದೆ ತಾವು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರೂ ಸಾರಿಗೆ ಸಚಿವರೂ ಆಗಿದ್ದ ಸಂದರ್ಭಗಳಲ್ಲಿ ಸಂಪುಟದ ಸಭೆಗಳಲ್ಲೂ ಪ್ರತಿಪಾದಿಸಿ ಗೇಣಿ ವಿವಾದಗಳನ್ನು ನ್ಯಾಯಾಲಯಗಳ ವ್ಯಾಪ್ತಿಯಿಂದ ಹೊರಗೆ ಇಡುವ ತಿದ್ದುಪಡಿಯೊಂದನ್ನು ವಿಧಾನಸಭೆ ಅಂಗೀಕರಿಸುವಂತೆ ಮಾಡುವಲ್ಲಿ ಸಫಲತೆ ಕಂಡರು.

1974ರ ಭೂಸುಧಾರಣಾ ಶಾಸನವಲ್ಲದೆ 1975 ರಲ್ಲಿ 'ಋಣ ಪರಿಹಾರ ಕಾಯಿದೆ'ಯು ಸಹ ಬಡವರ ಸಂರಕ್ಷಣೆಗಾಗಿ ಜಾರಿಗೆ ಬಂದ ಇನ್ನೊಂದು ಕಾನೂನು. 1975 ರಲ್ಲಿ ಜಾರಿಗೆ ಬಂದ ಜೀತಪದ್ಧತಿ ನಿರ್ಮೂಲನ ಕಾನೂನು ಸಹ ಇಂಥ ಒಂದು ಕ್ರಾಂತಿಕಾರಕ ಶಾಸನವಾಗಿದೆ. ಈ ಎಲ್ಲ ಶಾಸನ ರಚನೆಗಳು ಅದರ ಪ್ರತಿಕಾರ್ಯಗಳ ಹಿಂದೆ ಶ್ರೀ ರಂಗನಾಥ್ ಅವರ ದೃಢಪ್ರಯತ್ನ ಮತ್ತು ಮಾರ್ಗದರ್ಶನಗಳನ್ನು ಗುರುತಿಸಿಕೊಳ್ಳಬಹುದು.

ಮೂರು ಅವಧಿಗೆ ಪಕ್ಷದ ಅಧ್ಯಕ್ಷರಾಗಿ, ರಾಜ್ಯ ವಿಧಾನಸಭೆಯ ಅಧ್ಯಕ್ಷರಾಗಿ 1952 ರಿಂದಲೂ ವಿವಿಧ ಚುನಾವಣಾ ಕ್ಷೇತ್ರಗಳಿಂದ ಶಾಸಕರಾಗಿ ಅವರು ದಾಖಲೆ ಸ್ಥಾಪಿಸಿದ್ದಾರೆ. ಅವೆಲ್ಲಕ್ಕೂ ಮಿಗಿಲಾಗಿ ಸಾಮಾನ್ಯ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾದ ಮೊಟ್ಟಮೊದಲ ಭಾರತೀಯ ಎಂಬ ಹೆಗ್ಗಳಿಕೆಗೆ ಅವರು ಪಾತ್ರರಾಗಿದ್ದಾರೆ.

ರಂಗನಾಥ್ ಅಧಿಕಾರವನ್ನಾಗಲಿ, ಪ್ರಚಾರವನ್ನಾಗಲಿ ಬಯಸುವವರಲ್ಲ. ಆದರೆ ಅಧಿಕಾರ ಸ್ಥಾನ, ಪ್ರಸಿದ್ಧಿಯು ವಿದ್ಯಮಾನ ಅವರನ್ನು ಅರಸಿಕೊಂಡು ಹೋಗುತ್ತದೆ. ಈ ಮಾತು ಸಾರ್ವಜನಿಕ ಕ್ಷೇತ್ರದ ಪ್ರವೇಶದ ಅವರ ಆರಂಭದಿಂದ ಈವರೆಗೂ ಅನ್ವಯಿಸುತ್ತದೆ.

ಶ್ರೀ ರಂಗನಾಥ್‌ರಂತೆ ವಿವಿಧ ಅಧಿಕಾರ ಮತ್ತು ಸ್ಥಾನಗಳನ್ನು ನಿಭಾಯಿಸಿರುವ ನಾಯಕರು ಕಾಂಗ್ರೆಸ್ಸಿನಲ್ಲಿ ಹೆಚ್ಚು ಜನ ಕಂಡು ಬರುವುದಿಲ್ಲ. ಸಹಕಾರ ಸಚಿವರಾಗಿದ್ದಾಗ ಸಹಕಾರಿರಂಗದ ಮೇಲೆ ಪ್ರಭುತ್ವ ಸ್ಥಾಪಿಸಿದ ಪಟ್ಟಭದ್ರರ ಕುರ್ಚಿಗಳನ್ನು ಅವರು ಅಲುಗಾಡಿಸಿದರು. ಸಾಮಾನ್ಯರಿಗೂ ಸಹಕಾರಿ ರಂಗದಲ್ಲಿ ಭಾಗವಹಿಸಲು ಅನುಕೂಲವಾಗುವಂತೆ ಶಾಸನವನ್ನು ಮಾರ್ಪಡಿಸಿದರು. ಅಲ್ಲಿ ಪ್ರವೇಶ ದೊರಕಿರದ ಜನ ಸಾಮಾನ್ಯರನ್ನು ಸಹಕಾರಿ ರಂಗದಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವಂತೆ ಮಾಡಲು ನಾಮಕರಣ ಪದ್ಧತಿಯನ್ನು ಸಹ ಜಾರಿಗೆ ತಂದು ಜನಸಾಮಾನ್ಯರ ಹಿತರಕ್ಷಣೆ ಮಾಡಿದರು.

ಶ್ರೀ ಎನ್. ಹುಚ್ಚಮಾಸ್ತಿಗೌಡರು ಕಂದಾಯ ಸಚಿವರಾಗಿದ್ದಾಗ ಜಾರಿಗೆ ಬಂದ ಕರ್ನಾಟಕ ಭೂಸುಧಾರಣಾ ಶಾಸನಕ್ಕೆ ಸಂಪೂರ್ಣ ಸಹಕಾರ ನೀಡಿ ಅದರ ಪ್ರತಿ ಸಾಲುಗಳನ್ನು ವಿಮರ್ಶಿಸಿ ಸಲಹೆ ನೀಡಿದವರು ಶ್ರೀ ಕೆ.ಎಚ್. ರಂಗನಾಥ್, ಹುಚ್ಚುಮಾಸ್ತಿಗೌಡರೆ ಹಲವು ಸಭೆ-ಸಮಾರಂಭಗಳಲ್ಲಿ ಈ ಮಾತನ್ನು ಹೇಳಿದ್ದುಂಟು. ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ ಹಲವಾರು ಹೋರಾಟಗಳು ಗಟ್ಟಿ ತಳಹದಿ ನಿರ್ಮಿಸಿಕೊಟ್ಟಿದೆ. ಶ್ರೀ ರಂಗನಾಥ್ ಅಧ್ಯಯನಶೀಲರು, ಬಾಬಾಸಾಹೇಬ್ ಅಂಬೇಡ್ಕರ್‌ರನ್ನು ಅವರು ಆಳವಾಗಿ ಅಭ್ಯಸಿಸಿದ್ದಾರೆ. ಭಾರತೀಯ ಸಮಾಜ ರಚನೆಯನ್ನು ascending order of reverence and descending order of contempt..... ಎಂದಿರುವುದನ್ನು ಒಮ್ಮೆ ಮಾತನಾಡುತ್ತಿದ್ದಾಗ

ಅವರು ಹೇಳಿದರು. ಬಾಬಾ ಸಾಹೇಬ್ ಗಟ್ಟಿ ಸಮಾಜ ವಿಜ್ಞಾನಿಯಾಗಿದ್ದರು. ಅವರು ಕೇವಲ ದಲಿತ ನಾಯಕರಾಗಿರಲಿಲ್ಲ ಅಥವಾ ಸಂವಿಧಾನ ರಚನೆಗಷ್ಟೇ ಸೀಮಿತವಾಗಿರಲಿಲ್ಲ.

ರಂಗನಾಥ್ ರಾಜ್ಯದ ಶಿಕ್ಷಣ ಸಚಿವರಾಗಿದ್ದಾಗ ಶಿಕ್ಷಣ ಕ್ಷೇತ್ರದಲ್ಲಿ ದಟ್ಟವಾಗಿ ಕವಿದಿದ್ದ ಭ್ರಷ್ಟತೆ, ಜಾತಿ, ಮೇಲಾಳುತನಗಳಿಗೆ ಅವರು ಚುರುಕು ಮುಟ್ಟಿಸಿದವರು. ಬೆಳಗ್ಗಿನಿಂದ ರಾತ್ರಿ 10 ಗಂಟೆಯವರೆಗೂ ಅವಿಶ್ರಾಂತವಾಗಿ ಕೆಲಸ ಮಾಡುತ್ತ ದಿನನಿತ್ಯ ನೂರು ನೂರು ಗಟ್ಟಲೆಯಲ್ಲಿ ಸುತ್ತುವರಿಯುವ ಸಂದರ್ಶಕರ ಸಮಸ್ಯೆಗಳನ್ನು ಕೇಳಿಕೊಂಡು ಅವುಗಳನ್ನು ಬಗೆಹರಿಸಲು ಪ್ರಯತ್ನಿಸಿದವರು. ಜನರನ್ನು ಕಟ್ಟಿಕೊಂಡವರು ಕಾಡಿಗೆ ಹೋದರೂ ಜನ ಅವರ ಬೆನ್ನು ಬಿಡುವುದಿಲ್ಲ ಎಂಬ ಮಾತಿನಂತೆ ರಂಗನಾಥರಿಗೆ ಜನ ಬೆನ್ನುಬಿದ್ದಿದ್ದಾರೆ. ಜನರ ಈ ಪ್ರೀತಿ ಅಭಿಮಾನಗಳನ್ನು ಅರ್ಥ ಮಾಡಿಕೊಂಡಿರುವ ಶ್ರೀ ರಂಗನಾಥ್ ಯಾರನ್ನೂ ನಿರಾಸೆಗೊಳಿಸುವುದಿಲ್ಲ. ಯಾರನ್ನೂ ಬರಿದಾಗಿ ಹಿಂದಿರುಗಿಸದೆ ಅವರ ಸಮಸ್ಯೆಗಳಿಗೆ ನೆರವಾಗುತ್ತಾರೆ. ಒಮ್ಮೊಮ್ಮೆ ಅವರು ರೇಗುವುದೂ ಉಂಟು. ಅವರು ರೇಗಿದಾಗ ಅವರ ಅಭಿಮಾನಿಗಳಿಗೆ ಇನ್ನಷ್ಟು ಖುಷಿಯಾಗುತ್ತದೆ. ಹಾರ್ದಿಕವಾಗಿ ಹಾಗೆ ಗದರಿಕೊಳ್ಳುವುದರಲ್ಲೂ ಅವರ ಅಭಿಮಾನಿಗಳು ಅಂತರಾಳದ ಅವರ ಆತ್ಮೀಯತೆಯನ್ನು ಗುರುತಿಸಿಕೊಂಡು ಒಳಗೊಳಗೇ ಆನಂದಿಸುತ್ತಾರೆ. ಕರ್ತವ್ಯವನ್ನೆ ಉಪಾಸನೆಯಾಗಿ ಸ್ವೀಕರಿಸಿರುವ ರಂಗನಾಥರು ಕೆಲಸದಲ್ಲಿ ತನ್ಮಯತೆ, ತಲ್ಲೀನತೆ ಸಾಧಿಸಿಕೊಂಡಿದ್ದಾರೆ.

ಶ್ರೀ ರಂಗನಾಥ್ ಹೃದಯಜೀವಿ-ಸ್ನೇಹಜೀವಿ. ಕಳೆದ ಸಾರ್ವಜನಿಕ ಜೀವನದಲ್ಲಿ ಕಳೆದ 40 ವರ್ಷಗಳಿಂದಲೂ ಕೂಡಿಬಂದಿರುವ ಗೆಳೆತನವನ್ನು ಅವರು ಅಬಾಧಿತವಾಗಿ ಬೆಳೆಸಿ ಮುನ್ನಡೆಸಿಕೊಂಡು ಬಂದಿದ್ದಾರೆ. ಮಾತಿನಲ್ಲಾಗಲಿ, ಕೃತಿಯಲ್ಲಾಗಲಿ ಡಾಂಭಿಕತೆ ಕಪಟವಿಲ್ಲದ ಅಪ್ಪಟ ಚಿನ್ನ ಅವರು. ರಂಗನಾಥರಂತೆ ಸೇವಾ ಅವಕಾಶಗಳು ದೊರೆತು ಸಾರ್ವಜನಿಕ ಕ್ಷೇತ್ರದ ಉನ್ನತ ಸ್ಥಾನಗಳಲ್ಲಿದ್ದವರು ತೀರಾ ವಿರಳ. ಅವರಿಗೆ ದೊರೆತಷ್ಟು ಅವಕಾಶಗಳು ಸಹ ಇತರರಿಗೆ ಲಭ್ಯವಾಗಿಲ್ಲ. ಅಧಿಕಾರ ಸ್ಥಾನ-ಗೌರವಗಳು ಅವರನ್ನು ಹುಡುಕಿಕೊಂಡು ಬರಬೇಕಲ್ಲದೆ ರಂಗನಾಥ್ ಅದರ ಹಿಂದೆ ಹೋಗುವವರಲ್ಲ. ಅಧಿಕಾರವೆಂಬುದು ರಂಗನಾಥರ ಮಟ್ಟಿಗೆ ಒಂದು ಶಿಕ್ಷೆ. ಆದರೂ ಪ್ರಿಯವಾದ, ಜನಕ್ಕೆ ಸಹಾಯ ಮಾಡಬಲ್ಲ, ದೇಶಕ್ಕೆ ಒಳಿತು ಮಾಡಬಲ್ಲ ಶಿಕ್ಷೆ. ಮಂತ್ರಿಸ್ಥಾನದಂಥ ಅಧಿಕಾರಕ್ಕೆ ಒಮ್ಮೆ ಬಂದರೆ ಕೊಳ್ಳೆ ಹೊಡೆದು ಸ್ವಂತ ಬೆಳೆಯುವುದಕ್ಕೆ ಆ ಸ್ಥಾನವನ್ನು ದುರುಪಯೋಗಪಡಿಸಿಕೊಂಡಂಥ ಅನೇಕರ ಉದಾಹರಣೆ ಕಣ್ಣೆದುರಿಗಿರುವಾಗ ಅದಕ್ಕೆ ಅಪವಾದವಾಗಿ ರಂಗನಾಥರಂತಹ ಶುಭ್ರಚಾರಿತ್ರ್ಯದ ಶುದ್ಧಹಸ್ತದ, ಮಾನವೀಯ ಅಂತಃಕರಣದವರು ಒಬ್ಬಿಬ್ಬರಾದರೂ ನಮ್ಮ ಮುಂದಿರುವುದು ದೇಶದ ಸುದೈವವಾಗಿದೆ.

ಸ್ವಾತಂತ್ರ್ಯ ಹೋರಾಟದ ದಾಖಲೆ, ಸಮಾಜವಾದಿ ಚಿಂತನೆಯ ಹಿನ್ನೆಲೆ, ವಿಚಾರ ವಂತಿಕೆಯ ನೆಲೆ-ಬೆಲೆಗಳುಳ್ಳ ರಂಗನಾಥರು ಹಲವು ಉನ್ನತ ಹುದ್ದೆಗಳನ್ನಲಂಕರಿಸಿಯೂ ವ್ಯಕ್ತಿತ್ವ ಕಾಯ್ದುಕೊಂಡು ಬಂದಿರುವ ಅಪೂರ್ವ ಪರಂಪರೆಯುಳ್ಳ ರಾಷ್ಟ್ರಮಟ್ಟದ ವಿರಳ ರಾಜಕಾರಣಿಗಳಲ್ಲೊಬ್ಬರಾಗಿರುವರು. ಅವರ ಜನಸಂಪರ್ಕದ ಲಾಭ ಅವರ ಅನುಭವ-ದಕ್ಷತೆಗಳ ಪ್ರಯೋಜನ ಈ ರಾಜ್ಯಕ್ಕೆ ಕಾಂಗ್ರೆಸ್ ಸರ್ಕಾರಕ್ಕೆ ಒಂದು ಶಕ್ತಿ ಎಂದೇ ಹೇಳಿದರೆ ತಪ್ಪಾಗದು.

ರಾಜ್ಯದ ಉದ್ದಗಲಕ್ಕೂ ಜನಸಂಪರ್ಕ ಮತ್ತು ಬೆಂಬಲಗಳುಳ್ಳ ರಂಗನಾಥ್ ಒಂದು ಪ್ರಚಂಡ ರಾಜಕೀಯ ಶಕ್ತಿಯಾಗಿಯೂ ತಮ್ಮ ಎಂದಿನ ವಿನೀತ ಭಾವ, ಸರಳ ಸಜ್ಜನಿಕೆಗಳ ಸಾಕಾರಮೂರ್ತಿಯಾಗಿಯೇ ತಮ್ಮ ಜೀವನದುದ್ದಕ್ಕೂ ಸಾಗಿ ಬಂದಿರುವವರು. ಇದೇ ಅವರ ಹೆಗ್ಗಳಿಕೆ, ದೊಡ್ಡಸ್ತಿಕೆಯ ಹೆಗ್ಗುರುತು.

ಶ್ರೀ ರಂಗನಾಥ್ ಅವರು ತಮ್ಮ ಸಮಕಾಲೀನ ರಾಜಕಾರಣಗಳಲ್ಲಿ ಅಪರೂಪದ ಹಾಗೂ ಉಪಮಿಸಲಾಗದಂಥ ಉಪಮಾತೀತರಾಗಿದ್ದಾರೆ. ಸಂಕುಚಿತ ಭಾವನೆಗಳು ಅವರ ಸಮೀಪಕ್ಕೇ ಸುಳಿದಿಲ್ಲ. ಜಾತಿ-ವರ್ಗ, ವರ್ಷ ಇತ್ಯಾದಿ ಭೇದ-ಭಾವಗಳಿಲ್ಲದ ಅವರೊಬ್ಬ ಪರಿಪೂರ್ಣ ಮಾನವ. ಅವರು ಮನುಷ್ಯನನ್ನು ಮನುಷ್ಯನಾಗಿ ನೋಡಿದ್ದಾರೆ. ಅದೇ ಮಾನವೀಯ ಭಾವನೆಗಳಿಂದ ಸ್ಪಂದಿಸಿದ್ದಾರೆ, ಸ್ನೇಹಿತರು ಸಂಗಾತಿಗಳ ನೋವು-ಕಷ್ಟಗಳಲ್ಲಿ ಒಂದಾಗಿದ್ದಾರೆ. ಅವರು ಅತ್ಯಂತ ಸುಸಂಸ್ಕೃತರು ಅಷ್ಟೇ ವಿಚಾರವಂತರು. ಹೀಗಾಗಿ ಅವರು ರಾಜಕೀಯ ವಲಯದಲ್ಲಿ ಮಾತ್ರವಲ್ಲ, ಸಾಹಿತ್ಯಕ-ಸಾಂಸ್ಕೃತಿಕ ಕ್ಷೇತ್ರಗಳಲ್ಲೂ ಮಾನ್ಯತೆ ಪಡೆದಿದ್ದಾರೆ.

ಅವರು ವಿಧಾನಸಭೆಯ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಹಲವಾರು ಕಲೆ, ಸಾಹಿತ್ಯ ಮತ್ತು ವೈಚಾರಿಕ ಸಭೆ-ಸಮ್ಮೇಳನಗಳ ಉದ್ಘಾಟಕರಾಗಿ ಅಧ್ಯಕ್ಷರಾಗಿ ಮಾಡಿದ ಅಪೂರ್ವ ಭಾಷಣಗಳು ಮನನೀಯವಾಗಿದೆ.

ಜಾತಿ ಮತ ಪಂಥಗಳ ಸೋಂಕಿಲ್ಲದ ಅಪರೂಪದ ಹಿರಿಯ ರಾಜಕಾರಣಿಯಾಗಿರುವ ಶ್ರೀ ರಂಗನಾಥ್ ಅವರ ನಿಜಕ್ಕೂ ಸಮಾಜ ವಿಜ್ಞಾನಿಯಂತೆ, ದಾರ್ಶನಿಕರಂತೆ ಬದುಕಿದ್ದಾರೆ. ಬಡಬಗ್ಗರು ದೀನ ದಲಿತರಿಗಾಗಿ ತಮ್ಮ ಕೈಲಾದುದನ್ನೆಲ್ಲ ಮಾಡಿದ್ದಾರೆ. ಸತ್ಯ ಸಂಗತಿಗಳನ್ನು ಧೈರ್ಯವಾಗಿ ಸ್ಪಷ್ಟವಾಗಿ ವಿವರಿಸುವ ಅವರ ವಿಧಾನದಿಂದ ಹಲವು ಸಲ ಅವರು ವಿರೋಧವನ್ನೂ ಕಟ್ಟಿಕೊಂಡಿದ್ದಾರೆ.

*****

# ಭ್ರಷ್ಟತೆಯ ಬೇರು ಬಿಡುವ ಭಾವುಕತೆಯನ್ನೂ ದೂರವಿಡುವವರು

ಎನ್.ಕೆ. ಹನುಮಂತಯ್ಯ

ಶ್ರೀ ಕೆ.ಎಚ್. ರಂಗನಾಥ್‌ರವರು ಕರ್ನಾಟಕದ ರಾಜಕಾರಣದಲ್ಲಿ ಇತರೆ ರಾಜಕಾರಣಿಗಳಿಗಿಂತ ಭಿನ್ನ ಎಂಬ ಅಭಿಪ್ರಾಯವನ್ನು ಕಾಪಾಡಿಕೊಂಡಿರುವಂಥವರು. 'ಕ್ಯಾಸ್ಟ್ ಡೆಮಾಕ್ರಸಿ'ಯ ತತ್ವಗಳನ್ನು ದಾಟಿ ಒಬ್ಬ ಶ್ರೇಷ್ಠ ರಾಜಕಾರಣಿ ಎಂದು ಎಲ್ಲ ಸಮುದಾಯಗಳಿಂದ ಗುರುತಿಸಿಕೊಂಡಂಥವರು. ಹುಟ್ಟಿನಲ್ಲಿ ಕೆಳವರ್ಗಕ್ಕೆ ಸೇರಿದವರಾಗಿದ್ದರೂ ಆ ನೆಲೆಯನ್ನು ಸ್ಫೋಟಿಸಿ ಸಾರ್ವತ್ರಿಕ ವ್ಯಕ್ತಿಯಾಗಿ ರೂಪುಗೊಂಡಂಥವರು. ಗಾಂಧೀಜಿಯ ಸರಳತೆ, ಬುದ್ಧನ ಮಾನವೀಯ ಚಿಂತನೆಗಳನ್ನು ತಮ್ಮ ರಾಜಕಾರಣದ ಎರಡು ಕಣ್ಣುಗಳನ್ನಾಗಿಸಿಕೊಂಡಿರುವ ಇವರಿಗೆ ಸಮಾಜ ಬದಲಾವಣೆಯ ಹೆಬ್ಬಯಕೆ ಇದೆ.

ಸಾಹಿತ್ಯವನ್ನು ರಾಜಕಾರಣದ ಶ್ರದ್ದೆಯಷ್ಟೇ ಮುಖ್ಯವೆಂದು ಭಾವಿಸಿ ಅಧ್ಯಯನ ಮಾಡುವ ಏಕೈಕ ವ್ಯಕ್ತಿ ಶ್ರೀ ಕೆ.ಎಚ್. ರಂಗನಾಥ್‌ರವರು. ಆಂಗ್ಲ ಮತ್ತು ಕನ್ನಡ ಸಾಹಿತ್ಯದಲ್ಲಿ ಆಳವಾದ ಹಿಡಿತ ಸಾಧಿಸಿರುವ ಇವರು ಬಹುಪಾಲು ಶ್ರೇಷ್ಠವೆನಿಸುವ ಕೃತಿ ಮತ್ತು ಚಿಂತನೆಗಳ ಕಡೆ ಒತ್ತುಕೊಡುವ ಮನೋಭಾವದವರು. ಹೊಗಳಿಕೆಯೆಂಬ ಹೊನ್ನಶೂಲ ತನ್ನ ಪ್ರಜ್ಞೆಗೆ ಚುಚ್ಚದ ಹಾಗೆ ಎಚ್ಚರ ವಹಿಸುವ ಶ್ರೀ ಕೆ.ಎಚ್. ರಂಗನಾಥ್‌ರವರು ಗುಂಪುಗಾರಿಕೆಯಿಂದ ಹೊಗಳುಭಟ್ಟರಿಂದ ನಾಯಕನಾಗಿ ಮೆರೆಯಬೇಕೆಂಬುದರ ವಿರೋಧಿ. ಅಂತರ್ಮುಖಿಯಾಗಿ ವ್ಯವಸ್ಥೆಯ ಬಗ್ಗೆ ತಲೆಕೆಡಿಸಿಕೊಳ್ಳುವ ಚಿಂತಕರೆಂದರೂ ಉತ್ಪ್ರೇಕ್ಷೆಯಾಗದು.

ಕರ್ನಾಟಕ ರಾಜಕಾರಣದ ಚರಿತ್ರೆಯ ಪುಟಗಳಲ್ಲಿ ರಂಗನಾಥ್ ಅನೇಕ ಮುಖ್ಯಮಂತ್ರಿಗಳಿಗೆ ಅಷ್ಟೇ ಏಕೆ ಇಂದಿರಾಗಾಂಧಿಯವರಿಗೂ ಕೂಡ ಅಮೂಲ್ಯ ಸಲಹೆಗಳನಿತ್ತ ಮೇಧಾವಿ. ಗೌರವದಿಂದ ಎಲ್ಲ ಪಕ್ಷದವರೂ ಕಾಣುವಂಥ ಸಂವೇದನಾಶೀಲರು. ಪ್ರಗತಿಪರ ಕನಸುಳ್ಳವರು. ಇಷ್ಟಾದರೂ ಹಿರಿಯೂರಿನ ಸುತ್ತಮುತ್ತಲ ಜನ ಅಷ್ಟೇ ಏಕೆ ಕರ್ನಾಟಕ ಅಸಂಖ್ಯ ಜನ ರಂಗನಾಥರನ್ನು 'ಪ್ರಾಮಾಣಿಕ ನಿಷ್ಕ್ರಿಯ ರಾಜಕಾರಣಿ' ಎಂದು ಬಣ್ಣಿಸುವುದು? ಎಂದು ಆಲೋಚಿಸಿದಾಗ ಕೆಲವು ಅಂಶಗಳು ಗಮನಕ್ಕೆ ಬರುತ್ತವೆ. ಅವುಗಳೆಂದರೆ; ಇವತ್ತಿನ ರಾಜಕಾರಣದಲ್ಲಿನ ಪ್ರಭುಗಳಿಗೆ ತಮ್ಮ ನಂಬಿಕಸ್ಥರಿಗೆ ಅದರಲ್ಲೂ ವೋಟಿನ ಕಣಜಗಳ

ಯಜಮಾನರುಗಳಿಗೆ ಯಾವ ಬಗೆಯಲ್ಲಾದರೂ ಸಹಾಯ ಮಾಡಬೇಕಾದುದು ಧರ್ಮವಾಗಿದೆ. ಅಷ್ಟೇ ಅಲ್ಲದೆ ತಮ್ಮ ಜಾತಿ ಮತ್ತು ಧರ್ಮಗಳ ಏಳಿಗೆಗಾಗಿ ಭ್ರಷ್ಟಾಚಾರದ ಟಾರೆಣ್ಣೆಗೂ ಹಾರಿ ಬದುಕುಳಿಯುವಂಥ ಚರ್ಮ ಪ್ರಭುವಾದವನಿಗೆ ಅವಶ್ಯಕವಾಗಿದೆ. ಸಮಾಜದಲ್ಲಿ ಘನತೆಯನ್ನು ಕಾಯ್ದುಕೊಳ್ಳಲು ತಾನೂ ತಿನ್ನುವ ಇತರರಿಗೂ ತಿನ್ನಲು ಅವಕಾಶ ಮಾಡಿಕೊಡುವ ಉದಾರತೆಯನ್ನು ಪ್ರಭುವಾದವನ್ನು ಮೈಗೂಡಿಸಿಕೊಂಡಿರಬೇಕಾಗುತ್ತದೆ. ಎಷ್ಟೇ ದುಡ್ಡು ಸಂಪಾದಿಸಿದರೂ ತನ್ನನ್ನು ನಾಯಕನನ್ನಾಗಿಸಿದ ಪ್ರಜೆಗಳಿಗೆ ಸ್ವಲ್ಪ ಅಭಿವೃದ್ಧಿ ಕೆಲಸಗಳನ್ನು ಮಾಡಿದರೆ ಅವನಂಥ ಶ್ರೇಷ್ಠರು ಇನ್ನಾರು ಇಲ್ಲ ಎಂಬ ಸಂದರ್ಭ ಈಗಿನದಾಗಿದೆ. ಹೀಗಿರುವಾಗ ರಂಗನಾಥ್, ಮೇಲಿನ ಯಾವುದೇ ಮೌಲ್ಯಗಳಿಗೆ ಅಂಟಿಕೊಳ್ಳದ ವಿಶಿಷ್ಟ ರಾಜಕಾರಣಿಯಾಗಿದ್ದಾರೆ. ಆ ಕಾರಣಕ್ಕಾಗಿಯೇ ಪ್ರಸ್ತುತ ಭ್ರಷ್ಟ ರಾಜಕಾರಣಕ್ಕೆ ಒಗ್ಗಿಹೋಗಿರುವ ಜನಸಾಮಾನ್ಯರು ರಂಗನಾಥ್‌ರಲ್ಲೂ ಅಂಥ ರಾಜಕಾರಣವನ್ನೇ ಬಯಸಿ ನಿರಾಶರಾಗಿದ್ದಾರೆ. ಅದಕ್ಕಾಗಿಯೇ ಅವರನ್ನು 'ನಿಷ್ಕ್ರಿಯ ರಾಜಕಾರಣಿ' ಎಂಬುದಾಗಿ ಕರೆಯುತ್ತ ಅತೃಪ್ತಿ ವ್ಯಕ್ತಪಡಿಸುತ್ತಾರೆ ಎನ್ನಿಸುತ್ತದೆ.

ರಂಗನಾಥ್ ಸದಾ ಸಮುದಾಯ ಮುಖಿ ಅಂದರೆ ವಿಶ್ವಾತ್ಮಕನೆಲೆಯ ಚಿಂತನೆಯನ್ನು ನಡೆಸುವಂಥವರಾಗಿದ್ದಾರೆ. ಸ್ವಜಾತಿ ಪ್ರೇಮವಾಗಲಿ, ಸ್ವಕ್ಷೇತ್ರ ಪ್ರೇಮವಾಗಲಿ ಅವರ ದೂರದೃಷ್ಟಿಯನ್ನು ಕುರುಡಾಗಿಸಿಲ್ಲ. ಸದಾ ಒಟ್ಟೂ ರಾಜ್ಯದ ಹಿತಕ್ಕಾಗಿ ಚಿಂತಿಸುವ ವ್ಯಕ್ತಿ ಇವರು. ಬೌದ್ಧಿಕ ಶಕ್ತಿಯನ್ನು ಬ್ರಾಹ್ಮಣರಿಗಿಂತ ಹೆಚ್ಚಾಗಿ ಗಳಿಸಿಕೊಳ್ಳುವ ಮೂಲಕ ತನ್ನ ಸ್ಥಾನಮಾನವನ್ನು ಸಿಡಿಸಿಕೊಂಡು ಸಾರ್ವತ್ರಿಕ ಗೌರವಕ್ಕೊಳಗಾಗುವ ಅನಿವಾರ್ಯತೆ ಕೆಳವರ್ಗಗಳಿಗಿದೆ ಎಂದು ನಂಬಿರುವ ಇವರು ಜನರ ನಿಜ ಸಂಕಟಕ್ಕೆ ಸ್ಪಂದಿಸುವವರು.

*****



# ರಂಗನಾಥ್‌ರ ಆಲೋಚನೆಯ ತುಣುಕುಗಳು

ಪಿ. ಮಂಜುನಾಥ್

ಕೆಲ ರಾಜಕಾರಣಿಗಳು ಸಾಹಿತ್ಯ ಸಂಸ್ಕೃತಿಯ ಗೀಳನ್ನು ಫ್ಯಾಷನ್‌ಗೆ ಇಟ್ಟುಕೊಂಡಿರುತ್ತಾರೆ. ಅವರು ಸಭೆ-ಸಮಾರಂಭಗಳಲ್ಲಿ ಸಾಹಿತ್ಯ-ಸಂಸ್ಕೃತಿಯ ಬಗ್ಗೆ ಪುಂಖಾನುಪುಂಖವಾಗಿ ಮಾತನಾಡಿ ಸಾಹಿತಿಗಳನ್ನು ಬೆರಗು ಮಾಡುವ ಇರಾದೆಯುಳ್ಳವರು. ಇಂಥವರ ಸಾಲಿಗೆ ಶ್ರೀ ಕೆ.ಎಚ್. ರಂಗನಾಥ್ ಸೇರುವವರಲ್ಲ. ಅವರ ಓದು, ಚಿಂತನೆ ಒಬ್ಬ ವ್ಯಕ್ತಿಗೆ ಅತ್ಯಂತ ಅಗತ್ಯವಾದದ್ದು ಎಂಬ ನಂಬಿಕೆಯಿಂದ ಕೂಡಿದ್ದಾಗಿದೆ.

'ಮುಕ್ಕಾಲು ಪಾಲು ಬಡವರೇ ತುಂಬಿರುವ ಭಾರತದಲ್ಲಿ ಸಮಾಜವಾದಿ ಪಕ್ಷಗಳಿಗೆ ಮಾತ್ರ ಕೆಲಸವಿದೆ, ಬಲಪಂಥೀಯ ಪಕ್ಷಗಳಿಗೆ ಇಲ್ಲಿ ಮಾಡಲೇನೇನೂ ಕೆಲಸವಿಲ್ಲ' ಅನ್ನುತ್ತಾರೆ ಶ್ರೀ ಕೆ.ಎಚ್. ರಂಗನಾಥ್, ಆಕಸ್ಮಿಕವಾಗಿ ಬಲಪಂಥೀಯ ಪಕ್ಷ ಅಧಿಕಾರಕ್ಕೆ ಬಂದಾಗ ಜನರಿಗೆ ಜೋತಿಷ್ಯಶಾಸ್ತ್ರ ಕಲಿಸುತ್ತದೆ ಎಂದು ವ್ಯಂಗ್ಯ ಮಾಡುತ್ತಾರೆ.

ಕಾಂಗ್ರೆಸ್ ಪಕ್ಷ ಮಹತ್ವಾಕಾಂಕ್ಷೆ ಇಟ್ಟುಕೊಂಡು ಬ್ಯಾಂಕುಗಳ ರಾಷ್ಟ್ರೀಕರಣ ಮಾಡಿತು. ಆದರೆ ಅದರಿಂದ ದೊರೆಯಬಹುದಾದಷ್ಟು ಫಲ ದೊರೆಯಲಿಲ್ಲವೆಂದು ವಿಷಾದಿಸುತ್ತಾರೆ. ಯಾಕೆಂದರೆ ಅಲ್ಲೂ ಅಧಿಕಾರಿಗಳೇ ಮಾಲೀಕ ವರ್ಗದಂತೆ ವರ್ತಿಸತೊಡಗಿದರು ಅನ್ನುತ್ತಾರೆ.

ಆಕಾಡೆಮಿಕ್ ತಜ್ಞರು ರೂಪಿಸುವ Theoritical ಆರ್ಥಿಕ ನೀತಿ, ಶಿಕ್ಷಣ ನೀತಿಗಿಂತ ಗ್ರಾಮೀಣ ಅನುಭವ ಹಾಗೂ ಅರಿವುಳ್ಳವರು ರೂಪಿಸುವ ಆರ್ಥಿಕ ಹಾಗೂ ಶಿಕ್ಷಣ ನೀತಿ ಹೆಚ್ಚು ಆಳವೂ-ಸಮಗ್ರವೂ ಆಗಿರುತ್ತದೆ. ಇಲ್ಲದಿದ್ದರೆ ಗ್ರಾಮಗಳಿಗೆ, ಅನನ್ಯ ಸಂಬಂಧವುಳ್ಳ ಕುಟುಂಬಗಳ ಹೆಣ್ಣುಮಕ್ಕಳಿಗೆ ಒದಗಿಸುವ ಶಿಕ್ಷಣ ಪ್ರಯೋಜನಕ್ಕೆ ಬರುವುದಿಲ್ಲ ಅನ್ನುತ್ತಾರೆ. ಈ ಸಂದರ್ಭದಲ್ಲಿ ಅವರು ಕೊಡುವ ಉದಾಹರಣೆಯೊಂದು ಮಾರ್ಮಿಕವಾಗಿದೆ.

ಹಿರಿಯೂರು ತಾಲ್ಲೂಕಿನ ವಾಣಿವಿಲಾಸ ಸಾಗರದ ಬಳಿ ಗೊಲ್ಲರಹಟ್ಟಿಯೊಂದು ಇದೆ. ಅಲ್ಲಿಗೆ ಶ್ರೀ ಕೆ.ಎಚ್. ರಂಗನಾಥ್ ಚುನಾವಣೆ ಸಂದರ್ಭದಲ್ಲಿ ಹೋದಾಗ ಪರಿಚಿತ ಕುಟುಂಬದ ಹೆಣ್ಣುಮಗಳೊಬ್ಬಳಿಗೆ "ಏನು ಓದಿದ್ದೀಯಮ್ಮ?" ಎಂದು ವಿಚಾರಿಸಿದ್ದಾರೆ. ಆಕೆ ಬಿ.ಎ. ಎಂದಿದ್ದಾಳೆ. ನಿಮ್ಮಗಂಡ ಏನು ಓದಿದ್ದಾರೆ? ಎಂದು ಪುನಃ ಕೇಳಿದ್ದಾರೆ. ಆಕೆ ಯಾವ ವಿಷಾದವೂ ಇಲ್ಲದೆ 'ಏನು ಓದಿಲ್ಲ. ಕುರಿ ಕಾಯುತ್ತಿದ್ದಾರೆ' ಎಂದು ತಿಳಿಸಿದ್ದಾರೆ. ಇದರಿಂದ ಶ್ರೀ ಕೆ.ಎಚ್. ರಂಗನಾಥ್‌ಗೆ ಗಲಿಬಿಲಿ. 'ಅಲ್ಲಮ್ಮ ನೀನು ಯಾವುದಾದರೂ ಕೆಲಸಕ್ಕೆ ಸೇರಬಹುದಿತ್ತಲ್ಲ?' ಎಂದು ಪುನಃ ವಿಚಾರಿಸಿದಕ್ಕೆ ಆಕೆ 'ಕೊಡ್ಸಿ ಸಾರ್ ಹೋಗುತ್ತೇನೆ' ಎಂದಿದ್ದಾಳೆ.

ಶ್ರೀ ಕೆ.ಎಚ್. ರಂಗನಾಥ್ ಇಂಥ ಕಡೆ ಸರ್ಕಾರ ವ್ಯಯಿಸುವ ಶಿಕ್ಷಣ ಸಂಪನ್ಮೂಲ ವ್ಯರ್ಥವಾಗುವುದನ್ನು ಸೂಕ್ಷ್ಮವಾಗಿ ಗ್ರಹಿಸುತ್ತಾರೆ. ಜತೆಗೆ ಇದೆಲ್ಲವನ್ನು ಮೀರಿದ ಮಾನವೀಯತೆಯಿಂದ ಆ ಹೆಣ್ಣು ಮಗಳಿಗೊಂದು ಕೆಲಸ ಕೊಡಿಸಲಾಗಿಲ್ಲ ಎಂದು ತೊಳಲಾಡುತ್ತಾರೆ. ಇಂಥ ಅನೇಕ ಸೂಕ್ಷ್ಮ ಪದರುಗಳನ್ನುಳ್ಳ ಶ್ರೀ ಕೆ.ಎಚ್. ರಂಗನಾಥ್ ಅರ್ಥಪೂರ್ಣ ರಾಜಕಾರಣಿಯಾಗಿ ನಮಗೆ ಕಾಣುತ್ತಾರೆ.

*****



ರಷ್ಯಾದ ನಿಯೋಗದೊಂದಿಗೆ ಶ್ರೀ ಅರಸು ಮತ್ತು ಶ್ರೀ ರಂಗನಾಥ್



ನಮೀಬಿಯಾದ ಅಧ್ಯಕ್ಷ ಡಾ. ಶ್ಯಾಮ್ ನ್ಯುಜೋಮ ಅವರೊಂದಿಗೆ

# ಸಮಾಜವಾದಿ ಶ್ರೀ ರಂಗನಾಥ್

## ಮಹಾದೇವ್ ಹೊರಟ್ಟಿ

ಸುಪ್ರಭಾವಿ, ಸುಸಂಸ್ಕೃತ, ಪ್ರಗತಿಪರ ಚಿಂತಕ, ಮಾನವತಾವಾದಿ ಶ್ರೀ ಕೆ.ಎಚ್. ರಂಗನಾಥ್‌ರವರದು ಅಪರೂಪ ವ್ಯಕ್ತಿತ್ವ. ಕಳೆದ 30 ವರ್ಷಗಳಿಂದ ಅವರನ್ನು ಹತ್ತಿರದಿಂದ ಅರಿಯಲು ಪ್ರಯತ್ನಿಸಿದ್ದೇನೆ. ಚರ್ಚಿಸಿದ್ದೇನೆ. ಚರ್ಚೆ ಮಾಡುವಾಗ ವಿಚಾರಗಳ ತಾಕಲಾಟದಿಂದ ಭಿನ್ನಾಭಿಪ್ರಾಯ ಹೊಂದಿದ್ದೇನೆ. ವಿಭಿನ್ನ ನಿಲುವು ಹೊಂದಿದ್ದೇನೆ. ಆದರೆ ಅವರ ಜೊತೆಗಿನ ಆತ್ಮೀಯ ಸಂಬಂಧ ಸಾಮ್ಯದಲ್ಲಿಯೂ, ಭೇದದಲ್ಲಿಯೂ ಗಾಢವಾಗಿ ಬೆಳೆದಿದೆ. ಅಭಿಪ್ರಾಯ ಭೇದವಿದ್ದರೂ, ಉತ್ತರ ಧೃವವಾದರೂ ದಕ್ಷಿಣ ಧೃವವಾದರೂ ಮಾನವೀಯ ಅಂತಃಕರಣ ಕರಗಿ ಪ್ರೀತಿಯ ಬೆಸುಗೆ ಪ್ರವೃತ್ತಿ ರಂಗನಾಥರವರ ವ್ಯಕ್ತಿತ್ವದ ವೈಶಿಷ್ಟ್ಯತೆ.

ಭಾರತೀಯ ಸಮಾಜದ ಚೌಕಟ್ಟಿನಲ್ಲಿ ನೋವನ್ನೇ ಉಸಿರನ್ನಾಗಿ ಅನುಭವಿಸಿದ, ಅನುಭವಿಸುತ್ತಿರುವ ವರ್ಗದಿಂದ ಮೇಲೆದ್ದು ಬಂದ ರಂಗನಾಥರವರು ಸಮಾಜಕ್ಕೆ ಗಾಂಭೀರ್ಯದ ನಗೆಯನ್ನು ಬೀರಿದ ನೀಲಕಂಠ. ಇಡೀ ಸಮಾಜದ ಒಳಿತನ್ನು ಬಯಸುವ ತತ್ವಬದ್ಧ ಮಾರ್ಗದರ್ಶಕ. ಗ್ರಾಮಗಳ ಬಗ್ಗೆ, ಬಡ ಜನತೆಯ ಬಗ್ಗೆ, ವಿಶ್ವದ ಜನಾಂಗಗಳ ಬಗ್ಗೆ ಅಂತಃಕರಣ ಪೂರಕ ಆಲೋಚನೆ ಮಾಡುವ ರಂಗನಾಥರವರು ಒಬ್ಬ ಮಹಾನ್ ಚಿಂತಕ. ಅವರ ಚಿಂತನೆಗಳು ಕ್ರಿಯಾತ್ಮಕ ಅನುಷ್ಠಾನವಾಗಿದ್ದರೆ ಅದು ನಾಡಿಗೆ ಹೊಸ ಆಯಾಮ ನೀಡುತ್ತಿತ್ತೇನೋ ಎಂದು ನನ್ನ ಅನಿಸಿಕೆ.

ನಮ್ಮ ಸಮಾಜ ಮತ್ತು ಕಾಲ ಅವರ ಚಿಂತನೆಗಳ ಕ್ರಿಯಾ ಅನುಷ್ಠಾನಕ್ಕೆ ಇನ್ನೂ ಪಕ್ವವಾಗಿಲ್ಲದಿರುವುದು ನಮ್ಮ ನಾಡಿನ ದುರ್ದೈವ. ಕೆ.ಎಚ್. ರಂಗನಾಥರನ್ನು ಪೂರ್ಣ ಪ್ರಮಾಣದಲ್ಲಿ ಗುರುತಿಸುವಲ್ಲಿ ನಮ್ಮ ಸಮಾಜ ವಿಫಲಗೊಂಡಿದೆ ಎಂದು ಹೇಳಬಹುದು. ಇಂದಿನ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ 'ಕೆಸರಿನಲ್ಲಿ ಕಮಲ' ವಾದ ರಂಗನಾಥರಂಥ ಪ್ರಾಮಾಣಿಕ, ಶುದ್ಧ ಹಸ್ತದ ನಾಯಕರೇ ಅಪರೂಪ. ಮಹಾಕವಿ ಸರ್ವಜ್ಞ ಹೇಳಿರುವಂತೆ "ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ. ಬಲ್ಲವರಿದ್ದೂ ಬಲ್ಲವಿಲ್ಲ."

ರಂಗನಾಥರು ನಾಡಿನ ಬದುಕಿಗೆ ಒಳ್ಳೆಯದನ್ನೇ ನೀಡಿದ್ದಾರೆ. ಅವರ ಕಳಂಕರಹಿತ ಆದರ್ಶ ಬದುಕೇ ಅವರು ನಾಡಿಗೆ ನೀಡಿದ ಕಾಣಿಕೆ, ಹಲವು ಹತ್ತಾರು ವಿಚಾರಗಳನ್ನು ಆಳವಾಗಿ ಅಭ್ಯಸಿಸಿ, ಆಲೋಚಿಸಿ, ಸಮತೂಕದ ಅಭಿಪ್ರಾಯ ನೀಡುವ ರಂಗನಾಥ್ ಅವರು ಚಲಿಸುವ ವಿಶ್ವವಿದ್ಯಾಲಯವೆಂದೇ ಹೇಳಬಹುದು. ಸಮಾಜದಲ್ಲಿಯ ಬಡತನದ ಬಗ್ಗೆ, ಅಸ್ಪೃಶ್ಯತೆಯ ನೋವಿನ ಬಗ್ಗೆ, ಯುದ್ಧಗಳಿಂದ ಆಗುವ ದುರಂತದ ಬಗ್ಗೆ ವೈಜ್ಞಾನಿಕ ಪ್ರಗತಿಯ ಬಗ್ಗೆ, ಅವರದೇ ಆದ ಕಾಳಜಿಪೂರ್ವಕ ಅಭಿಪ್ರಾಯಗಳನ್ನು ನಾವು ಸ್ವೀಕರಿಸಬೇಕಾಗಿದೆ.

*****

# ನೊಂದವರ ಪರ, ಆದರೆ ನಿಷ್ಠುರ

## ಗುಡಿಹಳ್ಳಿ ನಾಗರಾಜ್

ಜೀವನಾನುಭವ, ಆಳವಾದ ಅಧ್ಯಯನದಿಂದಾಗಿ ವ್ಯಕ್ತಿಯ ಮುಖ ನೋಡಿದ ಕೂಡಲೇ ಅವನ ನಾಡಿಮಿಡಿತ ಅರಿಯುವ ಶಕ್ತಿ ರಂಗನಾಥರಿಗಿತ್ತು. ಹಾಗಾಗಿ ನನ್ನೊಂದಿಗೆ ಅವರು ಚರ್ಚಿಸುತ್ತಿದ್ದುದು ಸಾಹಿತ್ಯದ, ನಾಟಕದ ವಿಷಯ. ರಾಜಕೀಯದ ಮಧ್ಯೆಯೂ ಇದಕ್ಕಾಗಿ ಅವರು ಬಿಡವು ಮಾಡಿಕೊಳ್ಳುತ್ತಿದ್ದರು. ಹಿರಿಯೂರಿನಲ್ಲಿ ನಾವೊಮ್ಮೆ ಬಂಡಾಯ ಪುಸ್ತಕ ಜಾಥಾ ಏರ್ಪಡಿಸಿದ್ದಾಗ ಎಡಬಿಡದ ಕೆಲಸದ ಮಧ್ಯೆಯೂ ಜಾಥಾ ಸ್ಥಳಕ್ಕೆ ಬಂದು ಪುಸ್ತಕಗಳನ್ನು ವೀಕ್ಷಿಸಿ, ಅಮೂಲ್ಯವಾದ ಪುಸ್ತಕಗಳನ್ನು ಕೊಂಡೊಯ್ದರು. ಇನ್ನೂ ಇಂತಿಂತಹ ಪುಸ್ತಕಗಳನ್ನು ಇಡಬಹುದಿತ್ತು ಎಂದು ಸಂಘಟಕರಾದ ನಮಗೆ ಸಲಹೆ ನೀಡಿದರು. ತಾವು ಓದಿದ ಪುಸ್ತಕಗಳ ಕುರಿತು ಆಗಾಗ ಚರ್ಚಿಸುತ್ತಿದ್ದರು. ಇದರಲ್ಲಿ ವಯಸ್ಸಿನ ಬೇಧಭಾವ ಇರುತ್ತಿರಲಿಲ್ಲ.

1994ರ ರಾಜ್ಯ ವಿಧಾನಸಭೆಯ ಚುನಾವಣೆಯ ದಿನಗಳು. ಚುನಾವಣೆ ಪ್ರಚಾರ ಭಾಷಣದ ಕವರೇಜ್‌ಗೆಂದು ಹಿರಿಯೂರಿಗೆ ಹೋಗಿದ್ದೆ. ಮುಖ್ಯ ಅತಿಥಿ ಇನ್ನೂ ಬಂದಿರಲಿಲ್ಲ. ಶ್ರೀ ಕೆ.ಎಚ್. ರಂಗನಾಥ ಅವರೊಂದಿಗೆ ಕೆಲ ಸಮಯ ಕಳೆಯುವ ಅವಕಾಶ ಲಭ್ಯವಾಯಿತು. ಅದೇ ದಿನ ಅಥವಾ ಅದರ ಹಿಂದಿನ ದಿನ ಪ್ರಜಾವಾಣಿ ಹಾಗೂ ಡೆಕ್ಕನ್ ಹೆರಾಲ್ಡ್‌ನಲ್ಲಿ ನನ್ನ ಚುನಾವಣೆ ಸಮೀಕ್ಷೆ ಪ್ರಕಟವಾಗಿತ್ತು. ರಂಗನಾಥರ ಬಗ್ಗೆ ನಿಷ್ಠುರವಾಗಿ ಬರೆದಿದ್ದೆ. ಅದನ್ನವರು ಓದಿದ್ದರು ಕೂಡ. ಆದರೆ ಮನಸ್ಸನ್ನು ಏನು ಕಹಿ ಮಾಡಿಕೊಳ್ಳದೆ, ನನ್ನೊಂದಿಗೆ ಎಂದಿನ ಸ್ನೇಹ ಸಲುಗೆಯಿಂದಲೇ ಮಾತನಾಡಿದರು. ಆರೋಗ್ಯಕರ ಮನಸ್ಸು ಟೀಕೆಯನ್ನು ಅತ್ಯಂತ ಕ್ರೀಡಾ ಮನೋಭಾವದಿಂದ ಸ್ವೀಕರಿಸಿದ್ದಕ್ಕೆ ಉತ್ತಮ ಉದಾಹರಣೆ ಇದು. ನನಗಂತೂ ಮರೆಯಲಾರದ ನೆನಪು. ಇಂತಹ ವರ್ತನೆಗಳು ಮತ್ತೊಬ್ಬರ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತವೆ. ನನಗಾದದ್ದೂ ಅದೇ.

ಸೋಲಿರಲಿ, ಗೆಲುವಿರಲಿ ಅದನ್ನು ಸಮಚಿತ್ತದಿಂದ ಸ್ವೀಕರಿಸುವ ಮನಸ್ಸು ಅವರದು. ಚಿತ್ರದುರ್ಗ ಲೋಕಸಭಾ ಮೀಸಲು ಕ್ಷೇತ್ರವಲ್ಲ, ಸಾಮಾನ್ಯ ಕ್ಷೇತ್ರ. 1984ರ ಲೋಕಸಭೆ ಚುನಾವಣೆಯಲ್ಲಿ ಈ ಸಾಮಾನ್ಯ ಕ್ಷೇತ್ರದಿಂದ ಸ್ಪರ್ಧಿಸಿ ಗೆದ್ದರು. ಅದೂ ಬಲಿಷ್ಠ ಜನಾಂಗದ ಸೀಜನ್ಡ್ ರಾಜಕಾರಣಿ ಬಿ.ಎಲ್. ಗೌಡರ ವಿರುದ್ಧ. ಪಕ್ಷದ ಪ್ರಭಾವಳಿ ಜತೆಗೆ ಶ್ರೀ ಕೆ.ಎಚ್. ರಂಗನಾಥ್ ಎಲ್ಲ ಜನಾಂಗದೊಂದಿಗೆ ಗಳಿಸಿಕೊಂಡ ವಿಶ್ವಾಸವೂ ಇದಕ್ಕೆ ಕಾರಣ.

ಸಾಮಾನ್ಯ ಕ್ಷೇತ್ರದಿಂದ ದಲಿತ ವ್ಯಕ್ತಿಯೊಬ್ಬ ಗೆದ್ದು ಬಂದ ಅತಿ ವಿರಳ ಉದಾಹರಣೆಗಳ ಪೈಕಿ ಇದೂ ಒಂದು.

ಇಷ್ಟಾದರೂ ಸೋಲು-ಗೆಲುವು ಅವರಿಗೇನೂ ಹೊಸದಲ್ಲ. 1994ರ ವಿಧಾನಸಭೆ ಚುನಾವಣೆಯಲ್ಲಿ ಸೋತರು. ಕೆಲದಿನಗಳ ಮೌನದ ನಂತರ ಅವರು ಮಾತನಾಡಿದ್ದು ಸಮಗ್ರ ಕರ್ನಾಟಕದ ಹಿತರಕ್ಷಣೆ ಕುರಿತು. "ಕರ್ನಾಟಕದ ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ರೈಲ್ವೇ ವಲಯ ಕೇಂದ್ರವನ್ನು ಹುಬ್ಬಳ್ಳಿಯಲ್ಲೇ ಸ್ಥಾಪಿಸುವುದು ಅತ್ಯಂತ ಸಮಂಜಸ. ಆದ್ದರಿಂದ ಪ್ರಧಾನಿ ದೇವೇಗೌಡರು ತಮ್ಮ ನಿರ್ಧಾರವನ್ನು ಮರುಪರಿಶೀಲಿಸಬೇಕು" ಎಂದು ಚಿತ್ರದುರ್ಗದಲ್ಲಿ ಪತ್ರಕರ್ತರೊಂದಿಗೆ ಮಾತನಾಡುತ್ತ ಅಂದಿನ ಪ್ರಧಾನಿ ದೇವೇಗೌಡರಿಗೆ ಪರಿಪರಿಯಾಗಿ ಹೇಳಿದರು.

"ಹುಬ್ಬಳ್ಳಿಯಲ್ಲಿ ರೈಲ್ವೆ ವಲಯದ ಸ್ಥಾಪನೆ ಬರೀ ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದ್ದಲ್ಲ. ಹಳೇ ಮೈಸೂರು ಹಾಗೂ ಉತ್ತರ ಕರ್ನಾಟಕ ಎರಡರ ಹಿತದೃಷ್ಟಿಯಿಂದಲೂ ಹುಬ್ಬಳ್ಳಿಯೇ ಸೂಕ್ತ. ಕಾರವಾರ ಬಂದರಿನ ಮೂಲಕ ವ್ಯಾಪಾರಕ್ಕೆ ಮಂಗಳೂರು ಬಂದರಿನ ಮೂಲಕ ಸಾಗಿಸುವ ಗ್ರಾನೈಟ್ ಉದ್ದಿಮೆಗೂ ಹುಬ್ಬಳ್ಳಿ ರೈಲ್ವೆ ವಲಯವಾಗುವುದು ವಿಹಿತ."

"ಮಧ್ಯಪ್ರದೇಶ, ಉತ್ತರಪ್ರದೇಶ ಸೇರಿದಂತೆ ಉತ್ತರ ಭಾರತದ ವಹಿವಾಟು ಮುಂಬೈ ಬಂದರು ಮೂಲಕ ನಡೆಯುತ್ತದೆ. ಅದನ್ನು ಬಿಟ್ಟರೆ ಪೂರ್ವದ ವಿಶಾಖಪಟ್ಟಣ ಬಂದರಿಗೆ ಹೋಗಬೇಕು. ಇಲ್ಲವೇ ಮದರಾಸ್ ಬಂದರಿಗೆ ಹೋಗಬೇಕು. ಹುಬ್ಬಳ್ಳಿಯಲ್ಲಿ ರೈಲ್ವೆ ವಲಯ ಸ್ಥಾಪನೆಯಾದರೆ ಕಾರವಾರ ಬಂದರು ಬೆಳವಣಿಗೆ ಹೊಂದಿ ಸಮಗ್ರ ಕರ್ನಾಟಕ, ಜತೆಗೆ ಮಹಾರಾಷ್ಟ್ರದ ಕೆಲಭಾಗಗಳು, ಆಂಧ್ರದ ಕೆಲಭಾಗಗಳು ವಹಿವಾಟು ನಡೆಸಲು ಅನುಕೂಲವಾಗುತ್ತದೆ. ಬೆಂಗಳೂರಿನಲ್ಲೇ ವಲಯ ಕೇಂದ್ರ ಸ್ಥಾಪನೆಯಾದರೆ ಆಗ ಈಗಿನಂತೆ ಎಲ್ಲವನ್ನು ಮದ್ರಾಸಿಗೆ ಕೊಂಡೊಯ್ಯಬೇಕು. ದೇಶದ ಹಿತದೃಷ್ಟಿಯಿಂದ ಇದು ಲಾಭಕರವಲ್ಲ."

"ಕಾರವಾರ ಬಂದರು ಅಭಿವೃದ್ಧಿಯಾಗದೆ ಕರ್ನಾಟಕ ಅಭಿವೃದ್ಧಿ ಸಾಧ್ಯವಿಲ್ಲ. ಬೀದರಿನಿಂದ ಹಿಡಿದು ಹಾಸನ, ಮೈಸೂರು ಭಾಗದ ಪ್ರಗತಿಗೂ ಹುಬ್ಬಳ್ಳಿಯಲ್ಲಿ ವಲಯ ಸ್ಥಾಪಿಸುವುದು ಸೂಕ್ತ. ಗುಂತಕಲ್ಲಿನಿಂದ ಹುಬ್ಬಳ್ಳಿಗೆ ಸಮೀಪದ ದಾರಿ. ಇಲ್ಲಿ ಸಾಗಿ ಬರುವುದು ಬರೀ ಕರ್ನಾಟಕದಲ್ಲಿ. ಇದರಿಂದ ಕರ್ನಾಟಕದ ವ್ಯಾಪಾರ, ಕೈಗಾರಿಕೆ ಬೆಳೆಯಲು ಸಹಕಾರಿಯಾಗುತ್ತದೆ. ಹುಬ್ಬಳ್ಳಿಯಲ್ಲಿ ರೈಲ್ವೆ ವಲಯ ಸಮಗ್ರ, ಕರ್ನಾಟಕದಲ್ಲೇ ಹೆಚ್ಚು ಉದ್ಯೋಗ ಸೃಷ್ಟಿ ಮಾಡಲು ಕಾರಣವಾಗುತ್ತದೆ"

...ಹೀಗೆಯೇ ಹೇಳುತ್ತಾ ಹೋದರು. ಹುಬ್ಬಳ್ಳಿಯೇ ಹೇಗೆ ಸೂಕ್ತ ಎಂಬುದನ್ನು ಎಲ್ಲ ರಾಜಕಾರಣಿಗಳಿಗಿಂತ ಹೆಚ್ಚು ಸ್ಪಷ್ಟವಾಗಿ, ವಿವರವಾಗಿ ಸಮರ್ಥಿಸಿದರು.

ಶ್ರೀ ಕೆ.ಹೆಚ್. ರಂಗನಾಥ್ ಅವರು ಹೇಳಿ ಕೇಳಿ ಹಳೇ ಮೈಸೂರಿನ ಹಿರಿಯೂರಿನವರು. ಹುಬ್ಬಳ್ಳಿಯಲ್ಲಿ ರೈಲ್ವೆ ವಲಯ ಆಗಲೆಂದವರು. ತತ್ಕಾಲೀನ ರಾಜಕೀಯ ಲೆಕ್ಕಾಚಾರವಿಲ್ಲದ ಅವರ ಮುತ್ಸದ್ದಿತನಕ್ಕೆ ಇದು ಮತ್ತೊಂದು ಉದಾಹರಣೆ.

ಶೋಷಿತರ ಪರವಾದ ನಿಲುವೆಂದರೆ ಅದೊಂದು ಮಾನವೀಯ ಕ್ರಮ. ರಾಜಕಾರಣಿ ಹಾಗೂ ಪತ್ರಕರ್ತ ಈ ರೀತಿಯ ನಿಲುವು ತೆಗೆದುಕೊಳ್ಳುವುದು ತಪ್ಪಲ್ಲ. ಆದರೆ ಇದನ್ನೆ 'ಸೈಡ್ಸ್' ತೆಗೆದುಕೊಂಡ ಎಂದೂ ಆಕ್ಷೇಪಿಸುವವರೂ ಇದ್ದಾರೆ. ಆದರೆ ಸೈಡ್ಸ್ ತೆಗೆದುಕೊಂಡಾಗಲೂ ನಿಷ್ಠುರತೆ ಕಾಪಾಡಿಕೊಳ್ಳುವುದು ಬಹಳ ಮುಖ್ಯ. ಯಾರೇ ತಪ್ಪು ಮಾಡಿದರೂ ಅದು ತಪ್ಪೆಂದು ಹೇಳುವ ಹಿರಿತನವೂ ಮೈಗೂಡಿಕೊಂಡಿರಬೇಕು. ಶ್ರೀ ಕೆ.ಎಚ್. ರಂಗನಾಥ್ ಅವರಲ್ಲಿ ಅದಿದೆ. 'ಕಾನೂನು ಬದ್ಧ ನ್ಯಾಯಾಧೀಶ'ನಿಗಿಂತ 'ಮಾನವೀಯ ನ್ಯಾಯಾಧೀಶರು' ಹೆಚ್ಚು ನ್ಯಾಯಪರರು. ರಾಜಕಾರಣಿಯಿಂದಲೂ ಇಂತಹ ವ್ಯಕ್ತಿತ್ವ ಅಪೇಕ್ಷಣೀಯ. ನೊಂದವರ ಪರವಾದ ಕಳಕಳಿ ಅದರ ಜತೆಗೆ ಬಿಟ್ಟುಕೊಡದ ನಿಷ್ಠುರತೆ ಎರಡೂ ಮೇಳೈಸಿದರೆ ಹೇಗಿರಬೇಕೋ ಹಾಗಿದ್ದಾರೆ ರಂಗನಾಥ್.

*****





# ಸಾತ್ವಿಕ ತೇಜಸ್ಸಿನ ಅಸಾಧಾರಣ ವ್ಯಕ್ತಿತ್ವ

## ನಾಗತಿಹಳ್ಳಿ ರಮೇಶ್

ಶ್ರೀ ಕೆ.ಎಚ್. ರಂಗನಾಥ್‌ರದ್ದು ಅಸಾಧಾರಣ ವ್ಯಕ್ತಿತ್ವ. ಒಕ್ಕಲು ಮಕ್ಕಳಿಗೆ ಸಹಜವಾದ ಸರಳತೆಯೂ ಅವರಲ್ಲಿದೆ. ಇದ್ದದ್ದನ್ನು ಇದ್ದಂತೆ ಹೇಳುವ ಎದೆಗಾರಿಕೆಯೂ ಇದೆ. ಒಂದೊಂದು ಸಲ, ಅವರು ಆಡುವ ಮಾತು ಕೆಲವರಿಗೆ ಅಪ್ರಿಯುವೆನಿಸಬಹುದು. ನಮಗೆ ಅಸಂತೋಷವಾದೀತೆಂದು ಮನಸ್ಸಿನಲ್ಲಿರುವ ಆಶಯವನ್ನು ಮುಚ್ಚಿರಿಸಿ, ಅಸತ್ಯವನ್ನಾಡಿ ಸೀ ಸೀ ಮಾಡುವ ಕಪಟವಿದ್ಯೆ ಮಾತ್ರ ಅಪರಿಚಿತ. ಯಾರ ದಾಕ್ಷಿಣ್ಯಕ್ಕೂ ಕಟ್ಟುಬೀಳದೆ, ತಮಗೆ ಸರಿಯೆನಿಸಿದ್ದನ್ನು ಮಾಡಿಬಿಡುವ ನಿರ್ಧಾರದ ಸ್ವಭಾವವೂ ಅವರಲ್ಲಿದೆ. ಒಳ್ಳೆಯ ರಾಜಕಾರಣೆಯಲ್ಲಿ ಅಗತ್ಯವಾಗಿ ಇರಬೇಕಾದ ಗುಣಗಳಿವೆ ಎನಿಸುತ್ತದೆ.

ಶ್ರೀ ಕೆ.ಎಚ್. ರಂಗನಾಥ್ ಅವರಿಗೆ ಸಂದಿರುವ ಮಾನವತಾವಾದಿ ಎಂಬ ವಿಶೇಷಣ ಕೇವಲ ಗೌರವ ಸೂಚಕವಾದುದಲ್ಲ. ಅವರ ವಿಷಯಕ್ಕೆ ಅದು ಸತ್ಯವನ್ನೇ ಹೇಳುತ್ತದೆ. ಅವರು ವಾಸ್ತವವಾಗಿಯೂ "ಬುದ್ಧಪ್ರೇಮಿ". ನಮ್ಮ ಕಾಲದ ರಾಜಕಾರಣದಲ್ಲಿ ಕಾಣಿಸಿಕೊಂಡವರಲ್ಲಿ ಅವರು ದೊಡ್ಡ ವ್ಯಕ್ತಿಯಾಗಿದ್ದಾರೆ. ಪ್ರಸಕ್ತ ರಾಜಕಾರಣದಲ್ಲಿ ಶ್ರೀ ಕೆ.ಎಚ್. ರಂಗನಾಥ್ ಅಂಥವರಿಗೆ ಸಮನಾದವರು ಅವರೇ ಆಗಿದ್ದಾರೆ. ಇದು ನನ್ನ ವೈಯಕ್ತಿಕ ಅಭಿಪ್ರಾಯ. ಶ್ರೀ ಕೆ.ಎಚ್. ರಂಗನಾಥ್ ಅವರು ಏನಾಗಿದ್ದರು ಏನು ಮಾಡಿದರು ಎಂಬುದರ ಅರಿವು ಸ್ವಲ್ಪವಾದರೂ ಇರುವ ಅನೇಕ ಜನರ ಅಭಿಪ್ರಾಯ ನನ್ನದರೊಂದಿಗೆ ಹೊಂದಿಕೊಳ್ಳುತ್ತದೆ ಎಂಬುದು ನನ್ನ ನಂಬಿಕೆ.

ಶ್ರೀ ಕೆ.ಎಚ್. ರಂಗನಾಥ್ ಅವರ ಹೊರ ವ್ಯಕ್ತಿತ್ವವು ರಾಜಕೀಯದಲ್ಲಿ ಅತ್ಯಂತ ತೀವ್ರವಾದ ಆಸಕ್ತಿ ವಹಿಸಿ ಕೆಲಸ ಮಾಡುತ್ತಿದ್ದಾಗಲೂ ಅವರ ಅಂತರಂಗದ ವ್ಯಕ್ತಿತ್ವವು ರಾಜಕೀಯಕ್ಕೆ ಅಂಟದಂತೆ ಇದೆ ಎಂಬುದು ನನ್ನ ಭಾವನೆ. ರಾಜಕೀಯವನ್ನು ಪ್ರವೇಶಿಸುವ ವೇಳೆಗೆ ಅವರಾಗಿ ಆರಿಸಿಕೊಂಡಿದ್ದ ವಕೀಲಿ ವೃತ್ತಿಯಲ್ಲಿ ಅವರು ಯಶಸ್ಸನ್ನು ಗಳಿಸಿದ್ದರು. ಶ್ರೀ ಕೆ.ಎಚ್. ರಂಗನಾಥ್ ಅವರು ಕೇಡು, ಕಾರ್ಪಣ್ಯ, ಅನ್ಯಾಯಗಳು ಪೀಡಕರನ್ನು ಬಾಧಿಸುವಷ್ಟು ಪೀಡಿತರನ್ನಲ್ಲ ಎಂಬುದನ್ನು ಕಂಡುಕೊಂಡರೆನಿಸುತ್ತದೆ. ಆದುದರಿಂದ ಇಂಥಾ 'ಹಗೆ' ಗಳಿಗೆ ಮರುಗಿ ಒಲವು ತೋರಿದ್ದಾರೆನಿಸುತ್ತದೆ. ಮೂಲಭೂತವಾದ ಬದಲಾವಣೆಯನ್ನು ಮಾಡುವ ಸಲುವಾಗಿ ಅವರು ಅಹಿಂಸಾ ದಾರಿಯನ್ನು ಹಿಡಿದಿದ್ದಾರೆ. ಏಕೆಂದರೆ ಹಿಂಸೆ, ಹಿಂಸೆಗೊಳಗಾದವರನ್ನು ಘಾತಿಸುವುದಕ್ಕಿಂತ ಹೆಚ್ಚಾಗಿ, ಹಿಂಸಕನನ್ನೇ ಘಾತಿಸುತ್ತದೆ ಎಂಬ ಮಾನವೀಯ ನಿಲುವು ಅವರದು.

ಸಾಮಾಜಿಕ ಹಂತದಲ್ಲಿ ವ್ಯಕ್ತಿ ಮತ್ತು ಸಮಾಜದ ಉದ್ಧಾರಕ್ಕೆ ಕಾರಣವಾಗುವ ಸರ್ವ ಸಮಾನತೆಯ ಮಾರ್ಗವನ್ನು ಪ್ರತಿ ವಾದಿಸುವಲ್ಲಿ ಶ್ರೀ ಕೆ.ಎಚ್. ರಂಗನಾಥ್ ಅವರ ದಿಟ್ಟತನವನ್ನೂ, ವಿಚಾರ ಕ್ರಾಂತಿಯನ್ನು ಇಲ್ಲಿ ಗಮನಿಸಬೇಕು. ಮೊದಲಿನಿಂದಲೂ ನಮ್ಮಲ್ಲಿ ಬೆಳೆದು ಬಂದಿದ್ದ

ಸಾಮಾಜಿಕ ಏರು-ಪೇರುಗಳನ್ನು, ವಿಷಮತೆಯನ್ನು ರಂಗನಾಥರು ಅನುಭವಿಸಿದ್ದಾರೆ. ಮತ್ತು ಕಳಕಳಿಯಿಂದ ಗಮನಿಸಿದ್ದಾರೆ. ಧರ್ಮದ ಹೆಸರಿನಲ್ಲಿಯೇ ಸಮಾಜ ಹೋಳು ಹೋಳಾಗಿರುವುದನ್ನು, ಹುಟ್ಟಿನ ಕಾರಣವಾಗಿ ಜನಸಾಮಾನ್ಯರು ನೋವು ವಂಚನೆಗೆ ಒಳಗಾಗುವುದನ್ನು ಕಂಡು ಕೆರಳುವ, ವಿಷಾದಪಡುವ ಅವರು ಸರ್ವರ ಸಮಸ್ಯೆಗಳ ನಿವಾರಣೆ ನಮ್ಮ ಸಮಾಜದ ಸಾಮಾಜಿಕ ಜೀವನದ ಅಡಿಗಲ್ಲಾಗಬೇಕೆಂದು ಬಯಸುತ್ತಾರೆ.

ಪ್ರಜಾಸತ್ತೆ ನಮ್ಮ ಮಾರ್ಗ, ಸಮಾಜವಾದ ನಮ್ಮ ಗುರಿ. ಎಂದೇನೋ ನಾವು ಪ್ರತಿಜ್ಞೆ ಮಾಡಿದ್ದೇವೆ. ಇದು ಸಾಧ್ಯವಾಗುವುದಕ್ಕೆ ಅಗತ್ಯವಾದ ಮೂಲಭೂತ ಅವಶ್ಯಕತೆ ಯೊಂದರತ್ತ ಅವರು ನಮ್ಮ ಗಮನವನ್ನು ಸೆಳೆಯುತ್ತಾರೆ. ಅದೆಂದರೆ ಮೊದಲು ಎಲ್ಲರೂ ಅವರವರ ಹೃದಯಗಳನ್ನು ಶೋಧಿಸಿಕೊಳ್ಳಬೇಕು; ಭೇದ ಭಾವನೆಗಳ ಬೇರಿಗೆ ಬೆಂಕಿ ಹೊತ್ತಿಸಿ ಸಮಾನತೆಯನ್ನು ಸಾಧಿಸಿಕೊಳ್ಳಬೇಕು. ಸ್ವತಂತ್ರ ಭಾರತವು ಸರ್ವಸಮಾನತೆಯನ್ನೇ ಮಂತ್ರವಾಗಿ ಉಳ್ಳದ್ದು. ಸರ್ವರಿಗೂ ಸಮಬಾಳು ಎನ್ನುವುದೇ ಈ ನವಯುಗದ ವಾಣಿ. ಆದರೆ ಅದು ಯಾಂತ್ರಿಕವಲ್ಲದ ಮಾನವೀಯ ಮೌಲ್ಯಗಳನ್ನು ಆಧರಿಸಿದ ದೃಷ್ಟಿ. ಸಮಷ್ಟಿಗಳ ಸಮನ್ವಯ ಸ್ವಾತಂತ್ರ್ಯ. ಗಾಂಧೀಜಿಯವರು ಕೊಟ್ಟ 'ಸರ್ವೋದಯ' ಕಲ್ಪನೆ ಶ್ರೀ ಕೆ.ಎಚ್. ರಂಗನಾಥ್ ಅವರಿಗೆ ತುಂಬಾ ಪ್ರಿಯವಾದದ್ದು. ಅದನ್ನು ಮತ್ತೆ ಮತ್ತೆ ಪ್ರತಿಪಾದಿಸುತ್ತಾರೆ. ಅದು ಕೇವಲ ಯಾಂತ್ರಿಕವಾದ ದುಡಿಮೆ ಮತ್ತು ಸಂಪತ್ತಿನ ಹಂಚಿಕೆಯಲ್ಲ. ಅದು ವ್ಯಕ್ತಿ ಮತ್ತು ಸಮಾಜದ ಸರ್ವಾಂಗೀಣ ವಿಕಾಸ ಮತ್ತು ಆ ಮೂಲಕ ಅದರ ಉದ್ಧಾರ. ಇದನ್ನು ಸಾಧ್ಯ ಮಾಡಿಕೊಡುವಂಥ ವ್ಯವಸ್ಥೆಯ ಅಗತ್ಯವನ್ನು ಒತ್ತಿ ಹೇಳುತ್ತಾರೆ.

ಇಂದು ರಾಜಕೀಯ ಶಕ್ತಿ ನಮ್ಮ ಸಮಗ್ರ ಜೀವನವನ್ನು ವ್ಯಾಪಿಸಿದೆ. ಜೀವನದ ಎಲ್ಲ ಆಗುಹೋಗುಗಳು ಒಂದಲ್ಲ ಒಂದು ರೀತಿಯಲ್ಲಿ ರಾಜಕೀಯದೊಡನೆ ಸಂಬಂಧವನ್ನು ಪಡೆದಿವೆ. ಆದುದರಿಂದ ಅದನ್ನು 'last resort of a scoundrel' ಎಂದು ತಿರಸ್ಕರಿಸದೆ ಅಥವಾ ನಿರ್ಲಕ್ಷಿಸದೆ ಸರ್ವೋದಯ ತತ್ತ್ವದ ಆಧಾರದ ಮೇಲೆ ರೂಪುಗೊಳಿಸುವಂತಾಗ ಬೇಕೆಂಬುದು ಶ್ರೀ ಕೆ.ಎಚ್. ರಂಗನಾಥ್ ಅವರ ಆಶಯ.

ಶ್ರೀ ಕೆ.ಎಚ್. ರಂಗನಾಥ್ ಅವರ ಬಹುಮುಖ ಸಾಧನೆಯಲ್ಲಿ ಏಕಪ್ರಕಾರವಾದ ಒಂದು ವಿಕಾಸಶೀಲ ನಡತೆಯನ್ನು ಕಾಣುತ್ತೇವೆ. ತನ್ನ ಸುತ್ತಲಿನ ಪರಿಸರವನ್ನು ಮರೆಯದ 'ಬುದ್ಧಪ್ರಜ್ಞೆಯ'ಯ ನಿರ್ದೇಶನ ಅವರ ರಾಜಕೀಯ ಚಟುವಟಿಕೆಗಳ ತಳಹದಿ. ಜಾತಿ-ಮತ- ಧರ್ಮಗಳ ಕಟು ವಿಮರ್ಶೆಯ ತಿರಸ್ಕಾರದ ಸಂದರ್ಭದಲ್ಲಿಯೂ ಮಾನವೀಯ ಮೌಲ್ಯಗಳ ಪುರಸ್ಕಾರವನ್ನು ಮರೆಯುವುದಿಲ್ಲ. ವೈಯಕ್ತಿಕ ಇಷ್ಟಾನಿಷ್ಟಗಳಿಂದ ಕೂಡಿದ ನಿಂದೆಯ ಸಂಕುಚಿತತೆಗೆ ಇಳಿಯಲಿಲ್ಲ. ಯಾವ ಸಂದರ್ಭದಲ್ಲಿಯೂ ಅಲ್ಪತನವನ್ನು ಬಳಿಗೆ ಬರಗೊಡದ ಮಹೋನ್ನತ ತತ್ತ್ವನಿಷ್ಠೆ ಅವರದು.

ಶ್ರೀ ಕೆ.ಎಚ್. ರಂಗನಾಥ್ ಅವರು ವೈಯಕ್ತಿಕ ಆಸೆ, ಆಮಿಷಗಳಿಗೆ ಒಳಗಾಗದೆ, ಎಂದೂ ಯಾರಿಗೂ ತಲೆಬಾಗದೆ, ಸಾತ್ವಿಕ ತೇಜಸ್ಸಿನಿಂದ ನಡೆಯುವುದೇ ಮಾರ್ಗವೆಂಬಂತೆ ಬಾಳಿದರು; ಬಾಳುತ್ತಿದ್ದಾರೆ ಕೂಡ.

*****

# ರಾಜಿಗೆ ಎಂದೂ ಸಿದ್ಧರಿಲ್ಲ!

ಎನ್. ನರಸಿಂಹಮೂರ್ತಿ

ಧರಿಸುವ ಖಾದಿ ಶ್ವೇತ್ರವಸ್ತ್ರವು ಎಷ್ಟು ಪರಿಶುದ್ಧವೋ ಅಷ್ಟೇ ಪರಿಶುದ್ಧ ವ್ಯಕ್ತಿತ್ವ ರೂಪಿಸಿಕೊಂಡ ಮಹಾನ್ ಚೇತನ, ಶ್ರೀ ಕೆ.ಹೆಚ್. ರಂಗನಾಥ್. ಜೀವನದುದ್ದಕ್ಕೂ ಅದನ್ನೆ ಕಾಪಾಡಿಕೊಂಡವರು. ರಾಜಿಗೆ ಎಂದು ಸಿದ್ಧರಿಲ್ಲ; ಅವಕಾಶವೂ ಇಲ್ಲ. ಶಿಸ್ತುಬದ್ಧ, ಪ್ರಾಮಾಣಿಕ, ವಸ್ತುನಿಷ್ಠ, ರಾಜಕಾರಣ ಮೈಗೂಡಿಸಿಕೊಂಡಿದ್ದರಿಂದ ಅತ್ಯುನ್ನತ ಸ್ಥಾನಗಳಿಂದ ವಂಚಿತರಾಗಬೇಕಾಯಿತು. ಅದಕ್ಕಾಗಿ ವಿಷಾದವೂ ಇಲ್ಲ, ಬೇಸರವೂ ಇಲ್ಲ.

ತಲತಲಾಂತರದಿಂದ ನಿರ್ಲಕ್ಷ್ಯಕ್ಕೆ ಒಳಗಾದವರ ಬಗ್ಗೆ ಕಾಳಜಿ ತೋರಿ; ಅವರ ಒಳಿತಿಗಾಗಿ ಸದಾ ಕಾರ್ಯಮಗ್ನರಾದವರು. ಹರಿದ ಮಾಸಿದ ಬಟ್ಟೆಯ ಸಮಾಜದ ಕಟ್ಟಕಡೆಯ ವ್ಯಕ್ತಿಯ ಸಮಸ್ಯೆಗೆ ಮೊದಲ ಆದ್ಯತೆ. ತದನಂತರ ಉಳಿದವರ ಕಡೆ ಗಮನ. ವೈಯಕ್ತಿಕ ಸಮಸ್ಯೆಗಳಿಗಿಂತ ಸಾರ್ವತ್ರಿಕ ಸಮಸ್ಯೆಗಳ ಕಡೆ ಗಮನ, ಚಿಂತನೆ. ಜಾತೀಯತೆಗೆ ಅವಕಾಶವಿಲ್ಲ. ಮನುವಾದದ ಬಗ್ಗೆ ಅಕ್ರೋಶ ವ್ಯಕ್ತಪಡಿಸುವ ಇವರು, ಅದರಿಂದಾಗಿ ಶತ ಶತಮಾನಗಳಿಂದ ಬಹುಸಂಖ್ಯಾತ ವರ್ಗ ಅನಕ್ಷರತೆ, ಅಜ್ಞಾನಕೂಪದಲ್ಲಿ ಜೀವಿಸುವಂತಾಯಿತಲ್ಲ ಎಂಬ ಚಿಂತೆ. ಸಾರ್ವಜನಿಕ ಸಮಾರಂಭಗಳಲ್ಲಿ ಇದನ್ನೆ ಪ್ರಸ್ತಾಪವನ್ನು ಮಾಡುತ್ತಿರುತ್ತಾರೆ. ಬ್ರಾಹ್ಮಣ್ಯವನ್ನು ವಿರೋಧಿಸಿದರು; ಬ್ರಾಹ್ಮಣರ ಬಗ್ಗೆ ಪ್ರೀತಿ ಗೌರವವಿತ್ತು. ಅವರ ನಡೆನುಡಿಯ ಬಗ್ಗೆ ಮೆಚ್ಚುಗೆ, ಅನುಕರಣೀಯವೆಂಬ ಭಾವನೆ ಅವರಲ್ಲಿತ್ತು.

ಯಾರನ್ನಾದರೂ ಭೇಟಿ ಮಾಡಬೇಕಾದರೆ, ಮುಂಚಿತವಾಗಿಯೇ ಅವರೊಂದಿಗೆ ಸಮಯವನ್ನು ನಿಗದಿಮಾಡಿಕೊಂಡು ಖಚಿತಪಡಿಸಿಕೊಂಡು, ಅವರನ್ನು ಸಮಯಕ್ಕೆ ಸರಿಯಾಗಿ ಭೇಟಿ ಮಾಡುತ್ತಿದ್ದರು. ಭೇಟಿ ಮಾಡಬೇಕಾದ ವ್ಯಕ್ತಿಯೊಂದಿಗೆ ಚರ್ಚಿಸಬೇಕಾದ ವಿಷಯಗಳಿಗೆ ಪೂರ್ವ ಸಿದ್ಧತೆಯನ್ನು ಮಾಡಿಕೊಳ್ಳುವ ಪರಿಪಾಠ. ಇದೇ ರೀತಿ ಬೇರೆಯವರಿಂದಲೂ ನಿರೀಕ್ಷಿಸುತ್ತಿದ್ದರು. ಸಮಯ ಪಡೆಯದೆ ಬರುವವರು ಯಾರೇ ಎಷ್ಟೇ ದೊಡ್ಡವರಾದರೂ ಅವರೊಂದಿಗೆ ಚರ್ಚಿಸುತ್ತಿರಲಿಲ್ಲ.

ಇವರ ಮನೋಧರ್ಮವನ್ನು ಹಾಗೂ ಗುಣಸ್ವಭಾವಗಳನ್ನು ತಿಳಿದುಕೊಂಡಿರುವ ಇವರ ಕುಟುಂಬದ ಸದಸ್ಯರ್‍ಯಾರು ಸರ್ಕಾರದ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಿದವರಲ್ಲ. ಆತ್ಮೀಯ ಸ್ನೇಹಿತರಿರಬಹುದು, ಬಂಧು-ಬಳಗ ಇರಬಹುದು, ಎಲ್ಲರೊಂದಿಗೆ

ಆತ್ಮೀಯತೆಯಿಂದ ಚರ್ಚಿಸುತ್ತಾರೆ. ವಿದ್ವಾಂಸರು, ಬುದ್ಧಿಜೀವಿಗಳೊಂದಿಗೆ ಆಯಾಯಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಚರ್ಚಿಸುತ್ತಾರೆ. ವಿಶ್ವಾಸದಿಂದ ವರ್ತಿಸುತ್ತಾರೆ.

ಯಾರಿಗಾದರೂ ಸಹಾಯ ಮಾಡಬೇಕಾದರೆ, ಅದಕ್ಕೆ ಆ ವ್ಯಕ್ತಿ ಅರ್ಹನಿದ್ದಾನೆಯೇ ಎಂದು ಯೋಚಿಸಿ ತೀರ್ಮಾನಿಸುವುದು ಅವರ ಗುಣ. ಭಿಕ್ಷೆ ಪಡೆಯುವ ವ್ಯಕ್ತಿ, ಅರ್ಹನಿದ್ದರೆ ಮಾತ್ರ ಭಿಕ್ಷೆ ನೀಡಬೇಕು ಎಂಬುದು ಅವರ ಅಭಿಮತ.

ಚುನಾವಣಾ ಸಂದರ್ಭಗಳಲ್ಲಿ, ಚುನಾವಣೆಗಾಗಿ ಕೆಲವರು ಹಣ ಸಹಾಯ ಮಾಡಲು ಬಂದರೆ, ವಿನಯಪೂರ್ವಕವಾಗಿ ತಿರಸ್ಕರಿಸಿ ತಮ್ಮ ಶುಭಹಾರೈಕೆ ಇದ್ದರೆ ಸಾಕು ಎಂದು ತಿಳಿಸುತ್ತಿದರು. ಒಮ್ಮೆ 1978ರ ಚುನಾವಣೆಯಲ್ಲಿ ಹಿರಿಯೂರು ಕ್ಷೇತ್ರದಿಂದ ಸ್ಪರ್ಧಿಸಿದಾಗ ಅವರ ಆತ್ಮೀಯ ಸ್ನೇಹಿತರಾದ ಮೂಡಿಗೆರೆ ತಾಲ್ಲೂಕಿನ ಡಿ.ಎಂ. ಪುಟ್ಟೇಗೌಡರು ಚುನಾವಣಾ ವೆಚ್ಚಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಬ್ಲಾಂಕ್ ಬ್ಯಾಂಕ್ ಚೆಕ್ಕನ್ನು ಕೊಟ್ಟು ಹಣ ಬ್ಯಾಂಕಿನಲ್ಲಿ ಸಾಕಷ್ಟು ಇದೆ, ಯಾವುದೇ ಸಂಕೋಚವಿಲ್ಲದೆ ಎಷ್ಟು ಬೇಕಾದರು ಉಪಯೋಗಿಸಿಕೊಳ್ಳಬೇಕೆಂದು ವಿನಂತಿಸಿ ಹೋದರು. ಚುನಾವಣೆ ಮುಗಿದು ಜಯಶೀಲರಾದಾಗ ಅಭಿನಂದಿಸಲು ಬಂದ ಪುಟ್ಟೇಗೌಡರಿಗೆ ರಂಗನಾಥರು ಸೌಜನ್ಯದಿಂದಲೆ ಕೃತಜ್ಞತೆ ಅರ್ಪಿಸಿ ಅವರು ನೀಡಿದ್ದ ಚೆಕ್ಕನ್ನು ವಾಪಸ್ಸು ನೀಡಿದರು.

ಪ್ರಪಂಚದಲ್ಲಿ ಅತಿ ಹೆಚ್ಚು ಪುಸ್ತಕಗಳನ್ನು ಓದುವ ಅಭ್ಯಾಸ ಮಾಡಿರುವ ಮಹಾನ್ ಚೇತನ ಡಾ: ಬಿ.ಆರ್. ಅಂಬೇಡ್ಕರ್‌ರವರೆಂದು ಪ್ರಚಲಿತವಾಗಿದೆ. ಆದರೆ, ಸದಾ ಓದುವುದೆ ಮಾನ್ಯ ರಂಗನಾಥ್‌ಜೀಯವರ ಹವ್ಯಾಸ. ಸಾರ್ವಜನಿಕರೊಂದಿಗೆ ಮತ್ತು ಸ್ನೇಹಿತರೊಂದಿಗೆ ಸ್ವಲ್ಪ ಸಮಯವನ್ನು ಕಳೆದರೆ ಉಳಿದಂತೆ, ರಾತ್ರಿ 11.00 ಗಂಟೆ ಕೆಲವು ವೇಳೆ ಬೆಳಿಗ್ಗೆ 1.00 ಗಂಟೆವರೆಗೂ ಓದುವ ಪರಿಪಾಠವಿದೆ. ರಾತ್ರಿ ನಿದ್ದೆ ಬಾರದಿದ್ದರೆ ಪುಸ್ತಕಗಳಲ್ಲಿ ತಲ್ಲೀನರಾಗುತ್ತಿದ್ದರು ಎಲ್ಲಾ ಪ್ರಮುಖ ದಿನ ಪತ್ರಿಕೆಗಳನ್ನೂ, ಮ್ಯಾಗ್‌ಜೀನ್‌ಗಳ ಪ್ರತಿಯೊಂದು ಅಂಕಣವನ್ನು ಓದುವುದು ಇವರ ಹವ್ಯಾಸ. ಬಸವೇಶ್ವರ ವಚನಗಳು ತುಂಬಾ ಪ್ರಿಯ. ಡಾ: ಅಂಬೇಡ್ಕರ್, ಬಸವಣ್ಣ, ಗಾಂಧೀಜಿಯವರ ಬಗ್ಗೆ ಅಪಾರ ಪ್ರೀತಿ ಗೌರವ.

ಶಿಸ್ತು, ನಿಯಮಾವಳಿಗಳ ಬಗ್ಗೆ ನಿಷ್ಠೆಯಿದ್ದ ಅವರು ವಿಧಾನ ಸಭಾಧ್ಯಕ್ಷರಾಗಿದ್ದ ಸಂದರ್ಭ, ಸಭೆ ನಡೆಯುತ್ತಿತ್ತು. ಒಬ್ಬ ಸದಸ್ಯರು ಮಾತನಾಡುವಾಗ ಮತ್ತೊಬ್ಬ ಸದಸ್ಯರು ಅಡ್ಡ ನಡೆದರು. ಇದು ನಿಯಮಾವಳಿಗೆ ವಿರುದ್ಧವಾದದ್ದು. ಸಭಾಪೀಠದಲ್ಲಿ ರಂಗನಾಥರು ಕ್ರಾಸ್ ಮಾಡಿ ತಪ್ಪು ಮಾಡಿದ ಸದಸ್ಯರನ್ನು ಪ್ರಶ್ನಿಸಿದರು. ಅವರು ವಾಗ್ವಾದ ಮಾಡಲು ಪ್ರಾರಂಭಿಸಿದರು. ಇದರಿಂದ ಬೇಸತ್ತು ಕೊನೆಗೆ ತಾವು ಕುಳಿತ ಸಭಾಪೀಠದಿಂದಲೇ ದಿಢೀರ್ ಎದ್ದು ಹೊರನಡೆದರು. ಇಡೀ ಸಭೆ ತಬ್ಬಿಬ್ಬಾಯಿತು.

ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನಲ್ಲಿ ಸಭೆ ನಡೆಯುವಾಗ ಮೈಯೆಲ್ಲಾ ಕಣ್ಣು. ಪ್ರತಿ ನಿಮಿಷದಲ್ಲಿಯು ಅಲ್ಲಿ ಏನು ನಡೆಯುತ್ತಿದೆ ಎಂಬುದರ ವಿವರ ಪಡೆದು ತನ್ನ ಇಲಾಖೆಗೆ ಸಂಬಂಧಿಸಿದ ವಿಷಯಕ್ಕೆ ಸಿದ್ಧತೆ, ಸಕಾಲಕ್ಕೆ ಸಭೆಯಲ್ಲಿ ಹಾಜರು. ವಿಧಾನ ಸಭೆ, ವಿಧಾನ ಪರಿಷತ್‌ನ ಸಭೆಗಳಲ್ಲಿ ಪ್ರತಿಯೊಂದು ವಿಷಯದ ಚರ್ಚೆಗೆ ಪೂರ್ವಸಿದ್ಧತೆಯನ್ನು ಮಾಡಿಕೊಳ್ಳಲು ಅಧಿಕಾರಿಗಳೊಂದಿಗೆ ಚರ್ಚಿಸಿ ಸಿದ್ಧರಾಗುತ್ತಿದ್ದರು.

ಯಾರು ಯಾವುದೇ ವಿಷಯ ಕುರಿತು ಪ್ರಶ್ನೆ ಮಾಡಿದಾಗಲೂ ಅದಕ್ಕೆ ಸೂಕ್ತ ಉತ್ತರ. ರಂಗನಾಥ್ ಸಭೆಯಲ್ಲಿ ಮಾತನಾಡುತ್ತಿದ್ದರೆ ಉಳಿದ ಸದಸ್ಯರು ತುಂಬ ಗಂಭೀರವಾಗಿ ಆಲಿಸುತ್ತಿದ್ದರು. ಅವರ ಮಾತುಗಳೆಂದರೆ ತುಂಬ ಮಹತ್ವ, ತೂಕ. ಯಾವುದೇ ಸಮಸ್ಯೆಗೂ ಅವರಲ್ಲಿ ಪರಿಹಾರ, ಸರ್ವರೂ ಒಪ್ಪುವ ರೀತಿಯಲ್ಲಿರುತ್ತಿತ್ತು.

ಸಚಿವ ಸಂಪುಟದಲ್ಲಿ ರಂಗನಾಥ್‌ರಂತಹ 5 ಜನ ಸಚಿವರಿದ್ದರೆ ಸಾಕು, ಸರ್ಕಾರವನ್ನು ಉತ್ತಮವಾಗಿ ನಡೆಸಬಹುದೆಂದು ಮಾಜಿ ಮುಖ್ಯಮಂತ್ರಿಗಳು ಹಾಗೂ ರಂಗನಾಥ್‌ರ ಮಿತ್ರರೂ ಆದ ಮಾನ್ಯ ಎಸ್.ಎಂ. ಕೃಷ್ಣ, ತಮ್ಮ ಆಪ್ತರಲ್ಲಿ ಹೇಳಿಕೊಂಡಿರುವುದನ್ನು ನಾನು ಕೇಳಿಸಿಕೊಂಡಿದ್ದೇನೆ.

ರಂಗನಾಥರ ವಿಶೇಷ ಕಾರ್ಯದರ್ಶಿಯಾಗಿ ಬಹಳ ವರ್ಷಗಳ ಕಾಲ ಸೇವೆ ಸಲ್ಲಿಸಿದ ಎನ್. ನರಸಿಂಹಮೂರ್ತಿ ಅವರು ಬರೆದ ಲೇಖನವಿದು. ರಂಗನಾಥರನ್ನು ಹತ್ತಿರದಿಂದ ಕಂಡ ಅವರ ಅನುಭವಗಳ ದಾಖಲೆಯಿದು. ನರಸಿಂಹಮೂರ್ತಿ ಅವರಲ್ಲಿ ಇಂಥ ಅನುಭವಗಳ ನೂರಾರು ವಿಚಾರಗಳಿವೆ. ಅವುಗಳನ್ನು ಒಟ್ಟಿಗೆ ಸೇರಿಸಿದರೆ ಅದೇ ಒಂದು ಬೃಹತ್ ಗ್ರಂಥವಾಗಬಲ್ಲದು.



ನಾ ದೇವನಲ್ಲದೆ ನೀ ದೇವನೆ?
ನೀ ದೇವನಾದೊಡೆ ಎನ್ನನೇಕೆ ಸಲಹೆ?
ಆರೈದು ಒಂದು ಕುಡಿತೆ ಉದಕವನೆರೆದೆ,
ಹಸಿದಾಗ ಒಂದು ತುತ್ತು ಒಗರವನ್ನಿಕ್ಕುವೆ
ನಾ ದೇವ ಕಾಣಾ ಗುಹೇಶ್ವರಾ!






ಭಾರತ–ಸೋವಿಯತ್ ಸಾಂಸ್ಕೃತಿಕ ಸಂಘದ ಕಾರ್ಯಕ್ರಮವೊಂದರಲ್ಲಿ



ಶ್ರೀ ಹೆಚ್.ಡಿ. ದೇವೇಗೌಡ ಮತ್ತು ಶ್ರೀ ಆರ್. ಗುಂಡುರಾವ್ ಅವರೊಂದಿಗೆ







ಟರ್ಕಿ ದೇಶದ ಪ್ರವಾಸದಲ್ಲಿ ...



ಮಾಜಿ ರಾಜ್ಯಪಾಲರಾದ ಶ್ರೀ ವೆಂಕಟಸುಬ್ಬಯ್ಯ ಮತ್ತು
ಭಾರತ ಸರ್ಕಾರದ ಆರ್ಥಿಕ ಸಲಹಾ ಸಮಿತಿಯ ಮಾಜಿ ಅಧ್ಯಕ್ಷರಾದ
ಡಾ. ಸುಖಮಾಯ್ ಚಕ್ರವರ್ತಿ ಅವರ ಜೊತೆಯಲ್ಲಿ





ಅಂದಿನ ಕಾಂಗ್ರೆಸ್ ಅಧ್ಯಕ್ಷ ಶ್ರೀ ಡಿ.ಕೆ. ಬರೂವ ಜೊತೆ



ಮಾಜಿ ರಾಷ್ಟ್ರಪತಿ ಶ್ರೀ ಫಕ್ರುದ್ದೀನ್ ಆಲಿ ಅಹಮದ್ ಅವರೊಂದಿಗೆ







ಮಾಜಿ ರಾಜ್ಯಪಾಲ ಶ್ರೀ ಗೋವಿಂದನಾರಾಯಣ್ ಮತ್ತು
ಶ್ರೀ ಕೆ.ಎಚ್. ರಂಗನಾಥ್ ರಷ್ಯಾದ ನಿಯೋಗದೊಂದಿಗೆ




ವನ್ಯಜೀವಿ ಸಪ್ತಾಹ ಸಮಾರಂಭ : ವೈ.ಕೆ. ರಾಮಯ್ಯ, ಜಯಚಂದ್ರ
ಹಾಗೂ ರಾಜಣ್ಣ ಅವರೊಂದಿಗೆ





ರಾಹುಲ ಸಾಂಕೃತ್ಯಾಯರ 'ವೋಲ್ಗಾ–ಗಂಗಾ' ಕೃತಿ ಬಿಡುಗಡೆ ಸಮಾರಂಭದಲ್ಲಿ ಲೇಖಕ ಪ್ರೊ. ಕ.ವೆಂ. ರಾಜಗೋಪಾಲ ಮತ್ತಿತರರೊಂದಿಗೆ



ಅಂದಿನ ರಾಜ್ಯಪಾಲರಾದ ಶ್ರೀ ಗೋವಿಂದನಾರಾಯಣ್ ಮತ್ತು ಮುಖ್ಯಮಂತ್ರಿಯಾಗಿದ್ದ ಶ್ರೀ ದೇವರಾಜ ಅರಸು ಅವರೊಂದಿಗೆ







ವಿಶ್ವವಿಖ್ಯಾತ ಕಲಾವಿದ ಶ್ರೀ ರೋರಿಚ್‌ರೊಂದಿಗೆ ...



ಚಿತ್ರ ಕಲಾಪರಿಷತ್ತಿನ ಶ್ರೀ ನಂಜುಂಡರಾವ್ ಅವರೊಂದಿಗೆ





ಶ್ರೀ ಡಿ. ದೇವರಾಜ ಅರಸು ಮತ್ತು ಸಹೋದ್ಯೋಗಿ
ಶ್ರೀ ಹುಚ್ಚಮಾಸ್ತಿಗೌಡ ಅವರೊಂದಿಗೆ



ರಷ್ಯಾ ಪ್ರವಾಸದಲ್ಲಿ ...







ಅಂದಿನ ಕಾಂಗ್ರೆಸ್ ಅಧ್ಯಕ್ಷ ಶ್ರೀ ಶಂಕರದಯಾಳ್ ಶರ್ಮ ಮತ್ತು
ಕೇಂದ್ರ ಸಚಿವರಾಗಿದ್ದ ಶ್ರೀ ಬಾಬು ಜಗಜೀವನ್‌ರಾಮ್ ಅವರೊಂದಿಗೆ





ಮಾಜಿ ಮುಖ್ಯಮಂತ್ರಿ ಶ್ರೀ ಎಂ. ವೀರಪ್ಪಮೊಯ್ಲಿ ಮತ್ತು ರಂಗನಾಥ್





ರಷ್ಯಾದ ನಿಯೋಗ ಮತ್ತು ಶ್ರೀ ಗೋವಿಂದನಾರಾಯಣ್ ಜೊತೆ



ಬೆಂಗಳೂರು ವಿಶ್ವವಿದ್ಯಾನಿಲಯದ ಘಟಿಕೋತ್ಸದಲ್ಲಿ
ಉಪಕುಲಪತಿಗಳಾದ ಶ್ರೀ ಡಿ.ಎಂ. ನಂಜುಂಡಪ್ಪನವರಿಂದ ಗೌರವಾರ್ಪಣೆ



ಮಾಜಿ ರಾಷ್ಟ್ರಪತಿ ಶ್ರೀ ಶಂಕರದಯಾಳ್ ಶರ್ಮ, ಶ್ರೀಮತಿ ಇಂದಿರಾಗಾಂಧಿ
ಹಾಗೂ ಶ್ರೀ ಡಿ. ದೇವರಾಜ ಅರಸು



ಶ್ರೀ ವೀರಪ್ಪಮೊಯಿಲಿ ಅವರ ಸಚಿವ ಸಂಪುಟಕ್ಕೆ (1992) ರಾಜ್ಯಪಾಲ
ಶ್ರೀ ಖುರ್ಷಿದ್ ಆಲಂ ಖಾನ್ ಅವರಿಂದ ಪ್ರಮಾಣವಚನ ಸ್ವೀಕಾರ





ಗೌರವಾನ್ವಿತ ರಾಷ್ಟ್ರಪತಿಗಳಾಗಿದ್ದ ಶ್ರೀ ಶಂಕರದಯಾಳ್ ಶರ್ಮ
ಮತ್ತು ಅಂದಿನ ಮುಖ್ಯಮಂತ್ರಿ ಶ್ರೀ ವೀರೇಂದ್ರ ಪಾಟೀಲರೊಂದಿಗೆ



ಹಾಲಕ್ಕಿ ಒಕ್ಕಲ ಸೇವಾ ಸಮಾಜದ ಆಶ್ರಯದಲ್ಲಿ ನಡೆದ
ರೈತ ಕಾರ್ಮಿಕ ಸಮ್ಮೇಳನದಲ್ಲಿ ಮಾಜಿ ಕೇಂದ್ರ ಸಚಿವ
ಶ್ರೀ ಕೆ.ವಿ. ರಘುನಾಥ ರೆಡ್ಡಿಯವರೊಂದಿಗೆ



ವಿಧಾನಸಭೆಯ ಕಲಾಪದಲ್ಲಿ...



ಅಂದಿನ ರಾಜ್ಯಪಾಲರಾದ ಶ್ರೀಮತಿ ರಮಾದೇವಿ ಮತ್ತು
ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರೊಂದಿಗೆ





ಡಿ. ದೇವರಾಜ ಅರಸು ಸಂಪುಟಕ್ಕೆ ಮೊದಲ ಬಾರಿಗೆ (1973)
ಶ್ರೀ ಮೋಹನ್‌ಲಾಲ್ ಸುಖಾಡಿಯವರಿಂದ ಪ್ರಮಾಣವಚನ



ಅಂದಿನ ಪ್ರಧಾನಿ ಶ್ರೀ ಚರಣ್‌ಸಿಂಗ್ ಅವರೊಂದಿಗೆ







ಕಾರ್ಯಕ್ರಮವೊಂದರಲ್ಲಿ ಶ್ರೀ ದೇವರಾಜ ಅರಸು ಅವರೊಂದಿಗೆ



ಅರಣ್ಯ ಸಚಿವರಾಗಿ ...





ಶ್ರೀ ರಾಜೀವ್ ಗಾಂಧಿ ಅವರೊಂದಿಗೆ



ಅಂದಿನ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣರೊಂದಿಗೆ ಆಪ್ತ ಸಮಾಲೋಚನೆ







ನೀಲಂ ಸಂಜೀವರೆಡ್ಡಿ ಹಾಗೂ ವೆಂಕಟಸುಬ್ಬಯ್ಯ ಅವರೊಂದಿಗೆ ಕಾಂಗ್ರೆಸ್ ಹಿರಿಯ ಮುಖಂಡರಾದ ಪುಟ್ಟಸ್ವಾಮಿಗೌಡ, ಅಜೀಜ್ ಸೇಠ್, ವೀರೇಂದ್ರ ಪಾಟೀಲ್, ಬಸವಲಿಂಗಪ್ಪ ಮತ್ತಿತರರ ಅಪರೂಪದ ಚಿತ್ರ



ರಾಜ್ಯಪಾಲ ಗೋವಿಂದ ನಾರಾಯಣ್ ಅವರೊಂದಿಗೆ ಅರಸು ಮಂತ್ರಿ ಮಂಡಲ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ॥ ಸಂಧ್ಯಾರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ॥ ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ॥ ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನವೋಶಿ | ಡಾ॥ ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ॥ ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎಸ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ॥ ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀಜ್‌ಸಾಬ್ | ಮನು ಬಳಿಗಾರ್ | 30.00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |

| | | | |
|---|---|---|---|
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |

## *ಭಾಷಾಂತರ ಪುಸ್ತಕಗಳು*

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15.00 |